# ಚರಿತ್ರೆ ಲೇಖನಶಾಸ್ತ್ರ

## ಗುಲಬರ್ಗಾ ಪ್ರದೇಶದ ಅಧ್ಯಯನ

(ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಕಿರುಪ್ರಬಂಧ)


ಸಂಶೋಧಕ

ರಾಜಶೇಖರ

ಮಾರ್ಗದರ್ಶಕರು

ಡಾ. ಟಿ. ವಿಜಯ್ ಪೂಣಚ್ಚ

ಪ್ರಾಧ್ಯಾಪಕರು







ಚರಿತ್ರೆ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೯-೧೦

# ಚರಿತ್ರೆ ಲೇಖನಶಾಸ್ತ್ರ

## ಗುಲಬರ್ಗಾ ಪ್ರದೇಶದ ಅಧ್ಯಯನ

(ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಕಿರುಪ್ರಬಂಧ)


ಸಂಶೋಧಕ

ರಾಜಶೇಖರ

ಮಾರ್ಗದರ್ಶಕರು

ಡಾ. ಟಿ. ವಿಜಯ್ ಪೂಣಚ್ಚ

ಪ್ರಾಧ್ಯಾಪಕರು





ಚರಿತ್ರೆ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೯-೧೦

858A

## ಮಾರ್ಗದರ್ಶಕರ ದೃಢೀಕರಣ ಪತ್ರ

ಚರಿತ್ರೆ ಲೇಖನಶಾಸ್ತ್ರ : ಗುಲಬರ್ಗಾ ಪ್ರದೇಶದ ಅಧ್ಯಯನ ಎಂಬ ಈ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ರಾಜಶೇಖರ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಟಿ. ವಿಜಯ್ ಪೂಣಚ್ಚ
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ: 15.09.10.

## ಸಂಶೋಧಕರ ಪ್ರಮಾಣ ಪತ್ರ

**ಚರಿತ್ರೆ ಲೇಖನಶಾಸ್ತ್ರ : ಗುಲಬರ್ಗಾ ಪ್ರದೇಶದ ಅಧ್ಯಯನ** ಎಂಬ ಈ ಪ್ರಬಂಧವನ್ನು **ಡಾ.ಟಿ.ವಿಜಯ್ ಪೂಣಚ್ಚ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಸಮಾಜವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ರಾಜಶೇಖರ
ಸಂಶೋಧಕ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ: 15-09-2010

# ಪರಿವಿಡಿ

## ಅಧ್ಯಾಯ ೧

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಹಾಗೂ ವಿಧಾನ

ವಸಾಹತು ಸನ್ನಿವೇಶದಲ್ಲಿ ಬ್ರಿಟಿಷ್ ಹಾಗೂ ಪಾಶ್ಚಾತ್ಯ ಸೈದ್ಧಾಂತಿಕತೆಗಳಿಗೆ ಒಳಗಾದ ನಮ್ಮ ಮನೋಚಿಂತನೆಗಳು ಇಂದಿಗೂ ಅವುಗಳಿಂದ ಮುಕ್ತಗೊಂಡಿಲ್ಲ. ಸಾಮಾನ್ಯವಾಗಿ ಚರಿತ್ರೆಯನ್ನು ಅರಸು ಮನೆತನಗಳಿಗಷ್ಟೆ ಸೀಮಿತಗೊಳಿಸಿ ಅದೊಂದು ನಡೆದು ಹೋದ ಘಟನೆ ಎನ್ನುವ ತಿರ್ಮಾನವನ್ನು ಕೊಡುವ ಅಧ್ಯಯನಗಳ ಸಂಖ್ಯೆಯೇ ಹೆಚ್ಚಿನದು. ಈ ಬೃಹತ್ ಅರಸು ಮನೆತನ ಚರಿತ್ರೆ ನಿರ್ಮಾಣವು ರಾಜಕೀಯ ಚರಿತ್ರೆಗಷ್ಟೇ ಸೀಮಿತಗೊಂಡಿತು. ಇದರಿಂದಾಗಿ ಚರಿತ್ರೆ ಎಂಬುದು ರಾಜರ ಚರಿತ್ರೆ ಎಂಬ ಸಂಕುಚಿತ ಅರ್ಥ ಪಡೆಯಿತು. ಸಾಮ್ರಾಜ್ಯಶಾಹಿ ಹಾಗೂ ರಾಷ್ಟ್ರೀಯವಾದಿ ಚರಿತ್ರೆ ಬರವಣಿಗೆಗಳಲ್ಲಿ ಈ ಬಗೆಯ ಬರವಣಿಗೆಗಳು ಸರ್ವೇಸಾಮಾನ್ಯವಾಗಿರುವುದು ಗಮನಾರ್ಹವಾಗಿದೆ.

ಲಿಖಿತ ದಾಖಲೆಗಳೇ ಉತ್ಕೃಷ್ಟವಾದವು ಹಾಗೂ ಅಂತಿಮವಾದುದು ಎಂದು ಭಾವಿಸಿದ್ದ ಮುಖ್ಯವಾಹಿನಿಯ ಚರಿತ್ರೆ ರಚನಾಶಾಸ್ತ್ರವು ಮೌಖಿಕ ಪರಂಪರೆಯನ್ನು ಅಲಕ್ಷಿಸಿತು. ರಾಷ್ಟ್ರೀಯ ನೆಲೆಗಟ್ಟಿನಿಂದಲೇ ಚರಿತ್ರೆ ನೋಡಬೇಕೆನ್ನುವ ಬರವಣಿಗೆಯ ಮಾದರಿಯಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಚರಿತ್ರೆ ಬರವಣಿಗೆ ಮತ್ತು ವಿಶ್ಲೇಷಣೆಗೆ ಸಂಬಂಧಪಟ್ಟಂತೆ ಹಲವು ಪಂಥಗಳು ಹುಟ್ಟಿಕೊಂಡವು. ವಸಾಹತುಶಾಹಿ ಪಂಥ, ರಾಷ್ಟ್ರೀಯವಾದಿ, ಮಾರ್ಕ್ಸ್‌ವಾದಿ, ಸಬಾಲ್ಟರ್ನ್ ಪಂಥಗಳು ಇವುಗಳಲ್ಲಿ ಮುಖ್ಯವಾದವುಗಳು. ವಸಾಹತುಶಾಹಿಗಳ ನಿಲುವುಗಳನ್ನು ಎದುರಿಸಲು ರಾಷ್ಟ್ರೀಯವಾದಿ ಪಂಥ ಹುಟ್ಟಿಕೊಂಡಿತು. ಆದರೂ ಈ ಪಂಥದ ಚರಿತ್ರೆಕಾರರು ಸಾಮ್ರಾಜ್ಯಶಾಹಿ ಚರಿತ್ರೆಕಾರರ ಹಲವು ಅಂಶಗಳನ್ನು ತನ್ನ ಸಿದ್ಧಾಂತದೊಳಗೆ ಸೇರಿಸಿಕೊಂಡರು.

ರಾಷ್ಟ್ರೀಯವಾದಿ ಚರಿತ್ರೆಕಾರರು ಅರಸಕೇಂದ್ರಿತ, ಧರ್ಮಕೇಂದ್ರಿತ ಚಿಂತನೆಗಳಿಗೆ ಹೆಚ್ಚು ಮಹತ್ವಕೊಟ್ಟರು. ಮಾರ್ಕ್ಸ್‌ವಾದಿಗಳು ರಾಷ್ಟ್ರೀಯ ಚಿಂತನೆಗಳಿಗೆ ಭಿನ್ನವಾದ ರೀತಿಯಲ್ಲಿ ಚರಿತ್ರೆಯನ್ನು ವ್ಯಾಖ್ಯಾನಿಸಿದ್ದಾರೆ. ಉತ್ಪಾದನಾ ವಿಧಾನ ಚರಿತ್ರೆ ಬದಲಾವಣೆಗೆ ಕಾರಣವೆಂಬ ವಾದವನ್ನು ಮುಂದಿಟ್ಟರು. ಸಾಮಾಜಿಕ ಮತ್ತು ಆರ್ಥಿಕ ನೆಲೆಯಿಂದ ಚರಿತ್ರೆ ರಚಿಸುವ ಪ್ರಯತ್ನ ಮಾಡಿದರು. ಸಬಾಲ್ಟರ್ನ್ ಪಂಥವು ಕೆಳಸ್ತರದ ಚರಿತ್ರೆ ಎಂಬುದಾಗಿದೆ. ೧೯೮೦ರ ದಶಕದಿಂದ ಭಾರತದ ಚರಿತ್ರೆಯನ್ನು ರಚಿಸುವಲ್ಲಿ ಇದು ಪ್ರಭಾವಿಯಾದ ಬರವಣಿಗೆ ಕ್ರಮವಾಗಿದೆ. ಇಲ್ಲಿ ಜನಸಾಮಾನ್ಯರ ಸಾಮಾಜಿಕ ಸ್ಥಾನಮಾನ, ಆರ್ಥಿಕ ಪರಿಸ್ಥಿತಿ, ಅವರ ಸಂಸ್ಕೃತಿ ಕುರಿತು ವಿಶ್ಲೇಷಿಸಲಾಯಿತು. ಈ ದೃಷ್ಟಿಕೋನದಿಂದ ಚರಿತ್ರೆಯು ವಿವಿಧ ಆಯಾಮಗಳಲ್ಲಿ ಸ್ಥಳೀಯ ಚರಿತ್ರೆ, ರೈತರ ಚರಿತ್ರೆ, ಮಹಿಳಾ ಚರಿತ್ರೆ, ಕಾರ್ಮಿಕ ಚರಿತ್ರೆ, ದಲಿತ ಚರಿತ್ರೆ, ಮೌಖಿಕ ಚರಿತ್ರೆ, ಮೊದಲಾದ ಅಧ್ಯಯನಗಳು ಹೊರಬಂದವು. ಒಟ್ಟಿನಲ್ಲಿ ಗುಲಬರ್ಗಾ ಪ್ರದೇಶದ ಚರಿತ್ರೆಯಲ್ಲಿ ಕಂಡುಬರುವ ವಿವಿಧ ಆಯಾಮಗಳು, ವಿನ್ಯಾಸಗಳು, ಚರಿತ್ರೆ ಬರವಣಿಗೆ ಕ್ರಮಗಳನ್ನು ಗುರುತಿಸುವುದರ ಮುಖಾಂತರ ವಿವರಿಸಲು ಪ್ರಸ್ತುತ ನಿಬಂಧದಲ್ಲಿ ಪ್ರಯತ್ನಿಸಲಾಗಿದೆ.

### ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನವು ಗುಲಬರ್ಗಾ ಪ್ರದೇಶದ ಚರಿತ್ರೆ ಬರವಣಿಗೆಯ ಕ್ರಮಗಳನ್ನು ಅಭ್ಯಸಿಸುವ ಉದ್ದೇಶವನ್ನು ಹೊಂದಿದೆ. ಚರಿತ್ರೆಯಲ್ಲಿ ಬೃಹತ್ ರಾಜ್ಯಗಳನ್ನು ಕುರಿತಾಗಿ ಅಧ್ಯಯನ ಮಾಡುವುದರ ಜೊತೆ ಜೊತೆಗೆ ಸ್ಥಳೀಯ ಪ್ರದೇಶದ ಚರಿತ್ರೆಯನ್ನು ಗುರುತಿಸುವ ಮತ್ತು ಚರಿತ್ರೆ ಬರವಣಿಗೆಗಳ ಮಾದರಿಗಳನ್ನು ಅಭ್ಯಸಿಸುವ ಉದ್ದೇಶವನ್ನು ಹೊಂದಿದೆ. ಭಾರತ ಅಥವಾ ಕರ್ನಾಟಕ ಬೃಹತ್ ಚರಿತ್ರೆಗಳೊಳಗೆ ರಾಜಮನೆತನಗಳು ಆಳಿದ ಕ್ರಮಗಳ ಬಗ್ಗೆ ಸ್ಪಷ್ಟವಾದ ವಿವರಗಳಿರುವುದು. ಇವು ಕಳೆದುಹೋಗುವ ಅಪಾಯವನ್ನು ಇಲ್ಲಿ ಮೀರಲು ಪ್ರಯತ್ನಿಸಲಾಗಿದೆ. ಶಿಲಾಯುಗದ ಚರಿತ್ರೆ, ಸೂಕ್ಷ್ಮ ಶಿಲಾಯುಗ ಚರಿತ್ರೆ, ಕಬ್ಬಿಣ ಬೃಹತ್ ಶಿಲಾಯುಗದ ಚರಿತ್ರೆಯಂತಹ ಪ್ರಾಕ್ತಾನ ಶಾಸ್ತ್ರಕ್ಕೆ ಸಂಬಂಧಿಸಿದ ವಿವರಗಳಿಂದ ಹಿಡಿದು ವಸಾಹತುಕಾಲ ಮತ್ತು ನಿಜಾಮನ ಕಾಲೀನ, ಏಕೀಕರಣೋತ್ತರ ಕರ್ನಾಟಕ ಚರಿತ್ರೆಯವರೆಗೂ ಗುಲಬರ್ಗಾ ಪ್ರದೇಶಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ಒಂದಡೇ ತರಲು ಪ್ರಯತ್ನಿಸಲಾಗಿದೆ. ಇಂತಹ ಪ್ರಯತ್ನಗಳಲ್ಲಿ ಕಂಡುಬರುವ ಬರವಣಿಗೆ ಸೂಕ್ಷ್ಮವಾಗಿ ದಾಖಲು ಮಾಡುವ ಮತ್ತು ನೀಡಿರುವ ವಿವರಣೆಗಳನ್ನು ಒಂದೆಡೆ ಕಲೆ ಹಾಕಿ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನಿಸಲಾಗಿದೆ. ಸ್ಥಳೀಯ ಚರಿತ್ರೆಯು ಜನಪ್ರಿಯತೆ ಪಡೆಯುವುದರ ಜೊತೆಗೆ ಅನೇಕ ಬಗೆಯ ವಾದಗಳು ಮತ್ತು ಸಿದ್ಧಾಂತಗಳ ಮೂಲಕವೂ ಅಧ್ಯಯನ ಮಾಡುವ ಮಾದರಿಗಳಲ್ಲಿ ಸ್ಥಳೀಯ ಚರಿತ್ರೆ ಒಂದಾಗಿದೆ. ಪ್ರತಿಯೊಂದು ವಿಷಯಕ್ಕೂ, ಪ್ರದೇಶಕ್ಕೂ ವಸ್ತುವಿಗೂ ತನ್ನದೇ ಆದಂತಹ

ಚರಿತ್ರೆಯು ಹೊಂದಿರುತ್ತದೆ. ಇದನ್ನು ಸೂಕ್ಷ್ಮವಾಗಿ ಪರಿಶೀಲಿಸುವುದರ ಮುಖಾಂತರ ಉತ್ತಮ ಫಲಿತಾಂಶ ವ್ಯಕ್ತವಾಗುವುದಲ್ಲದೆ ಬೃಹತ್ ರಾಜ್ಯಗಳ ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ, ಹಾಗೇ ರಾಜಕೀಯ, ಚಟುವಟಿಕೆಗಳೊಂದಿಗೆ ಸಂಯೋಜನೆಗೊಂಡಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲೂ ಪ್ರಸ್ತುತ ಅಧ್ಯಯನ ಕೈಗೊಳ್ಳುವುದರ ಮುಖಾಂತರ 'ಸ್ಥಳೀಯ ಚರಿತ್ರೆ' ಎಂದೂ ಸ್ಥಳೀಯವಾಗಿಯೇ ಇರುವ ಮಿತಿಯನ್ನೂ ಹೊಂದುವ ಅಂಶವನ್ನು ಇಲ್ಲಿ ಮೀರಲು ಪ್ರಯತ್ನಿಸಲಾಗಿದೆ.

ಗುಲಬರ್ಗಾ ಪ್ರದೇಶ ಚರಿತ್ರೆ ಲೇಖನ ಶಾಸ್ತ್ರವನ್ನೂ ಅವಲೋಕಿಸುವಾಗ ಅನೇಕ ವಿದ್ವಾಂಸರು ಗುಲಬರ್ಗಾ ಪ್ರದೇಶದಲ್ಲಿರುವ ಚಾರಿತ್ರಿಕ ಅಂಶಗಳನ್ನು ಹಲವು ರೀತಿಯಲ್ಲಿ ಗುರುತಿಸಿದ್ದಾರೆ. ಪ್ರಸ್ತುತ ಅಧ್ಯಯನವು ಅಂತಹ ಚಾರಿತ್ರಿಕ ಕೃತಿಗಳನ್ನು ಅವಲೋಕಿಸುವುದರ ಮೂಲಕ ಚರಿತ್ರೆಯ ಬೆಳವಣಿಗೆಯನ್ನು ವಿವಿಧ ಮಜಲನ್ನು ಸೈದ್ಧಾಂತಿಕವಾಗಿ ವಿವರಿಸುವ ಕಿರು ಪ್ರಯತ್ನವನ್ನು ಮಾಡಲಾಗಿದೆ.

ಪ್ರಸ್ತುತ ಅಧ್ಯಯನವು ಐದು ಅಧ್ಯಯನಗಳನ್ನು ಒಳಗೊಂಡಿದ್ದು ಮೊದಲನೇ ಅಧ್ಯಾಯವು ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಚರಿತ್ರೆ ಲೇಖನ ಶಾಸ್ತ್ರದ ವಿವಿಧ ಆಯಾಮಗಳ ವಿಶ್ಲೇಷಣೆ ಮಾಡುವ ಉದ್ದೇಶವನ್ನು ಹೊಂದಿದೆ. ಅಧ್ಯಾಯ ಎರಡು ವಸಾಹತುಪೂರ್ವ ಕಾಲದ ಕೃತಿಗಳನ್ನು ಅವಲೋಕಿಸುತ್ತದೆ. ಅದರಲ್ಲಿ ಪ್ರಾಚೀನ ಕಾಲೀನ ಚರಿತ್ರೆ ಮತ್ತು ಮಧ್ಯಕಾಲೀನ ಚರಿತ್ರೆ ಎಂದು ಎರಡು ಭಾಗಗಳನ್ನಾಗಿ ವಿಂಗಡಿಸಲಾಗಿದೆ. ಮೂರನೆ ಅಧ್ಯಾಯವು ನಿಜಾಮನ ಕಾಲದ ಕೃತಿಗಳ ಅವಲೋಕನ ಮಾಡುತ್ತಿದೆ. ಇದರಲ್ಲಿ ನಿಜಾಮ ಕಾಲದ ಚರಿತ್ರೆ ಮತ್ತು ಸ್ವಾತಂತ್ರ್ಯ ಹೋರಾಟದ ಚರಿತ್ರೆ ಎಂದು ಎರಡು ಭಾಗಗಳನ್ನಾಗಿ ವಿಭಜಿಸಲಾಗಿದೆ. ಅಧ್ಯಾಯ ನಾಲ್ಕರಲ್ಲಿ ಕರ್ನಾಟಕ ಏಕೀಕರಣೋತ್ತರ ಘಟ್ಟದ ಬಗ್ಗೆ ಚರ್ಚಿಸಲಾಗಿದೆ. ಇದರಲ್ಲಿ ಏಕೀಕರಣ ಹೋರಾಟದ ಮಜಲುಗಳು, ಕೆಳವರ್ಗದ ಚರಿತ್ರೆ, ಮಹಿಳೆ ಚರಿತ್ರೆ, ರೈತರ ಮತ್ತು ಕಾರ್ಮಿಕರ ಚರಿತ್ರೆ, ಮೌಖಿಕ ಚರಿತ್ರೆ ಹೊಂದಿದೆ. ಗುಲಬರ್ಗಾ ಪ್ರದೇಶದ ಚರಿತ್ರೆಯಲ್ಲಿ ಪ್ರಾಚೀನ ಕಾಲದಿಂದ ಹಿಡಿದು ಪ್ರಸ್ತುತ ಸಂದರ್ಭದವರೆಗೆ ಚರಿತ್ರೆ ಬೆಳವಣಿಗೆಯಲ್ಲಿ ಸೈದ್ಧಾಂತಿಕ ದೃಷ್ಟಿಕೋನ ಹೊಂದಿರುವುದು. ಚರಿತ್ರೆ ಬರವಣಿಗೆ ಕ್ರಮದಲ್ಲಿ ವಿವಿಧ ಆಯಾಮಗಳು ವಿನ್ಯಾಸಗಳು ಗುರುತಿಸುವುದರ ಮುಖಾಂತ ವ್ಯಾಪ್ತಿಗೆ ಒಳಪಡಿಸಲಾಗಿದೆ.

## ಭೌಗೋಳಿಕ ಐತಿಹಾಸಿಕ ಹಿನ್ನಲೆ

ಭೌಗೋಳಿಕವಾಗಿ ಗುಲಬರ್ಗಾ ಜಿಲ್ಲೆಯು (ಯಾದಗಿರ ಸೇರಿದಂತೆ) ೧೦ ತಾಲೂಕುಗಳನ್ನು ಒಳಗೊಂಡಿದ್ದು,[೧] ಸಮತಟ್ಟಾದ ಪ್ರದೇಶವು ೭೬°೦೪ ಮತ್ತು ೭೭°೪೨ ಪೂರ್ವ ರೇಖಾಂಶ

ಹಾಗೂ ೧೬°೧೨ ಮತ್ತು ೧೭°೪೬ ಎತ್ತರ ಆಕ್ಷಾಂಶ ಇವುಗಳ ನಡುವೆ ಹರಡಿಕೊಂಡಿವೆ (ಪಾಟೀಲ ೧೯೯೭:೧). ಗುಲಬರ್ಗಾ ಜಿಲ್ಲೆಯು ೧೬.೨೨೪ ಚ.ಕಿ.ಮಿ. ವಿಸ್ತೀರ್ಣವನ್ನು ಹೊಂದಿದ್ದು, ಇದು ರಾಜ್ಯದ ಶೇ ೮.೪೬ ರಷ್ಟು ಪ್ರದೇಶವನ್ನು ಹೊಂದಿದೆ. ಜಿಲ್ಲೆವಾರು ವಿಸ್ತೀರ್ಣದಲ್ಲಿ ೨ ಸ್ಥಾನವನ್ನು ಹೊಂದಿದ್ದು, ೧೯೯೧ರ ಜನಗಣತಿ ಪ್ರಕಾರ ಒಟ್ಟು ಜನಸಂಖ್ಯಾ ೨೫,೮೨,೧೬೯ ಹೊಂದಿದೆ. ಇದರಲ್ಲಿ ಪುರುಷರು ೧೩,೧೬,೦೮೮ರಷ್ಟು, ಸ್ತ್ರೀಯರು ೧೨,೬೬,೦೮೧ ರಷ್ಟು ಹೊಂದಿದೆ. ಪುರುಷರ ಪ್ರಮಾಣ ಹೆಚ್ಚಿದ್ದು ೯೬೭ರಷ್ಟು ಲಿಂಗ ಪ್ರಮಾಣತೆಯನ್ನು ಹೊಂದಿದೆ. ನಗರವಾಸಿಗಳು ೬೦೯,೮೦೩ರಷ್ಟು, ಗ್ರಾಮೀಣವಾಸಿಗಳು ೧೯,೭೬,೩೬೬ರಷ್ಟು ಹೊಂದಿದ್ದು, ಗ್ರಾಮವಾಸಿಗಳ ಹೆಚ್ಚಾಗಿ ಕಂಡುಬರುತ್ತವೆ. ೩೮.೫೪ ಅಕ್ಷರಸ್ಥರು, ಸ್ತ್ರೀಯರು ೨೪.೪೯ ರಷ್ಟು ಪುರುಷರು ೫೨.೦೮ ಪ್ರಮಾಣತೆಯನ್ನು ಹೊಂದಿದ್ದು ಅಕ್ಷರಸ್ಥರ ಸಂಖ್ಯೆ ಇನ್ನುಳಿದ ಜಿಲ್ಲೆಗಳಿಗೆ ಹೋಲಿಸಿದರೆ ಅತಿ ಕಡಿಮೆ ಅಕ್ಷರಸ್ಥರ ಸಂಖ್ಯೆಯನ್ನು ಹೊಂದಿರುವುದು ಕಂಡುಕೊಳ್ಳಬಹುದಾಗಿದೆ (ಪಾಟೀಲ ೧೯೯೭:೨).

ಇಂಥಹ ಭೌಗೋಳಿಕ ವಿಸ್ತೀರ್ಣ ಹೊಂದಿದ ಗುಲಬರ್ಗಾ ಪ್ರದೇಶವು ಚಾರಿತ್ರಿಕವಾಗಿಯೂ ಸಹ ಬಹಳಷ್ಟು ಮಹತ್ವನ್ನು ಪಡೆದುಕೊಂಡಿದೆ. ಪ್ರಾಥಮಿಕ ಹಂತ ಶಿಲಾಯುಗದ ಕುರಿತಾಗಿ ಹಲವಾರು ಸಂಶೋಧಕರು ಶ್ರಮಿಸಿ ನೆಲೆಗಳು, ಪಳಯುಳಿಕೆಗಳು ಪತ್ತೆ ಹಚ್ಚಿದ್ದಾರೆ. ಇದರಿಂದಾಗಿ ಸನ್ನತಿ, ಶೋರಾಪುರ, ಜೇವರ್ಗಿ, ಆಂದೋಲ, ಹಗರಟಗಿಯಲ್ಲಿ ಮುಂತಾದ ಸ್ಥಳಗಳಲ್ಲಿ ಶಿಲಾಯುಗದ ಅನೇಕ ಅವಶೇಷಗಳು ದೊರೆತಿವೆ (ಪಾಟೀಲ ೧೯೯೭:೩೫). ಹಾಗೆಯೇ ಅನೇಕ ಅರಸುಮನೆತನ ಆಡಳಿತ ನಡೆಸಿವೆ ಮತ್ತು ವ್ಯಾಪ್ತಿಗಳ ಒಳಪಟ್ಟಿದೆ.

ಗುಲಬರ್ಗಾ ಪ್ರದೇಶದಲ್ಲಿ ಮೌರ್ಯರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದಕ್ಕೆ ಮೌರ್ಯರ ಅರಸನಾದ ಅಶೋಕನ ಶಾಸನಗಳು ಸನ್ನತಿಯಲ್ಲಿ ದೊರಕಿವೆ.[೨] ಇದರ ಮುಖಾಂತರ ಗುಲಬರ್ಗಾ ಪ್ರದೇಶದ ಇತಿಹಾಸ ಪ್ರಾರಂಭವಾಗುತ್ತದೆ. ಲಘು ಪ್ರಸ್ತದ ಶಾಸನಗಳು ಜೊತೆಗೆ ಇಟ್ಟಿಗೆಯ ಕಟ್ಟಡಗಳು ಮತ್ತು ಇಟ್ಟಿಗೆಯ ಬಲಿಷ್ಠ ಕೋಟೆಯ ನಗರವಾಗಿದ್ದುದು ತಿಳಿದುಬರುತ್ತದೆ. ಶಾತವಾಹನರ ಕಾಲಕ್ಕೆ ಇನ್ನಷ್ಟು ಮಾರ್ಪಾಟು ಹೊಂದಿ ಅಭಿವೃದ್ಧಿ ಹೊಂದಿತ್ತು. ಹೆಂಚು, ಇಟ್ಟಿಗೆ, ಆಟಿಕೆ, ಸುಟ್ಟ ಮಣ್ಣಿನ ಗೊಂಬೆಗಳು, ಕಪ್ಪೆಚಿಪ್ಪಿನ ಬಳೆಗಳು, ಶಂಖದ ಆಭರಣಗಳು, ಕಬ್ಬಿಣದ ಮೊಳೆಗಳು, ತಾಮ್ರದ ಉಂಗುರ, ಮುಂತಾದ ನಿತ್ಯ ಬಳಕೆಯ ವಸ್ತು, ಅವಶೇಷಗಳು ಇಲ್ಲಿವರೆಗೆ ಕಂಡುಬಂದಿವೆ (ತೆಲಗಾವಿ ೨೦೦೪:೯೧).

ಶಾತವಾಹನರ ಆಳ್ವಿಕೆಯು ಗುಲಬರ್ಗಾ ಪ್ರದೇಶವು ಹೊಂದಿತ್ತು ಎಂಬುದಕ್ಕೆ ಅನೇಕ ಸಂಶೋಧನೆಯು ನಡೆದು ಆಧಾರಗಳು ದೊರಕಿವೆ. ೧೯೯೦ನೇ ವರ್ಷದಲ್ಲಿ ಗುಲಬರ್ಗಾ

ಜಿಲ್ಲೆಯ ಇತಿಹಾಸ ಸಂಶೋಧನೆಯಲ್ಲಿ ಇವರ ಕಾಲದ ಬೌದ್ಧಸ್ತೂಪ, ಶಿಲ್ಪ ಹಾಗೂ ಶಾಸನಗಳು ದೊರತಿವೆ. ಹಾಗೆಯೇ ಇಟ್ಟಿಗೆಯ ರಕ್ಷಣಾ ಕೋಟೆ ಇದರೊಳಗೆ ನಗರವಿದ್ದ ಕುರುಹುಗಳಿವೆ. ಈ ರಕ್ಷಣಾ ಗೋಡೆಯ ಹೊರಗೆ ಭೌದ್ಧ ಸ್ತೂಪಗಳಿದ್ದವು. ಹಾಗೆಯೇ ತಾಮ್ರದ ನಾಣ್ಯದ ನಾಣ್ಯಗಳು ಅಲ್ಪ ಸ್ವಲ್ಪ ಮಡಿಕೆ ಚೂರುಗಳು ದೊರೆತಿವೆ. ಸುರಪುರ ತಾಲೂಕಿನ ಅಣಬಿಯಲ್ಲಿ, ಜೇವರ್ಗಿ ಹಸರಗುಂಡಗಿ, ಮುಂತಾದ ಸ್ಥಳಗಳಲ್ಲಿ ಶಾಸನ ಸಹಿತ ಸ್ಮಾರಕಗಳು ಶೋಧವಾಗಿವೆ. ನಾಲ್ಕು ಶಾಸನಗಳು ನೇರವಾಗಿ ಶಾತವಾಹನರಿಗೆ ಸಂಬಂಧಿಸಿದ್ದು ಪ್ರಸಿದ್ಧವಾದ ಗೌತಮಿಪುತ್ರ ಶಾತಕರ್ಣಿ ಮತ್ತು ವಸಿಷ್ಠ ಪುತ್ರ ಪುಳಮಾವಿ ಇವರನ್ನು ಉಲ್ಲೇಖಿಸುತ್ತವೆ. ಬಹುಶಃ ಈ ಪ್ರದೇಶವು ನೇರವಾಗಿ ಇವರ ಆಡಳಿತಕ್ಕೆ ಒಳಪಟ್ಟಿತ್ತೆಂದು ಕಾಣುತ್ತದೆ (ತೆಲಗಾವಿ ೨೦೦೪:೯೨). ಇಡೀ ಕರ್ನಾಟಕದಲ್ಲಿಯೇ ಶಾತವಾಹನ ಕಲೆ ಅದರಲ್ಲೂ ವಿಶೇಷವಾಗಿ ಭೌದ್ಧ ಪಂಥ ಕಲೆಗೆ ಅತಿ ಮಹತ್ವದ ಏಕೈಕ ಸ್ಥಳವೆಂದರೆ ಗುಲಬರ್ಗಾ ಪ್ರದೇಶದ ಸನ್ನತಿ (ಪಾಟೀಲ ೧೯೯೭:೪೩). ದಖ್ಖನಿನಲ್ಲಿ ಶಾತವಾಹನ ಆಳ್ವಿಕೆಯು ಸ್ವಲ್ಪ ಹೆಚ್ಚು ಕಡಿಮೆ ಎರಡನೆಯ ಶತಮಾನ ಕೊನೆ ಅಥವಾ ಮೂರನೆಯ ಶತಮಾನದ ಆರಂಭದಲ್ಲಿ ಕೊನೆಗೊಂಡಿತು. ಆನಂತರ ಶಾತವಾಹನ ಮಾಂಡಲೀಕರಾದ ಮಹಾರಥಿಗಳು ಗುಲಬರ್ಗಾ ಪ್ರದೇಶವು ಆಳ್ವಿಕೆಗೆ ಒಳಪಟ್ಟಿತ್ತು.

ಕದಂಬ ಅರಸನಾದ ರವಿವರ್ಮನ ವಿಜಯ ಯಾತ್ರೆ ಮತ್ತು ಬೇಡಿಕೆಹಾಳದ ತಾಮ್ರಪಟದ ವಿಷಯವನ್ನು ಗಮನಿಸಿದಾಗ ಇವರ ರಾಜ್ಯವು ಎತ್ತರದಲ್ಲಿ ಕೃಷ್ಣ ನದಿಯಿಂದ ಸ್ವಲ್ಪ ಉತ್ತರ ಭಾಗದವರೆಗೂ ವಿಸ್ತರಿಸಿದ್ದ ಸಾಧ್ಯತೆ ಇರುವುದರಿಂದ ಗುಲಬರ್ಗಾ ಪ್ರದೇಶವು ಮುಖ್ಯವಾಗಿ ದಕ್ಷಿಣ ಭಾಗವು ಇವರ ರಾಜ್ಯದಲ್ಲಿ ಇದ್ದು, ಆಡಳಿತಕ್ಕೆ ಒಳಪಟ್ಟಿತೆಂದು ತಿಳಿದುಬರುತ್ತದೆ. ಆದರೆ ಗುಲಬರ್ಗಾ ಪ್ರದೇಶದಲ್ಲಿ ಇವರ ಬಗ್ಗೆ ವಿಶಿಷ್ಟವಾದ ಯಾವುದೇ ಪುರಾತತ್ವ ಅವಶೇಷಗಳು ಇಂದಿನವರೆಗೂ ಬೆಳಕಿಗೆ ಬಂದಿಲ್ಲ. ನಂತರ ಕ್ರಿಶ ೭೫೭ರಲ್ಲಿ ಬಾದಾಮಿ ಚಾಲುಕ್ಯರ ಆಳ್ವಿಕೆಯನ್ನು ತೊರೆದು ಹಾಕುವುದರ ಮುಖಾಂತರ ರಾಷ್ಟ್ರಕೂಟರು ಸಾಮ್ರಾಜ್ಯವನ್ನು ಸ್ಥಾಪನೆ ಮಾಡಿದರು.[೩] ಗುಲಬರ್ಗಾ ಜಿಲ್ಲೆಯ ಸೇಡಂ ತಾಲೂಕಿನ ಮಳಖೇಡ ಅಥವಾ ಮಾನ್ಯಖೇಡವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆಯನ್ನು ನಡೆಸಿದರು. ರಾಷ್ಟ್ರಕೂಟ ಎಂಬುದು ಒಂದೇ ಕುಟುಂಬವಾಗಿರದೆ ಹಲವಾರು ಭಾಗಗಳಲ್ಲಿ ವಿವಿಧ ಹೆಸರುಗಳಿಂದ ವ್ಯಕ್ತವಾಗುತ್ತದೆ. ಮೊದಲು ರಾಷ್ಟ್ರಕೂಟವೆಂಬುದು ಅಧಿಕಾರ ಹುದ್ದೆಯಾಗಿದ್ದು ಕಾಲಕ್ರಮೇಣ ಒಂದು ಕುಟುಂಬದ ಹೆಸರಾಯಿತು. ಅಮೋಘವರ್ಷ ನೃಪತುಂಗನ ಕಾಲದಲ್ಲಿ ರಚಿತ ಕವಿರಾಜಮಾರ್ಗದಲ್ಲಿ ಕನ್ನಡ ದೇಶದ ವರ್ಣನೆ ಪ್ರಕಾರ ಕಾವೇರಿಯಿಂದ ಗೋದಾವರಿಯ ನಡುವೆ ಚಾಚಿಕೊಂಡಿರುವ ವಿಶಾಲ ಪ್ರದೇಶವನ್ನು ವ್ಯಾಪಿಸಿತ್ತು. ಅರಬ್ ಪ್ರವರ್ತಕ ಸುಲೆಮಾನನು ಅಮೋಘವರ್ಷನನ್ನು ಪ್ರಪಂಚದ ದೊಡ್ಡ ಸಾಮ್ರಾಟನೆಂದು ವರ್ಣಿಸಿದ್ದಾನೆ. ಕೊನೆಗೆ ಮುಮ್ಮಡಿ ಕೃಷ್ಣನು ಕ್ರಿ.ಶ.೯೬೭ರಲ್ಲಿ

ನಿಧನನಾದ ನಂತರ ರಾಷ್ಟ್ರಕೂಟರ ವಂಶದ ಆಳ್ವಿಕೆ ಪತನ ಪ್ರಾರಂಭವಾಯಿತು. ಪರಮಾರರಪ್ರಭು, ಸೀಯಕರು, ರಾಷ್ಟ್ರಕೂಟರ ಪ್ರಾಂತ್ಯದ ಮೇಲೆ ದಾಳಿ ಮಾಡಿ ಮಾನ್ಯಖೇಡವನ್ನು ಸೂರೆಗೊಂಡು ಸಾಮ್ರಾಜ್ಯದ ಮುಂದುವರಿಕೆಯ ಮೇಲೆ ಬೀಕರ ಪರಿಣಾಮವನ್ನುಂಟು ಮಾಡಿದನು. ಇಮ್ಮಡಿ ಕರ್ಕನ ನೇತೃತ್ವದ ದುರ್ಬಲ ಆಡಳಿತವು ಅಂತ್ಯಗೊಂಡಿತು (ಪಾಟೀಲ ೧೯೯೭:೪೪).

ಕಲ್ಯಾಣಿ ಚಾಲುಕ್ಯರು ಕ್ರಿ.ಶ ೯೭೩ರಲ್ಲಿ ಅಧಿಕಾರ ಆರಂಭಿಸಿದರು. ಎರಡನೇ ತೈಲಪನು ಮಾನ್ಯಖೇಡದಿಂದ ತನ್ನ ರಾಜಧಾನಿಯನ್ನು ಕಲ್ಯಾಣಕ್ಕೆ ವರ್ಗಾಯಿಸಿದನು "ಕಲ್ಯಾಣದಲ್ಲಿ ಕೋಟೆ ಕೊತ್ತಲಗಳನ್ನು ನಿರ್ಮಿಸಿ ಸೌಂದರ್ಯವನ್ನು ಹೆಚ್ಚಿಸಿದನು" (ಪಾಟೀಲ ೧೯೯೭:೪೭-೪೮) ಕಲ್ಯಾಣಿ ಚಾಲುಕ್ಯರ ಸಾಮ್ರಾಜ್ಯದ ಅನೇಕ ಕವಿಗಳು ಹೊಂದಿದ್ದು, ಹಾಗೂ ಪ್ರಸಿದ್ಧ ಕೃತಿಗಳು ರಚನೆಗೊಂಡವು ಕನ್ನಡ ಸಾಹಿತ್ಯಕ್ಕೆ ಅಮೋಘ ಕೊಡುಗೆ ಇವರ ಕಾಲದಲ್ಲಿ ಸಿಕ್ಕಿತ್ತು" (ನುಗಡೋಣಿ ೨೦೦೩:೧೦). ನಂತರ ಕ್ರಿ.ಶ ೧೧೫೬ರಲ್ಲಿ ಕಲ್ಯಾಣದ ಕಲಚೂರಿಗಳು ಇವರ ಆಳ್ವಿಕೆಯನ್ನು ಕೊನೆಗೊಳಿಸಿ ಈ ಪ್ರದೇಶವನ್ನು ಆಳ್ವಿಕೆಯನ್ನು ನಡೆಸಿದರು. ಬಿಜ್ಜಳನನ್ನು ಪ್ರಭಾವ ಅರಸನಾಗಿದ್ದು ಸಾಮ್ರಾಜ್ಯ ಉನ್ನತ ಸ್ಥಿತಿಗೆ ಕೊಂಡೊಯ್ದನು. ಈತನ ಭಂಡರಾಧಿಕಾರಿಯಾದ ಬಸವಣ್ಣನವರು ಅಂದಿನ ಸಮಾಜದಲ್ಲಿರುವಂತಹ ಆಚಾರ -ವಿಚಾರ, ಮೂಢನಂಬಿಕೆ ಜಾತಿ, ಮೇಲುಕೀಳು ಎಂಬ ಭಾವನೆ ಹೋಗಲಾಡಿಸಲು ಪ್ರಭಾವಿಯಾದ ಹೋರಾಟ ನಡೆಸಿದರು.

ದೇವಗಿರಿ ಯಾದವರು, ದ್ವಾರಸಮುದ್ರ ಹೊಯ್ಸಳರು, ವಾರಂಗಲಿನ ಕಾಕತೀಯರು ಅರಸರ ಸೀಮೆಯಾಗಿ ಮಾರ್ಪಟ್ಟಿತ್ತು. ಅದೇ ಸಂದರ್ಭದಲ್ಲಿ ದೆಹಲಿ ಸುಲ್ತಾನನಾಗಿದ್ದ ಮಹಮ್ಮದ್ ಬಿನ್-ತುಘಲಕನು ದಕ್ಷಿಣ ಭಾರತದ ಮೇಲೆ ದಾಳಿ ಮಾಡಿ ಕಾಕತೀಯರನ್ನು ಸೋಲಿಸಿ ಗುಲಬರ್ಗಾ ಪ್ರದೇಶವು ಸುಲ್ತಾನರ ಆಳ್ವಿಕೆಗೆ ಒಳಪಟ್ಟಿತ್ತು.

ಕ್ರಿ.ಶ. ೧೨೯೪ರಿಂದ ೧೩೪೭ರವರೆಗೆ ದೆಹಲಿ ಸಾಮ್ರಾಜ್ಯದ ಭಾಗವಾಗಿ ಮುಂದುವರೆಯಿತು. ಕ್ರಿ.ಶ. ೧೩೪೭ರಲ್ಲಿ ಅಲ್ಲಾವುದ್ದಿನ್ ಹಸನ್ ಹಾಗೂ ಬಹಮನ್‌ಶಾಹ ಬಹಮನಿ ರಾಜ್ಯ ಸ್ಥಾಪಿಸಿದಾಗ ಗುಲಬರ್ಗಾ ರಾಜಧಾನಿಯನ್ನಾಗಿ ಮಾಡಿಕೊಂಡು ೭೭ ವರ್ಷಗಳ ಕಾಲ ಅಂದರೆ ೧೪೨೪ರವರೆಗೂ ಬಹಮನಿ ಸಾಮ್ರಾಜ್ಯದ ರಾಜಧಾನಿಯಾಗಿ ಮೆರೆಯಿತು. ಮುಂದೆ ಬಹಮನಿ ರಾಜ್ಯ ಒಡೆದು ೫ ಶಾಹಿ ಮನೆತನಗಳಾಗಿ ಪರಿವರ್ತನೆಗೊಂಡಿತು. ಆಗ ಕೆಲ ವರ್ಷ ಬೀದರನ ಮತ್ತು ಬಿಜಾಪುರನ ಆಡಳಿತಕ್ಕೆ ಒಳಪಟ್ಟಿತ್ತು.

ಕ್ರಿ.ಶ ೧೬೪೫ರಲ್ಲಿ ದಖ್ಖನ್ನಿನ ರಾಜ್ಯಪಾಲನಾಗಿ ನೇಮಕಗೊಂಡ ಔರಂಗಜೇಬನು ಗುಲಬರ್ಗಾ ನಗರವನ್ನು ಆಕ್ರಮಿಸಿಕೊಂಡನು. ಬಿಜಾಪುರ, ಬೀದರ ಪ್ರದೇಶವನ್ನು ತನ್ನ ವಶಕ್ಕೆ

ತೆಗೆದುಕೊಳ್ಳವಷ್ಟರಲ್ಲಿಯೇ ಸುಲ್ತಾನನಾದ ಶಹಜಹಾನನು ಅನಾರೋಗ್ಯದ ನಿಮಿತ್ತ ದೆಹಲಿಗೆ ಹಿಂದಿರುಗಿದನು. ನಂತರ ಮೊಗಲ ಸಾಮ್ರಾಜ್ಯದ ಆಡಳಿತ ಸೂತ್ರ ವಹಿಸಿಕೊಂಡ ಔರಂಗಜೇಬನು ಬಹದ್ದೂರ್‌ಖಾನನನ್ನು ದಖ್ಖನ್ನಿನ ರಾಜ್ಯಪಾಲನನ್ನಾಗಿ ನೇಮಿಸುತ್ತಾನೆ. ಇವನು ಸಹ ರಾಜ್ಯ ವಿಸ್ತರಣಾ ನೀತಿಯನ್ನು ಕೈಗೊಂಡು ಕ್ರಿ.ಶ.೧೬೭೭ರಲ್ಲಿ ಗುಲಬರ್ಗಾವನ್ನು ತನ್ನ ವಶಕ್ಕೆ ತೆಗೆದುಕೊಳ್ಳುತ್ತಾನೆ. ಅಲ್ಲದೆ ಮೊಗಲ ಸಾಮ್ರಾಜ್ಯದ ಚಕ್ರವರ್ತಿಯಾದ ಔರಂಗಜೇಬನು ದಕ್ಷಿಣ ಭಾರತ ದಂಡಯಾತ್ರೆ ಕೈಗೊಂಡಾಗ ಗುಲಬರ್ಗಾ ಪ್ರದೇಶ ಸಂಪೂರ್ಣವಾಗಿ ಇವನ ಕೈವಶವಾಯಿತು. ಆದರೆ ಔರಂಗಜೇಬನ ಮರಣ ನಂತರ ಸಾಮ್ರಾಜ್ಯದಲ್ಲಿ ಅಂತಃಕಲಹಗಳು ಸಂಭವಿಸಿ ದಖ್ಖನ್ನಿನ ಸುಬೇದಾರನಾಗಿದ್ದ ಅಸಫ್ ಝಾ ದಕ್ಷಿಣ ಪ್ರಾಂತಾಧಿಕಾರಿಯಾಗಿ ಸ್ವತಂತ್ರನಾದನು. ಆ ಸಮಯದಲ್ಲಿ ಸುರಪುರ, ಶಹಪುರ, ಜೇವರ್ಗಿ ಭಾಗಗಳು ಸೇರಿ ಸುರಪುರದ ನಾಯಕರು ಆಡಳಿತದಲ್ಲಿ ಸ್ವತಂತ್ರ ಸಂಸ್ಥಾನವಾಗಿ ರೂಪು ತಾಳುತ್ತದೆ. ಗುಲಬರ್ಗಾದ ಉಳಿದ ಭಾಗಗಳು ನಿಜಾಮನ ಸಂಸ್ಥಾನಕ್ಕೆ ಸೇರಿತ್ತು.

ಹೈದರಾಬಾದಿನ ನಿಜಾಮನ ಆಳ್ವಿಕೆಗೆ ಒಳಪಟ್ಟ ಗುಲಬರ್ಗಾ ಪ್ರದೇಶವು ಇನ್ನುಳಿದ ಜಿಲ್ಲೆಗಳಂತೆ ಸ್ವತಂತ್ರ ಸಂಗ್ರಾಮದ ಕಿಡಿಯನ್ನು ಕಾಣಬರುವುದಿಲ್ಲ. ಆದರೂ ಸಹ ೧೮೫೭ರ ಸ್ವತಂತ್ರ ಸಂಗ್ರಾಮದಿಂದ ರಾಷ್ಟ್ರೀಯ ಪ್ರಜ್ಞೆಯನ್ನು ಬೆಳೆಸಿಕೊಳ್ಳಲು ಸಹಾಯಕವಾಯಿತು ಎಂದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ (ಪಾಟೀಲ ೧೯೯೭:೮೩). ೧೯೨೧-೨೨ರಲ್ಲಿ ಗುಲಬರ್ಗಾದಲ್ಲಿ ಕರಾಳ ಸ್ವರೂಪದ ಹಿಂದೂ-ಮುಸ್ಲಿಂ ದಂಗೆ ನಡೆಯಿತು. ಜನಾರ್ಧನ ದೇಸಾಯಿ ಅವರು ತಿಳಿಸಿರುವಂತೆ ನಗರದಲ್ಲಿರುವ ಗುಡಿಗಳು ಹಾಗೂ ಶರಣಬಸವೇಶ್ವರ ಗುಡಿಯನ್ನು ಕೆಡವಲು ಪ್ರಯತ್ನಗಳು ನಡೆದವು. ಹರಿಜನ ಪತ್ರಿಕೆಯಲ್ಲಿ ಗಾಂಧೀಜಿಯವರು "ಗುಲಬರ್ಗಾ ಗಾನ್ ಮ್ಯಾಡ್" ಎಂಬ ಲೇಖನ ಬರೆದು ಪ್ರಕಟಿಸಿದರು. ಇದು ಆ ಕಾಲದ ಪ್ರಮುಖ ಪ್ರಚೋದಕ ಘಟನೆಯಾಗಿತ್ತೆಂದು ಪಿ.ಬಿ. ದೇಸಾಯಿ ಅವರು ಹೇಳಿದ್ದಾರೆ. ಹಾಗೆಯೇ ಇದರಿಂದ ಇಲ್ಲಿನ ಪ್ರದೇಶದ ಜನರ ಮೇಲೆ ಬಹಳ ಪ್ರಭಾವ ಬೀರಿತ್ತು. ಅಲ್ಲದೆ ೧೯೨೭ರಲ್ಲಿ ಗಾಂಧೀಜಿಯವರು ಗುಲಬರ್ಗಾಕ್ಕೆ ಭೇಟಿ ನೀಡಿ ಶರಣಬಸವೇಶ್ವರ ದೇವಾಲಯ ಸಂದರ್ಶಿಸಿದರು. ಇವರ ಭೇಟಿ ಸ್ವಾತಂತ್ರ್ಯ ಚಳವಳಿಗಾರರ ಮನಸ್ಸಿನ ಮೇಲೆ ಆಗಾಧ ಪರಿಣಾಮ ಬೀರಿತು.

ಕರ್ನಾಟಕದ ಬೇರೆಡೆಗೆ ಸಂಭವಿಸಿದಂತೆ ಅಸಹಕಾರ ಚಳವಳಿ ಅಥವಾ ಕರಾನಿರಾಕರಣೆ ಚಳವಳಿ ಗುಲಬರ್ಗಾ ಪ್ರದೇಶದಲ್ಲಿ ಜರುಗಲಿಲ್ಲ. ಗುಲಬರ್ಗಾದಲ್ಲಿ ಖಾದಿ ಚಳವಳಿ ಹರಡಿತ್ತು. ಸ್ವತಂತ್ರ ಹೋರಾಟದ ಪ್ರಸಿದ್ಧ ನಾಯಕರಾಗಿದ್ದ ಹರ್ಡೇಕರ್ ಮಂಜಪ್ಪ ನವರು ಸಂಸ್ಥಾನದಲ್ಲೆಲ್ಲಾ ಸಂಚರಿಸಿ ತಮ್ಮ ಪ್ರಚೋದಿತ ಭಾಷಣದ ಮೂಲಕ ಜನಜಾಗೃತಿ ಮಾಡಿದರು. ಗುಲಬರ್ಗಾದ ಮಂಠಾಳದಲ್ಲಿ ಖಾದಿಭಂಡಾರವನ್ನು ಪ್ರಾರಂಭಿಸಿದರು. ಇಲ್ಲಿನ ನಿಜಾಮ ಸರಕಾರ 'ವಂದೇಮಾತರಂ'

ಹಾಡಲು ನಿರ್ಬಂಧ ಹೇರಿತು. ಇದರಿಂದ ಇದನ್ನು ಪ್ರತಿಭಟಿಸಿ ವಂದೇಮಾತರಂ ಚಳವಳಿಯನ್ನು ರಾಮಚಂದ್ರರಾವ್ ನೇತೃತ್ವದಲ್ಲಿ ಆರಂಭಗೊಂಡಿತು. ನಿಜಾಮನ ಮುಖೇನ ಸಂಸ್ಥಾನದ ಆಡಳಿತ ಮೇಲೆ ಹತೋಟಿಯನ್ನು ಇಟ್ಟುಕೊಂಡಿದ್ದರಿಂದ ಹೈದರಾಬಾದ್ ರಾಜ್ಯದಲ್ಲಿ ಸಾಮಾನ್ಯ ಜನತೆ ಯಾವುದೇ ಬಹಿರಂಗ ವಿರೋಧ ಮಾಡುವುದು ದುಸ್ಸಾಧ್ಯವಾಗಿತ್ತು.

ಏಕೀಕರಣ ಮತ್ತು ಏಕೀಕರಣೋತ್ತರ ಸಮಯದಲ್ಲಿ ದಲಿತರ, ಕೆಳವರ್ಗದ ಮಹಿಳಾ ರೈತರ, ಕಾರ್ಮಿಕರ ಚರಿತ್ರೆಗಳ ಕರ್ನಾಟಕ ರಾಜ್ಯ ವಿಲೀನಗೊಂಡು ಸರ್ಕಾರಗಳಲ್ಲಿ ಕಾನೂನುಗಳ ಅನ್ವಯದಲ್ಲಿ ಸ್ಥಳೀಯ ಸರಕಾರ ರಚನೆಗೊಂಡು ಆಡಳಿತ ಮುಂದುವರೆಯಿತು. ನಂತರ ಕಾಲದಲ್ಲಿ ಆಂತರಿಕವಾಗಿ ಹಲವು ಸಮಸ್ಯೆಗಳು ಕಂಡುಬಂದು ಪ್ರತಿಯೊಂದು ಸಮುದಾಯಗಳ ನಡುವೆ ಸಂಘಟನೆಗಳು ಬೆಳವಣಿಗೆಗೊಂಡವು ಮತ್ತು ಹೋರಾಟಗಳು ತೀವ್ರಗೊಂಡು, ಪ್ರಜಾಪ್ರಭುತ್ವದ ಹಿನ್ನೆಲೆಯಲ್ಲಿ ಸ್ವಾಭಿಮಾನ, ಸ್ವಾತಂತ್ರ್ಯಕ್ಕೆ ಆದ್ಯತೆ ನೀಡುವಂತಾಯಿತು. ಸಾಮಾನ್ಯವಾಗಿ ಇವೆಲ್ಲವುಗಳ ಚರಿತ್ರೆಗಳ ಒಂದೇ ರೀತಿಯ ಸಂಘರ್ಷಾತ್ಮಕವಾಗಿ ಕಂಡುಬಂದಿದೆ. ಈ ರೀತಿಯಾಗಿ ಗುಲಬರ್ಗಾ ಪ್ರದೇಶವು ಪೂರ್ವ ಇತಿಹಾಸದಿಂದ ಆಧುನಿಕ ಕಾಲದವರೆಗೆ ಮಹತ್ವವಾದ ಐತಿಹಾಸಿಕ ಹಿನ್ನೆಲೆ ಘಟನೆಗಳನ್ನು ಹೊಂದಿರುವುದನ್ನು ಕಾಣಬಹುದು.

ಹೈದರಾಬಾದ ಕರ್ನಾಟಕ ಪ್ರದೇಶದಲ್ಲಿ ನಿಜಾಮನ ಆಳ್ವಿಕೆಯನ್ನು ಹೊಂದಿದ್ದು ಇನ್ನುಳಿದ ಪ್ರದೇಶಗಳಂತೆ ಹೋರಾಟಗಳು ಕಂಡುಬರುವುದಿಲ್ಲ. ನಿಜಾಮನ ದಮನಕಾರಕ ನೀತಿಯಿಂದ ಮತ್ತು ರಜಾಕಾರ ಇಥೆಹಾದ್-ಉಲ್-ಇಸ್ಲಾಮ್ ಸಂಘಟನೆಯಿಂದ ಇಲ್ಲಿನ ಜನತೆಗೆ ಅತ್ಯಂತ ಕ್ರೂರವಾಗಿ ಹಿಂಸೆಯನ್ನು ನೀಡುತ್ತಿದ್ದರು. ಇದರ ವಿರುದ್ಧ ಹರ್ಡೇಕರ್ ಮಂಜಪ್ಪ, ಪಂಡಿತ್ ತಾರಾನಾಥರು, ರಮಾನಂದ ತೀರ್ಥರು, ಗುಲಬರ್ಗಾದ ಸರದಾರ ಶರಣಗೌಡ ಇನಾಮ್‌ದಾರ್, ಶಿವಮೂರ್ತಿಸ್ವಾಮಿ ಅಳವಂಡಿ, ಚಂದ್ರಶೇಖರ ಪಾಟೀಲ್ ಮಹಾಗಾಂವ, ಆಳಂದ್‌ನವಿ, ವಿ.ಪಾಟೀಲ್ ಶಿರೂರು ವೀರಭದ್ರಪ್ಪ. ಸುರಪುರದ ರಾಜವೆಂಕಟಪ್ಪನಾಯಕ, ಮುಂತಾದವರು ಹೋರಾಡಿದರು. ಇದರಿಂದಾಗಿ ಅಲ್ಲಿನ ಜನರ ಜೀವನ ಸ್ಥಿತಿಯನ್ನು ಸುಧಾರಿಸಲು ಪ್ರಯತ್ನಿಸಿದರು. ಸ್ವತಂತ್ರ ನಂತರ ದಲಿತ ಸಂಘಟನೆಗಳು, ರೈತರ ಸಮುದಾಯಗಳು, ರೈತರ ಹೋರಾಟ ಕಾರ್ಮಿಕ ಹೋರಾಟ, ಕೋಮುವಾದಿ, ಮಹಿಳೆ ಚರಿತ್ರೆ, ಬುಡಕಟ್ಟು ಜನರ ಒಳಗೊಂಡ ಚರಿತ್ರೆಯನ್ನು ರಚನೆಗೊಂಡವು.

ಈ ಅಧ್ಯಯನದಲ್ಲಿ ಸೂಗಯ್ಯ ಹಿರೇಮಠ ಅವರ ಸಂಪಾದಿತ 'ಶಹಾಪುರ ದರ್ಶನ' (೧೯೯೪), ಹನುಮಾಕ್ಷಿ ಗೋಗಿ ಅವರ ಸಂಪಾದನೆಯ 'ಕಲಬುರ್ಗಿ ಜಿಲ್ಲೆಯ ಶಾಸನಗಳು' (೧೯೯೬), 'ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್' (೧೯೯೭), ಬಿ. ಷೇಕ್ ಅಲಿಯವರ

'ಕರ್ನಾಟಕ ಚರಿತ್ರೆ ಸಂಪುಟಗಳು' (೧೯೯೭), ಸ್ವಾಮಿ ರಮಾನಂದ ತೀರ್ಥರ 'ಹೋರಾಟದ ನೆನಪುಗಳು' (೧೯೯೭), ಮುಡಬಿ ಗುಂಡಾರಾವ್ ಸೇಡಂ ಅವರ 'ತಾಲೂಕಿನ ಐತಿಹಾಸಿಕ ಸ್ಮಾರಕಗಳು' (೧೯೯೯), ಸಿ. ಮಹದೇವ್ ಅವರ 'ಕರ್ನಾಟಕ ಪುರಾತತ್ವ ಶೋಧ' (೨೦೦೦), ಗೋಪಾಲರಾವ ಹೇಜೀಬ್ ಅವರ 'ಹೈದರಾಬಾದ್ ಮುಕ್ತಿ ಸಂಘರ್ಷ' (೨೦೦೧), ಕೆ.ಬಿ.ಶಿವತಾರಕ್ ಅವರ 'ಕರ್ನಾಟಕ ಪುರಾತತ್ವ ನೆಲೆಗಳು' (೨೦೦೧), ಎಸ್. ಚಂದ್ರಶೇಖರ ಅವರ 'ಆಧುನಿಕ ಕರ್ನಾಟಕದ ಆಂದೋಲನಗಳು' (೨೦೦೨), ಅಮರೇಶ ನುಗಡೋಣಿ ಅವರ 'ಹೈದರಾಬಾದ್ ಕರ್ನಾಟಕ ಹಾಡುಪಾಡು' (೨೦೦೩), ಆರ್.ವಿ.ಭಂಡಾರಿ ಅವರ 'ವರ್ಣರಿಂದ ವರ್ಗದ ಕಡೆಗೆ' (೨೦೦೩), ಲಕ್ಷ್ಮಣ್ ತೆಲಗಾವಿ ಅವರ 'ಮೌರ್ಯ ಮತ್ತು ಶಾತವಾಹನ ಯುಗ' (೨೦೦೪), ಟಿ.ಎಂ. ಭಾಸ್ಕರ್ ಮತ್ತು ರಾಜಶೇಖರ ಹತಗುಂದಿ ಅವರು ಸಂಪಾದಿತ 'ಕಲಬುರ್ಗಿ ಜಿಲ್ಲೆ ದರ್ಶನ' (೨೦೦೫), ಆರ್.ಆರ್.ದಿವಾಕರ್ ಅವರ 'ಕರ್ನಾಟಕದ ಪರಂಪರೆ ಸಂಪುಟಗಳು' (೨೦೦೬), ಪಿ. ಮಹಾದೇವಯ್ಯನವರ 'ದಲಿತರು ಭಾಷೆ ಮತ್ತು ಸಮಾಜ' (೨೦೦೬), ಎಚ್.ಎಸ್. ಗೋಪಲರಾವ್ ಅವರ 'ನಮ್ಮ ನಾಡು ಕರ್ನಾಟಕ' (೨೦೦೭), ಜಿ. ವೆಂಕಟಸುಬ್ಬಯ್ಯ ಅವರು ಸಂಪಾದಿಸಿದ 'ಕರ್ನಾಟಕ ಏಕೀಕರಣದ ಅನುಭವಗಳು' (೨೦೦೭), 'ಕರ್ನಾಟಕ ಏಕೀಕರಣ ಇತಿಹಾಸ' (೨೦೦೮), ದ್ರುವನಾರಾಯಣ ಅವರ 'ಸುರಪುರ ಸಂಸ್ಥಾನದ ಇತಿಹಾಸ' (೨೦೦೮), ಬಿ.ಸಿ. ಮಹಾಬಲೇಶ್ವರಪ್ಪ ಅವರ 'ಹೈದರಾಬಾದ ಕರ್ನಾಟಕದಲ್ಲಿ ರಾಜಕೀಯ ಚಳವಳಿಗಳು ೧೯೪೬-೨೦೦೦' (೨೦೦೮), ಟಿ.ವಿ. ವೆಂಕಟಾಚಲಶಾಸ್ತ್ರಿ 'ನಮ್ಮ ಕರ್ನಾಟಕ' (೨೦೦೯), ಮುಂತಾದ ಕೃತಿಗಳು ಬಹುಮುಖಿ ದೃಷ್ಟಿಕೋನ ಹೊಂದಿದ್ದು ಈ ಮೇಲ್ಕಂಡಂತೆ ಅಧ್ಯಯನದ ಅವಲೋಕನಕ್ಕೆ ನೇರವಾಗಿ ಮತ್ತು ಗುಲಬರ್ಗಾ ಪ್ರದೇಶದ ಚರಿತ್ರೆಯನ್ನು ನಿರ್ವಹಿಸಲು ಸಾಧ್ಯವಾಗಿದೆ.

### ಅಧ್ಯಯನದ ವಿಧಾನ ಮತ್ತು ಸ್ವರೂಪ

ಗುಲಬರ್ಗಾ ಪ್ರದೇಶದ ಚರಿತ್ರೆಯನ್ನು ಅಧ್ಯಯನ ಮಾಡಿದ ಕೃತಿಗಳನ್ನು ಅವಲೋಕಿಸಿದಾಗ ಅವು ಪ್ರಾಚೀನ ಶಿಲಾಯುಗದಿಂದ ಹಿಡಿದು ಕ್ರಿ.ಶ.೨೦೦೯ರವರೆಗಿನ ವಿವಿಧ ಹಂತಗಳಲ್ಲಿ ಚರಿತ್ರೆಯನ್ನು ವಿಮರ್ಶಿಸಿದ ಬಗೆಗಳನ್ನು ಅಭ್ಯಸಿಸುವುದು ಪ್ರಸ್ತುತ ನಿಬಂಧದ ಉದ್ದೇಶವಾಗಿದೆ. ಇದಕ್ಕೆ ಸಂಬಂಧಿಸಿದಂತೆ ಹಲವಾರು ವಿದ್ವಾಂಸರು ಆಯಾ ಕಾಲಕ್ಕೆ ಸಂಬಂಧಿಸಿದಂತೆ ಬರೆದಿರುವ ಕೃತಿಗಳನ್ನು ಅವಲೋಕನ ಮಾಡುವುದರ ಮೂಲಕ ಸೈದ್ಧಾಂತಿಕವಾಗಿ ಚರಿತ್ರೆ ಲೇಖನಶಾಸ್ತ್ರವನ್ನು ವಿವರಿಸುವ ಪ್ರಯತ್ನ ಮಾಡಲಾಗಿದೆ.

ಗುಲಬರ್ಗಾ ಪ್ರದೇಶದ ಚರಿತ್ರೆ ಬೆಳವಣಿಗೆ ಸಂಬಂಧಿಸಿದ ಕೃತಿಗಳನ್ನು ಮೂರು ಭಾಗಗಳಲ್ಲಿ ಅಭ್ಯಸಿಸಲಾಗಿದೆ. ಬ್ರಿಟೀಷ್ ಮತ್ತು ಯುರೋಪಿಯನ್ನರು ರಚಿಸಿದ ಕೃತಿಗಳನ್ನು

ಮೊದಲನೆಯ ಭಾಗದಲ್ಲಿ, ರಾಷ್ಟ್ರೀಯವಾದಿ ಚರಿತ್ರೆಕಾರರು ರಚಿಸಿದ ಕೃತಿಗಳನ್ನು ಎರಡನೆಯ ಭಾಗದಲ್ಲಿ ಮತ್ತು ಆನಂತರ ಬಂದ ಕೃತಿಗಳನ್ನು ಮೂರನೇ ಭಾಗಗಳಲ್ಲಿ ಅಭ್ಯಸಿಸುವ ಪ್ರಯತ್ನವನ್ನು ಮಾಡಲಾಗಿದೆ.

ಗುಲಬರ್ಗಾ ಜಿಲ್ಲೆಯ ಕುರಿತು ನಡೆದಿರುವ ಅಧ್ಯಯನಗಳು, ರಚಿಸಿರುವ ಕೃತಿಗಳು ಸಂಶೋಧನ ಕೃತಿಗಳು ಸಮೀಕ್ಷಿಸುವ ಅವಲೋಕಿಸುವುದರ ಮುಖಾಂತರ ಅಧ್ಯಯನ ಕೈಗೊಳ್ಳಲಾಗಿದೆ. ಸರಕಾರದ ಗ್ಯಾಸೆಟಿಯರ್‌ಗಳು, ಪ್ರಕಟಿತ ಹಾಗೂ ಅಪ್ರಕಟಿತ ಸಂಶೋಧನಾ ಪ್ರಬಂಧಗಳ ಮಾಹಿತಿಯನ್ನು ಸಂಗ್ರಹಿಸಿ ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

**ಟಿಪ್ಪಣಿಗಳು**

೧. ಅಫಜಲಪುರ, ಆಳಂದ, ಚಿಂಚೋಳಿ, ಚಿತ್ತಾಪುರ, ಗುಲಬರ್ಗಾ, ಜೇವರ್ಗಿ, ಸೇಡಂ, ಶಹಾಪುರ, ಯಾದಗಿರಿ, ಸುರಪುರ.

೨. ಸನ್ನತಿ ನಿವೇಶನವಿರುವುದು ಗುಲಬರ್ಗಾ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನಲ್ಲಿ : ಕೃಷ್ಣ ನದಿಯ ಉಪನದಿಯಾದ ಭೀಮಾನದಿಯ ಎಡದಂಡೆಯ ಮೇಲೆ ಯಾದಗಿರಿಯ ವಾಯುವ್ಯಕ್ಕೆ ೪೦ ಕಿ.ಮೀ. ದೂರದಲ್ಲಿ, ಹೈದರಾಬಾದ್‌ನಿಂದ ನೈರುತ್ಯಕ್ಕೆ ೨೨೦ ಕಿ.ಮೀ. ಮತ್ತು ಚಿತ್ತಾಪುರ-ನಾಲ್ವಾರ್ ರೈಲು ನಿಲ್ದಾಣದಿಂದ ೨೦ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೭-೮ನೇ ಶತಮಾನಕ್ಕೆ ಸೇರಿದ ಚಂದ್ರಲಾಂಬಾ ದೇವಾಲಯದ ಪ್ರಯುಕ್ತ ಯಾತ್ರಾ ಸ್ಥಳವಾಗಿಯೂ ಗುರುತಿಸಲ್ಪಡುತ್ತದೆ.

೩. ರಾಷ್ಟ್ರಕೂಟರ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಆಕಾರಗಳಲ್ಲಿ ಶಿಲಾಲಿಪಿಗಳು, ತಾಮ್ರಪಟಗಳು, ವೀರಗಲ್ಲುಗಳು, ಎಲ್ಲೋರದ ಗುಹೆಗಳು, ಕನ್ಹೇರಿಯ ವಿಹಾರಗಳು ಮುಂತಾದ ದೇವಾಲಯಗಳು, ಕವಿರಾಜಮಾರ್ಗ, ಪಂಪಭಾರತ, ಕವಿರಹಸ್ಯ ಮುಂತಾದ ಗ್ರಂಥಗಳು, ಅಬು ಇಷ್ಟಕ್ ಅಲ್‌ಇಷ್ಟಾಖ್ರಿ, ಇಬ್ನ್‌ಹಾವ್ಕಲ್, ಆಲ್‌ಇದ್ರಿಸಿ, ಆಲ್‌ವಸೂದಿ, ಸುಲೈಮನ್ ಮುಂತಾದ ಪ್ರವಾಸಿಗರ ವರದಿಗಳು, ಸಮಕಾಲೀನ ಚಾಲುಕ್ಯ, ಚೋಳ, ಮುಂತಾದವರ ಶಿಲಾಶಾಸನಗಳು ಕಂಡುಬರುತ್ತವೆ.

೪. ಕನ್ನಡ ಸಾಹಿತ್ಯ ಸಾಕಷ್ಟು ಪ್ರಗತಿ ಹೊಂದಿತ್ತು. ಅನೇಕ ಕವಿಗಳು ಗದ್ಯ ಮತ್ತು ಪದ್ಯ ರೂಪವಾದ ಅನೇಕ ಕೃತಿಗಳನ್ನು ರಚಿಸಿದರು. ಇದಲ್ಲದೆ ಗದ್ಯಪದ್ಯಗಳ ಸಂಮಿಶ್ರಣ ರೂಪವಾದ ಚಂಪೂ ಶೈಲಿಯಲ್ಲಿಯೂ ಕೃತಿಗಳು ರಚನೆಯಾಗಿದ್ದವು.

ಅಧ್ಯಾಯ ಎರಡು

# ವಸಾಹತು ಪೂರ್ವ ಚಾರಿತ್ರಿಕ ಕೃತಿಗಳು

೨.೧. ಪ್ರಾಚೀನಕಾಲೀನ ಚರಿತ್ರೆ

೨.೨. ಮಧ್ಯಕಾಲೀನ ಚರಿತ್ರೆ

# ಅಧ್ಯಾಯ ೨

## ವಸಾಹತು ಪೂರ್ವ ಚಾರಿತ್ರಿಕ ಕೃತಿಗಳು

ಆಧುನಿಕ ಕಾಲದಲ್ಲಿ ಚರಿತ್ರೆ ಲೇಖನಶಾಸ್ತ್ರವು ಅತ್ಯಂತ ಗಮನ ಸೆಳೆದಿರುವುದನ್ನು ಕಾಣುತ್ತೇವೆ. ಚರಿತ್ರೆ ರಚನೆಯ ವಿವಿಧ ಆಯಾಮಗಳು ಅಥವಾ ದೃಷ್ಟಿಕೋನವನ್ನು ಗಮನಿಸುವುದರ ಮುಖಾಂತರ ಕೃತಿಗಳನ್ನು ಅವಲೋಕಿಸುವುದಾಗಿದೆ. ಇದರ ಮುಖಾಂತರ ಗುಲಬರ್ಗಾ ಪ್ರದೇಶ ಒಳಗೊಂಡ ಪ್ರಾಚೀನ ಕಾಲದಿಂದ ಪ್ರಸ್ತುತದವರೆಗೆ ಇತಿಹಾಸ ರಚನೆಗೊಂಡ ನೆಲೆಯನ್ನು ಸೂಕ್ಷ್ಮವಾಗಿ ಗಮನಿಸಲಾಗಿದೆ. ಕರ್ನಾಟಕ ಚರಿತ್ರೆ ಬರವಣಿಗೆಯಲ್ಲಿ ಗುಲಬರ್ಗಾ ಪ್ರದೇಶ ಕಾಣಿಸಿಕೊಳ್ಳುವುದೇ ಇಲ್ಲ. ಒಂದು ವೇಳೆ ಕಾಣಿಸಿಕೊಂಡರೂ ಅದರಲ್ಲಿ ಸಮರ್ಪಕವಾದ ಪ್ರತಿನಿಧಿಕರಣವಿಲ್ಲ. ಈ ಹಿನ್ನೆಲೆಯಲ್ಲಿ ಗುಲಬರ್ಗಾ ಪ್ರದೇಶದ ಸಂಬಂಧಪಟ್ಟ ವಿಷಯಗಳನ್ನು ಒಂದೆಡೆಗೆ ತರುವುದರ ಮೂಲಕ ಅಧ್ಯಯನ ಕೈಗೊಳ್ಳಲಾಗಿದೆ. ಇದರಲ್ಲಿ ಪ್ರಾಚೀನ ಮತ್ತು ಮಧ್ಯಕಾಲೀನ ಎಂದು ವಿಭಾಗಗಳಾಗಿ ಮಾಡಿಕೊಳ್ಳಲಾಗಿದೆ. ಪ್ರಾಚೀನ ಕಾಲದಲ್ಲಿ ಶಿಲಾಯುಗ, ಮೌರ್ಯರು, ಶಾತವಾಹನರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಲ್ಯಾಣದ ಕಲಚೂರಿಗಳು, ದೇವಗಿರಿಯ ಸೇವುಣರು ಒಳಗೊಂಡಿದೆ. ಮಧ್ಯಕಾಲೀನ ಹಂತದಲ್ಲಿ ವಿಜಯನಗರ ಸಾಮ್ರಾಜ್ಯ ಬಹಮನಿ ಸುಲ್ತಾನರರು, ಬಿಜಾಪುರದ ಆದಿಲ್‌ಶಾಹಿಗಳು, ಸುರಪುರದ ನಾಯಕರು, ಮೊಗಲರು ವಿಂಗಡಿಸಲಾಗಿದೆ. ಮುಂದೆ ನಿಜಾಮನಕಾಲೀನ ಮತ್ತು ಸ್ವಾತಂತ್ರ್ಯ ಹೋರಾಟ ಎಂದು ವಿಭಾಗಿಸಿಕೊಂಡು, ನಿಜಾಮನ ಕಾಲೀನ ಚರಿತ್ರೆ ಸಂಬಂಧಿಸಿದಂತೆ ನಿಜಾಮನ ಆಳ್ವಿಕೆ, ಇತ್ಥೆಹಾದ್ ಮುಸಲ್ಮೀನ್ ಮತ್ತು ಖಾಸಿಂ ರಜವಿ, ದೀನ್‌ದಾರ್ ಅಂಜುಮಾನ್ ಚೆನ್ನಬಸವೇಶ್ವರ ಕಿಬಿಲಿಪಂಥ, ಗುಲಬರ್ಗಾ ಜಿಲ್ಲೆಯಲ್ಲಿ ವಿಮೋಚನಾ ಚಳವಳಿ, ಆರ್ಯ ಸಮಾಜ, ಒಕ್ಕೂಟ ಸೇರಿ ಚಳವಳಿ, ಕಾನೂನುಭಂಗ ಚಳವಳಿ, ವಂದೇಮಾತರಂ ಚಳವಳಿ,

ಕ್ವಿಟ್ ಇಂಡಿಯಾ ಚಳವಳಿ ವಿಂಗಡಿಸಲಾಗಿದೆ. ನಂತರ ಏಕೀಕರಣ ಚಳವಳಿ, ದಲಿತ ಚರಿತ್ರೆ ಕೆಳವರ್ಗದ ಚರಿತ್ರೆ, ಮಹಿಳಾ ಚರಿತ್ರೆ, ಕಾರ್ಮಿಕರ ಚರಿತ್ರೆ, ಮೌಖಿಕ ಚರಿತ್ರೆ ವಿಂಗಡಿಸಿಕೊಳ್ಳುವುದರ ಮೂಲಕ ಅಭ್ಯಾಸಿಸಲಾಗಿದೆ.

**ಪ್ರಾಚೀನ ಚರಿತ್ರೆ**

ಗುಲಬರ್ಗಾ ಪ್ರದೇಶದ ಪ್ರಾಚೀನ ಚರಿತ್ರೆಯು ಶಿಲಾಯುಗದಿಂದ ಪ್ರಾರಂಭವಾಗಿದ್ದು, ಕರ್ನಾಟಕ ಇತಿಹಾಸದಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಮೌರ್ಯರಿಂದ ಮಧ್ಯಕಾಲದವರೆಗೆ ಅನೇಕ ಅರಸರು ಮತ್ತು ರಾಜಮನೆತನಗಳು ಆಳ್ವಿಕೆ ನಡೆಸಿವೆ. ಹಾಗೆಯೇ ರಾಜಕೀಯವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ತನ್ನದೇ ಆದಂತಹ ಕೊಡುಗೆಯನ್ನು ನೀಡಿದೆ.

ಶಿಲಾಯುಗದಿಂದ ಪ್ರಾರಂಭಗೊಂಡ ಗುಲಬರ್ಗಾ ಪ್ರದೇಶದ ಇತಿಹಾಸವು ಅನೇಕ ಸ್ಥಳಗಳಲ್ಲಿ ನೆಲೆಗಳನ್ನು ದೊರೆತಿವೆ. ಅವುಗಳಲ್ಲಿ ಹಳೆ ಶಿಲಾಯುಗದ, ಸೂಕ್ಷ್ಮ ಶಿಲಾಯುಗ, ನೂತನ ಶಿಲಾಯುಗವೆಂದು ವಿಭಾಗಿಸುವುದರ ಮುಖಾಂತರ ಅಭ್ಯಸಿಸಲಾಗಿದೆ. ಮೌರ್ಯರು, ಶಾತವಾಹನ ಆಳ್ವಿಕೆ ಹೊಂದಿದ್ದರ ಬಗ್ಗೆ ಅನೇಕ ಆಧಾರಗಳು ದೊರೆತಿವೆ. ಇದರ ಮುಖಾಂತರ ಗುಲಬರ್ಗಾ ಪ್ರದೇಶವು ಇವರ ಆಳ್ವಿಕೆ ಒಳಪಟ್ಟಿದ್ದನ್ನು ವಿಮರ್ಶಿಸಲಾಗಿದೆ. ನಂತರ ರಾಷ್ಟ್ರಕೂಟರು, ಬಾದಾಮಿ ಚಾಲುಕ್ಯರು, ಕಲ್ಯಾಣ ಚಾಲುಕ್ಯರು ನಡೆಸಿದ ಆಳ್ವಿಕೆಯ ವೈಶಿಷ್ಟ್ಯತೆಯನ್ನು ಅವಲೋಕಿಸಲಾಗಿದೆ.

**ಶಿಲಾಯುಗ**

ಗುಲಬರ್ಗಾ ಪ್ರದೇಶದಲ್ಲಿ ಶಿಲಾಯುಗಗಳ ಕುರಿತಂತೆ ಅನೇಕ ಸಂಶೋಧನೆಯನ್ನು ಕೈಗೊಂಡಿರುವುದರಿಂದ ನಿವೇಶನಗಳು ದೊರೆತಿವೆ. ಇದರಿಂದ ಅಂದಿನ ಪರಿಸ್ಥಿತಿಯನ್ನು ಈ ಪ್ರದೇಶವು ಮಾನವನ ಜೀವನಕ್ಕೆ ಯೋಗ್ಯವಾದ ಸ್ಥಳವಾಗಿದ್ದು, ಎಲ್ಲಾ ಸೌಕರ್ಯಗಳನ್ನು ಒಳಗೊಂಡಿತ್ತು ಎಂಬುದು ಸಾಮಾನ್ಯವಾಗಿ ನಿರ್ಣಯಕ್ಕೆ ಬರಬಹುದಾಗಿದೆ. ಇದರ ಮುಖಾಂತರ ಅಲ್ಲಿ ಮಾನವನ ನೆಲೆಯು ಬೆಳೆದು ಕಾಲಾನುಕ್ರಮದಲ್ಲಿ ವಿವಿಧತೆಯಿಂದ ಜೀವನ ನಡೆಸಲು ಪ್ರಾರಂಭಿಸಿದರು. ವಿಚಾರ ಶಕ್ತಿ ಬೆಳೆಯಲಾರಂಭಿಸಿತ್ತು. ಹಾಗೆಯೇ ಜೀವನ ಶೈಲಿಯಲ್ಲಿ ಭಿನ್ನತೆಯನ್ನು ಬರಲಾರಂಭಿಸಿತ್ತು. ಇಂತಹ ಸೂಕ್ಷ್ಮಗಳ ಬಗ್ಗೆ ಗಮನ ಹರಿಸಬೇಕಾದರೆ ಶಿಲಾಯುಗವನ್ನು ವಿಭಜಿಸುವುದರ ಮುಖಾಂತರ ಅದರ ಬಗ್ಗೆ ಅರ್ಥೈಸಿಕೊಳ್ಳಬಹುದಾಗಿದೆ.

೧. ಹಳೆ ಶಿಲಾಯುಗ

೨. ಮಧ್ಯ ಶಿಲಾಯುಗ

೩. ನೂತನ ಶಿಲಾಯುಗ

೪. ಸೂಕ್ಷ್ಮ ಶಿಲಾಯುಗ ಅಥವಾ ಲೋಹಯುಗ

೫. ಬೃಹತ್ ಕಬ್ಬಿಣ ಶಿಲಾಯುಗ ಎಂಬುದಾಗಿ ವಿಂಗಡಿಸಲಾಗಿದೆ.

ಹಳೆಯ ಶಿಲಾಯದ ಸಂಶೋಧನೆಯು ೧೯ನೇ ಶತಮಾನದಲ್ಲಿ ರಾಬರ್ಟ್ ಬ್ರೂಸ್ ಫೂಟ್' ಅವರು ಹಳೆಶಿಲಾಯುಗದ ಕೊಡಲಿಯನ್ನು ಪತ್ತೆ ಮಾಡಿದರು (ಪಾಟೀಲ ೧೯೯೭:೩೫). ಕರ್ನಲ್ ಮೆಂಡಸ್ ಟೇಲರ್ ಕಬ್ಬಿಣಯುಗದ ಬೃಹತ್ ಶಿಲಾಶಾಸನವನ್ನು ಸಂಶೋಧನೆಯನ್ನು ಕೈಗೊಂಡರು (ಸುಂದರ ೧೯೭೧:೪೮). ಗುಲಬರ್ಗಾದವರಾದ ಕಪಟರಾಳ ಕೃಷ್ಣರಾಯರು, ಕೆ. ಪದ್ದಯ್ಯನವರ ಸಂಶೋಧನೆಯ ಮೂಲಕ ಶಿಲಾಯುಗದ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ ಹಾಗೆಯೇ ಪಿ.ಬಿ.ದೇಸಾಯಿ, ಎಸ್. ಶೇಷಾದ್ರಿ, ಎಂ.ಎಸ್. ನಾಗರಾಜರಾವ್, ನಿರಂತರವಾಗಿ ಸಂಶೋಧನೆಯನ್ನು ಕೈಗೊಳ್ಳುವುದರ ಮುಖಾಂತರ ಶಿಲಾಯುಗದ ಬಗ್ಗೆ ವಿಪುಲವಾದಂತಹ ಮಾಹಿತಿಯನ್ನು ಹೊರಹಾಕಿದ್ದಾರೆ (ಪಾಟೀಲ ೧೯೯೭:೩೫). ಅಲ್ಲದೆ ಅವರ ಸಂಶೋಧನೆ ದಾಖಲೆಗಳ ವಿವರಗಳು ಶಿವತಾರಕ್‌ರವರ 'ಕರ್ನಾಟಕ ಪುರಾತತ್ವ ನೆಲೆಗಳು' (೨೦೦೧; ೧೬೩-೨೦೬) ಸಿ. ಮಹದೇವ ಅವರ 'ಕರ್ನಾಟಕ ಪುರಾತತ್ವ ಶೋಧ' (೨೦೦೦), ತೆಲಗಾವಿಯವರ 'ಮೌರ್ಯ ಮತ್ತು ಶಾತವಾಹನ ಯುಗ' (೨೦೦೪), ಸುಂದರರವರ ಕರ್ನಾಟಕ ಪ್ರಾಗೈತಿಹಾಸ (೧೯೭೧), ಷೇಕ್ ಅಲಿ ಅವರ ಕರ್ನಾಟಕ ಚರಿತ್ರೆ (೧೯೯೭), ಅ.ಸುಂದರರವರ ಕರ್ನಾಟಕ ಪ್ರಾಗೈತಿಹಾಸ (೧೯೭೧), ಶಿವರುದ್ರಸ್ವಾಮಿರವರ ಕರ್ನಾಟಕದ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ (೨೦೦೧), ಆರ್.ಆರ್.ದಿವಾಕರ್ ಅವರ ಕರ್ನಾಟಕದ ಪರಂಪರೆ (೨೦೦೬), ಮತ್ತು ಎಂ.ಎಚ್.ಕೃಷ್ಣ ಅವರ ಕರ್ನಾಟಕ ಪೂರ್ವ ಚರಿತ್ರೆ, ಎಂಬ ಕೃತಿಗಳಲ್ಲಿ ವಿವರಿಸಲ್ಪಟ್ಟಿದೆ. ಈ ಕೃತಿಗಳನ್ನು ಅವಲೋಕನ ಮಾಡುವ ಉದ್ದೇಶವನ್ನು ಪ್ರಸ್ತುತ ಅಧ್ಯಾಯವು ಹೊಂದಿದೆ.

### ಹಳೆಯ ಶಿಲಾಯುಗ

ಶಿಲಾಯುಗದ ಪ್ರಾರಂಭಿಕ ಹಂತವಾದ ಹಳೆ ಶಿಲಾಯುಗವು ಮಾನವ ಜೀವನ ಪ್ರಾಥಮಿಕ ಮೆಟ್ಟಿಲು ಎನ್ನಲಾಗಿದೆ. ಇದರ ಅಡಿಯಲ್ಲಿ ಗುಲಬರ್ಗಾ ಪ್ರದೇಶದ ವಿಮೋಚನೆಯನ್ನು ಚರಿತ್ರೆ ಅಧ್ಯಯನ ಮಾಡಲಾಗಿದೆ.

ಹಳೆ ಶಿಲಾಯುಗದ ಪುರಾವೆಗಳು ಹೆಚ್ಚಾಗಿ ನದಿಯ ದಡದಲ್ಲಿ ಕಂಡುಬಂದಿವೆ ಎಂದು ಹಬೀಬ್‌ರವರು ತಮ್ಮ ಕೃತಿಯಾದ 'ಪೂರ್ವೇತಿಹಾಸ' (೨೦೦೮) ಕೃತಿಯಲ್ಲಿ ನಮೂದಿಸಿದ್ದಾರೆ. ಇದಕ್ಕೆ ಸುಂದರ ಅವರು ಕೂಡ ತಮ್ಮ ಕೃತಿಯಲ್ಲಿ (೧೯೭೧) ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದನ್ನು ಗಮನಿಸಬಹುದು. ಭೀಮಾ-ಕೃಷ್ಣಾ ನದಿಗಳ ಸಂಗಮ ಪ್ರದೇಶದಲ್ಲಿಯ

ಗುಲಬಾಳ್ (ಸುರಪುರ ತಾಲೂಕು) ಎರಡು ನೆಲೆಗಳಲ್ಲಿ ಆದಿ ಹಳೆ ಶಿಲಾಯುಗದ ಉಪಕರಣಗಳು ದೊರಕಿವೆ. ಸುರಪುರ ತಾಲೂಕಿನ ಕೃಷ್ಣನದಿಯ ದಂಡೆಯ ಮೇಲೆ ಇರುವ ಎಡೆ ಹಳ್ಳಿಯಲ್ಲಿ ಆದಿಹಳೆಶಿಲಾಯುಗದ ಕಲ್ಲಿನ ಕೊಡಲಿ ಪತ್ತೆಯಾಗಿದೆ ಮತ್ತೆ ಹುಣಸಗಿಯಲ್ಲಿ ಆದಿ ಶಿಲಾಯುಗದ ಐದು ನೆಲೆಗಳು ೧೯೭೪ರಲ್ಲಿ ಕೆ. ಪದ್ದಯ್ಯನವರು ಪರಿಶೀಲಿಸಿದ್ದಾರೆ. ಸುರಪುರ ತಾಲೂಕಿನ ಅಣಗಿ ಮತ್ತು ಜೇವರ್ಗಿಯಲ್ಲಿ ಆದಿ ಹಳೆಶಿಲಾಯುಗದ ನೆಲೆಗಳು ಪತ್ತೆಯಾಗಿವೆ.

ಈ ಹಳೆ ಶಿಲಾಯುಗದಲ್ಲಿ ಕಲ್ಲಿನ ರೂಪುಗೊಂಡ ಅಸ್ತ್ರಗಳು ಮತ್ತು ಉಪಕರಣಗಳನ್ನು ಬಳಸುವುದರ ಮುಖಾಂತರ ಬೇಟೆಯನ್ನಾಡಿ ಜೀವನ ನಡೆಸುತ್ತಿದ್ದರು.[೧] ಈ ಮೇಲೆ ಕೈಗೊಂಡ ಸಂಶೋಧನೆಯಿಂದ ತಿಳಿದುಬರುತ್ತದೆ. ಇನ್ನಿತರ ಹಳೆಯ ಶಿಲಾಯುಗದ ನೆಲೆಗಳೆಂದರೆ ಕೊಡಲಗಿ (ಜೇವರ್ಗಿ), ಕಲ್ಲೂರು, ಸೊಂತಿ (ಚಿತ್ತಾಪುರ), ಯೆಡಿಹಳ್ಳಿ, ಯಾದಗೀರ್ (ಯಾದಗೀರ್), ಸಾದಬ, ಹುಣಸಗಿ, ಹೆಬ್ಬಾಳ (ಖುರ್ದ) ಸದಾಬಾದ್, ಯೆಡಿಹಳ್ಳಿ, ಯಡಿಯಾಪುರ, ಮುದನೂರು, ಬೆಹತ್ತಿ, ಬೈಚದಾಳ, ಮಲನೂರು, ತೆಗ್ಗಿಹಳ್ಳಿ ಬೆನಕನಹಳ್ಳಿ, ಅಗತೀರ್ಥ, ಚಿಕ್ಕಹೆಬ್ಬಾಳ, ಕಾಲ್ದೇವನಹಳ್ಳಿ, ಕಚಕನೂರು, ಚೆನ್ನೂರು, ಗುಲಬಾಳ, ಕುಪ್ಪಿ, ಇಸಮಪುರ, ಅರಿಕೇರಾ, ಬನಹಟ್ಟಿ, ದೇವಾಪುರ, ಫತೇಪುರ (ಶೋರಾಪುರ) ಮುಂತಾದ ಸ್ಥಳಗಳು ಪತ್ತೆಯಾಗಿವೆ.

ಈ ಮೇಲ್ಕಾಣಿಸಿದ ಹಳೆಶಿಲಾಯುಗದ ವಿಷಯಕ್ಕೆ ಸಂಬಂಧಪಟ್ಟಂತೆ ಕಾಮತ್ (೧೯೮೪:೧೪೫–೧೬೩), ಗೋಪಾಲರಾವ್ (೨೦೦೯:೧೯೭), ಎಂ.ಬಿ.ಪಾಟೀಲ್ (೧೯೯೭:೩೬), ಸುಂದರ (೧೯೭೧:೧೮–೫೦) ತಮ್ಮ ಕೃತಿಗಳಲ್ಲಿ ಮೇಲಿನ ವಿಷಯಗಳು ವ್ಯಕ್ತಪಡಿಸಿದ್ದು, ಗಮನಿಸಬಹುದು.

## ಮಧ್ಯ ಶಿಲಾಯುಗ

ಹಳೆ ಶಿಲಾಯುಗದ ನಂತರ ಮಧ್ಯ ಶಿಲಾಯುಗ ಬರುತ್ತದೆ. ಹಳೆಯ ಶಿಲಾಯುಗ ಜನರ ಜೀವನ ಪದ್ಧತಿ ಮತ್ತು ಮಧ್ಯ ಶಿಲಾಯುಗದ ಜನರ ಜೀವನ ಪದ್ಧತಿ ಸ್ವಲ್ಪ ಮಟ್ಟಿಗೆ ಬದಲಾವಣೆ ಹೊಂದಿರುವುದನ್ನು ಕಂಡುಬರುತ್ತವೆ. ಈ ಯುಗದ ಕಾಲದ ಬಗ್ಗೆ ತೆಲಗಾವಿಯುವರು ಮೌರ್ಯ ಮತ್ತು ಶಾತವಾಹನ ಯುಗ (೨೦೦೪: ೪–೫) ಕೃತಿಯಲ್ಲಿ ಚರ್ಚಿಸಿದ್ದಾರೆ. ಗೋಪಾಲರಾವ್ ಅವರು ಸಹ ನಮ್ಮ ನಾಡು ಕರ್ನಾಟಕ (೨೦೦೭:೩೪) ಕೃತಿಯಲ್ಲಿ ಯುಗಗಳ ವಿಭಜನೆಯನ್ನು ಮಾಡಿದ್ದಾರೆ.

ಈ ಯುಗದಲ್ಲಿ ವೇಗವಾಗಿ ಓಡುವ ಪ್ರಾಣಿಗಳನ್ನು ಬೇಟೆಯಾಡಲು ಬಿಲ್ಲುಬಾಣಗಳನ್ನು ಉಪಯೋಗಿಸುತ್ತಿದ್ದರು (ಸುಂದರ ೧೯೫೪:೪೨). ನದಿಯ ದಡದಿಂದ ದಡಕ್ಕೆ ಸೇರಲು ಬುಟ್ಟಿಯ ಆಕಾರದ ಕಿರು ದೋಣಿಯನ್ನು ಉಪಯೋಗಿಸುತ್ತಿದ್ದರೆಂದು ಊಹಿಸಲಾಗಿದೆ.

ಇಂಗಾಲ-೧೪ ವೈಜ್ಞಾನಿಕ ಕ್ರಮದಿಂದ ಕಾಲಮಾನವನ್ನು ಗೊತ್ತುಪಡಿಸಲಾಗಿದೆ. ಈ ಕಾಲಕ್ಕೆ ಸಂಬಂಧಪಟ್ಟ ಕಲ್ಲಿನ ಉಪಕರಣಗಳು ದೊರೆತಿವೆ. ಹಾಗರಗುಂಡಗಿ, (ಚಿತ್ತಾಪುರ) ಭೀಮನಹಳ್ಳಿ, ಸೊಂತಿಯಲ್ಲಿ ಸಂಸ್ಕೃತಿಯ ವಿವಿಧ ಉಪಕರಣಗಳು ದೊರೆತಿವೆ. ವಾಸ್ತವ್ಯವಿರುವಂತಹ ದಿಬ್ಬ ದೊರೆತಿರುವುದು ವಿಶೇಷ. ಮಳಖೇಡ ಹಾಗೂ ಭೀಮಾ ನದಿ ದಂಡೆ ಪ್ರದೇಶದಲ್ಲಿ ಸುಂದರ, ಎಸ್. ನಾಗರಾಜ ಅವರು ಮಧ್ಯ ಹಳೆ ಶಿಲಾಯುಗದ ಕಲ್ಲಿನ ಉಪಕರಣಗಳು ಶೋಧಿಸಿದ್ದಾರೆ. ಪಾಟೀಲ (೧೯೯೭:೩೫), ಸುಂದರ (೧೯೫೪:೫೬) ಕೃತಿಗಳಲ್ಲಿ ತಿಳಿಸಿದ್ದಾರೆ.

ಮಧ್ಯ ಹಳೆ ಶಿಲಾಯುಗದ ಸಂಸ್ಕೃತಿಗೆ ಸಂಬಂಧಪಟ್ಟ ನೆಲೆಗಳೆಂದರೆ, ಸೊಂತಿ, ಭೀಮನಹಳ್ಳಿ (ಚಿತ್ತಾಪುರ), ಹಾಗರಗುಂಡಗಿ (ಗುಲಬರ್ಗಾ), ಬಪ್ಪರಗಾ, ದೇವಾಪುರ, ಬೆನಕಹಳ್ಳಿ, ಬನಹಟ್ಟಿ, ಮೊರಲಭಾವಿ, ಮಟಕ ದೇವನಹಳ್ಳಿ, ಬೂಸುರ್ಗ್, ಮಲ್ಲೂರ್, ಬರ್ನೆಲ್, ಮುದನೂರು, ಮಸ್ಕನೇಲ್, ಜೋಗನಿಗುಡ್ಡ, ಗುಂಡಿಯ ನೂರ್, ಕೊಲ್ಲೂರು, ಇಸಮಪುರ, ಗುಂಡಲಗೇರಾ, ಚೆಹನೂರ್, ಗುಡಿಹಾಳ, ಗುಲಬಾಳ, ಕಾಲ್ದೇವನಹಳ್ಳಿ, ಅರಿಕೇರಾ, ಅಗತೀರ್ಥ, ಅಗ್ನಿ, ವಜ್ಜಾಳ, ಲಿಂಗದಳ್ಳಿ, ಹೆಬ್ಬಾಳ, ಹಗರಟಗಿ, ಹುರ್‌ಕಟ್ಟಿ, ಹುಣಸಗಿ[೨] (ಶೋರಾಪುರ), ಜೀವರ್ಗಿ, ಹೋತಿನ ಮಡು, ಚಿಗರಹಳ್ಳಿ(ಜೇವರ್ಗಿ) ಭೀಮರಸ್ತೆ ಸೇತುವೆ, ತುಮಕೂರು, ಸಿರ್ವಾಳ್, ಲಿಂಗೇರಾ, ಮಾಚನೂರು(ಶಹಪುರ) ಕೋಲೂರು, ಯಾದಗೀರ್ (ಯಾದಗೀರ್), ಕೊಂಕಣಹಳ್ಳಿ, ಅರೆಬೊಮ್ಮನಹಳ್ಳಿ(ಸೇಡಂ) ಕಂಡುಬಂದಿವೆ. ಈ ನೆಲೆಗಳ ಬಗ್ಗೆ ತೆಲಗಾವಿ (೨೦೦೪:೧೯) ಶಿವತಾರಕ್ (೨೦೦೧:೧೬೩-೨೦೬) ತಮ್ಮ ಕೃತಿಯಲ್ಲಿ ಹೆಸರುಗಳನ್ನು ನಮೂದಿಸಿದ್ದಾರೆ.

## ನೂತನ ಶಿಲಾಯುಗ

ಮಧ್ಯ ಶಿಲಾಯುಗದ ನಂತರ ನೂತನ ಶಿಲಾಯುಗ ಅಥವಾ ನವಶಿಲಾಯುಗವೆಂದು ಪರಿಗಣಿಸಲಾಗಿದೆ. ನೂತನ ಶಿಲಾಯುಗದ ಬಗ್ಗೆ ಸುಂದರ ಅವರು ಉಡಚಣ (ಅಫಜಲಪೂರ) ಉಡಸಗಿ (ಸುರಪುರ) ಕ್ರಮವಾಗಿ ಶಿಲಾ ತಾಮ್ರ ಯುಗದ ಹಂತದಲ್ಲಿಯ ನೂತನ ಶಿಲಾಯುಗದ ಜನ ವಾಸ್ತವ್ಯ ನೆಲೆಗಳನ್ನು ಗುರುತಿಸಿದ್ದಾರೆ. ಹಾಗೂ ಬೂದಿಹಾಳದಲ್ಲಿ ಎರಡು ಬೃಹತ್ ಬೂದಿ ಗುಡ್ಡಗಳು ಇರುವುದನ್ನು ೧೯೬೪ರಲ್ಲಿ ವರದಿ ಮಾಡಿದರು (ಷೇಕ್ ಅಲಿ ೧೯೯೭:೧೭೦). ಕೆ. ಪದ್ದಯ್ಯನವರು ಸುರಪುರ ಸಂಗಮ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಮಾಡುವಾಗ ರಕ್ಕೇರ್, ಕೊಡೇಕಲ್ ಇನ್ನೂ ಕೆಲವೆಡೆಗಳಲ್ಲಿ ಶಿಲಾ ತಾಮ್ರಯುಗ ಹಂತದ ನೂತನ ಶಿಲಾಯುಗದ ಸಂಸ್ಕೃತಿಗಳನ್ನು ಅಲ್ಲಲ್ಲಿ ಬೂದಿ ಗುಡ್ಡಗಳನ್ನು ಅಧ್ಯಯನ ಮಾಡಿದ್ದಾರೆ.[೩] ಹಾಗೆಯೇ ಕೊಡೇಕಲ್ಲಿನಲ್ಲಿ, ಬೂದಿಗುಡ್ಡೆಯಲ್ಲಿ ಸಣ್ಣ ಪ್ರಮಾಣದ ಉತ್ಖನನ ಮಾಡಿದರು ಎಂದು ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೩೫), ತೆಲಗಾವಿ (೨೦೦೪:೫), ಷೇಕ್ ಅಲಿ (೧೯೯೭:೧೯೭), ಗೋಪಾಲರಾವ್ (೨೦೦೭:೩೪), ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

ಈ ನೂತನ ಶಿಲಾಯುಗದ ಮಾನವನ ಸಂಸ್ಕೃತಿ ಕ್ರಾಂತಿಕಾರಕ ಬದಲಾವಣೆಯನ್ನು ಕಂಡು ಬರುತ್ತದೆ. ಇದು ಹೆಚ್ಚು ಅಭಿವೃದ್ಧಿ ಹೊಂದಿದ್ದು ವ್ಯವಸ್ಥಿತ ಸಮುದಾಯದತ್ತ ಸಾಗಿದ್ದರಿಂದ ಈ ಯುಗಕ್ಕೆ ನೂತನ ಶಿಲಾಯುಗವೆಂದು ಕರೆಯಲಾಗಿದೆ (ಪಾಟೀಲ ೧೯೯೭:೩೫), ಹಳೆ ಶಿಲಾಯುಗ ಹಾಗೂ ಮಧ್ಯ ಶಿಲಾಯುಗದ ಉಪಕರಣಗಳಿಗಿಂತ ಹೆಚ್ಚು ಪರಿಣಾಮಕಾರಿ ಯಾಗಿದ್ದವು ಈ ನವಶಿಲಾಯುಗದ ಉಪಕರಣಗಳು ಮಾನವ ಭೌತಿಕ ಜೀವನದಲ್ಲಿ ಬಹಳಮುಖ್ಯ ಬದಲಾವಣೆಯೊಂದಿಗೆ ಬಂದವು ಎಂದು ಹೆಸರಾಂತ ಪುರಾತತ್ವ ಶಾಸ್ತ್ರಜ್ಞ ಗೋರ್ಡಾನ್ ಚೈಲ್ಡ (೧೮೯೦-೧೯೫೭), ಹಬೀಬ (೨೦೦೮:೮೩) ತಮ್ಮ ಕೃತಿಗಳಲ್ಲಿ ಗುರುತಿಸಿದ್ದಾರೆ.

ಈ ಯುಗದಲ್ಲಿ ಮಾನವನು ಕೃಷಿ, ಪಶುಸಂಗೋಪನೆ, ಜೊತೆ ಬೇಟೆಯಾಡುವುದರ ಮುಖಾಂತರ ಜೀವನ ಸಾಗಿಸುತ್ತಿದ್ದರು. ಮೇಕೆಗಳು, ಡುಬ್ಬದ ಎತ್ತುಗಳು ಪಶುಸಂಗೋಪನೆ ಮಾಡುತ್ತಿದ್ದರು. ಬೇಟೆಯಾಡುವುದಕ್ಕೆ ಹಳೆ ಶಿಲಾಯುಗ ಮತ್ತು ಮಧ್ಯಶಿಲಾಯುಗ ಬಳಸುವ ಉಪಕರಣಗಳಿಗಿಂತ ಉಜ್ಜಿ, ನಯಗೊಳಿಸಿ ಕೆಲವೊಂದು ಉಪಕರಣಗಳು ಪರಿಷ್ಕರಿಸಿ ಬಳಸುತ್ತಿದ್ದರು. ಮೃತ್ ಪಾತ್ರೆಗಳು, ಕೊಡಲಿ, ಬಾಚಿ, ಉಳಿ, ಸುತ್ತಿಗೆ, ಕಂದು-ಕೆಂಪು ಬಣ್ಣದ ಮಡಕೆಗಳು ಮುಂತಾದ ಉಪಕರಣಗಳು ದೊರೆತಿವೆ ಸುಂದರ (೧೯೫೪:೫೧-೫೫), ಷೇಕ್ ಅಲಿ (೧೯೯೭:೧೫೫) ತಮ್ಮ ಕೃತಿಗಳಲ್ಲಿ ತಿಳಿಸಲಾಗಿದೆ.

ನೂತನ ಶಿಲಾಯುಗದ ಮಾನವರು ಒಂದು ಕಡೆ ನೆಲೆ ನಿಂತು ಮನೆ ಕಟ್ಟುವುದರ ಮುಖಾಂತರ ಸಮೂಹ ಜೀವಿಯಾಗಿ ಬದಕಲು ಪ್ರಾರಂಭಿಸಿದರು.' ಸತ್ತಮನುಷ್ಯನನ್ನು ಸುಡುವ ಮತ್ತು ಹೂಳುವ ಪದ್ಧತಿಯನ್ನು ಅಳವಡಿಸಿಕೊಂಡಿದ್ದರು. ಹುಳುವ ಮನುಷ್ಯನ ಜೊತೆ, ಆಭರಣ, ಶಂಖುವಿನ ಬಳೆಗಳು ಸಹ ಹೂಳಲಾಗುತ್ತಿತ್ತು. ಹಾಗೆಯೇ ಸುಟ್ಟ ಮನುಷ್ಯರ ಬೂದಿಯನ್ನು ಮಡಕೆಯಲ್ಲಿ ಸಂಗ್ರಹಿಸಿರುವುದು ಸಂಶೋಧನೆಯಿಂದ ತಿಳಿದುಬಂದಿದೆ. ಸುಂದರ (೧೯೫೪:೫೬-೫೭), ಷೇಕ್ ಅಲಿ (೧೯೯೭:೧೬೫-೧೬೬), ಹಬೀಬರು (೨೦೦೮:೮೩) ಇವರ ಕೃತಿಗಳಲ್ಲಿ ಉಲ್ಲೇಖಿಸಿದ್ದಾರೆ.

ಕೊಡೇಕಲ್ ಮತ್ತು ಬೂದಿಹಾಳ್ ನಿವೇಶನಗಳ ಉತ್ಖನನಗಳಿಂದ ನೂತನ ಶಿಲಾಯುಗದ ಜೀವನ ಶೈಲಿಯ ಮೇಲೆ ನಿರೂಪಿಸಿದಂತೆ ನೀರಿನ ಹಳ್ಳಗಳ ದಂಡೆಗಳ ಮೇಲೆ ವೃತ್ತಾಕಾರದ ಗುಡಿಸಲು ಕಟ್ಟಿ ವಾಸಿಸುತ್ತಿದ್ದರು. ತ್ರಿಕೋನಾಕೃತಿಯ ಎರಡು ಬದಿಗಳಲ್ಲಿ ಸ್ವಲ್ಪ ಉಬ್ಬಿದ ಚೂಪು ತುದಿಯನ್ನು ಹೊಂದಿದ್ದು, ಅರ್ಧ ಚಂದ್ರಾಕೃತಿಯನ್ನು ಹೊಂದಿರುತ್ತಿತ್ತು ಇನ್ನೊಂದು ಪ್ರಕಾರ ಚರ್ಟ್ ಆಥವಾ ಜಾನ್‌ಫರ್ ಕಲ್ಲುಗಳಿಂದ ಮಾಡಿದ ಒಂದು ವಿಶಿಷ್ಟ ತಂತ್ರದಿಂದ ನಿಳವಾದ ಚಕ್ಕೆಯನ್ನು ಎಬ್ಬಿಸಿ ಅವುಗಳನ್ನು ವಿವಿಧ ರೂಪದಲ್ಲಿ ಉಪಯೋಗಿಸಲಾಗುತ್ತಿತ್ತು. ಈ ಉಪಕರಣಗಳು

ಸಂಶೋಧನೆಯಲ್ಲಿ ಕಂಡುಬಂದಿವೆ ಎಂದು ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೩೭), ದಿವಾಕರ್ (೨೦೦೬:೧೦೭), ಹಬೀಬ್ (೨೦೦೮:೮೩-೮೬), ಸೂರ್ಯನಾಥ ಕಾಮತ್ (೧೯೮೪:೧೫೯) ಈ ಮುಂತಾದ ಕೃತಿಕಾರರು ತಮ್ಮ ಕೃತಿಗಳಲ್ಲಿ ಹೆಚ್ಚಿನ ವಿಷಯ ಪ್ರಸ್ತಾಪಿಸಿದ್ದಾರೆ.

**ಸೂಕ್ಷ್ಮ ಶಿಲಾಯುಗ ಅಥವಾ ಲೋಹಯುಗ**

ನೂತನ ಶಿಲಾಯುಗದ ನಂತರದ ಕಂಡುಬಂದ ಯುಗಕ್ಕೆ ಸೂಕ್ಷ್ಮ ಶಿಲಾಯುಗ ಅಥವಾ ಲೋಹಯುಗವೆನ್ನುತ್ತಾರೆ. ಈ ಕಾಲದಲ್ಲಿ ಮಾನವನು ಲೋಹದ ಬಳಕೆ ಮಾಡಿರುವುದನ್ನು ಗಮನಿಸಬಹುದು. ಇದರಿಂದ ಮಾನವ ತನ್ನ ಕಾರ್ಯ ಚಟುವಟಿಕೆಗಳು ಸುಲಭವಾಗಿ ಹಿಂದಿನ ಯುಗಗಳಲ್ಲಿ ಅನುಭವಿಸಿದ ಸಮಸ್ಯೆಗಳು ಈ ಯುಗದಲ್ಲಿ ಕಂಡುಬರುವುದಿಲ್ಲ. ತಾಮ್ರ ಮತ್ತು ಚಿನ್ನದ ಲೋಹ ಬಳಕೆ ಮಾಡುವುದರ ಮುಖಾಂತರ ಮಡಕೆ, ಬಟ್ಟಲು, ತಟ್ಟೆ ಕುಂಭಗಳು ಉಪಯೋಗಿಸುತ್ತಿದ್ದರು. ಸೂಕ್ಷ್ಮ ಶಿಲಾಯುಗ ಉಪಕರಣಗಳು ತಾಂತ್ರಿಕತೆಯಲ್ಲಿ ಸಾಕಷ್ಟು ಬದಲಾವಣೆ ಕಂಡುಬರುತ್ತವೆ. ಜಾಮಿತಿಯ ಆಕೃತಿಗಳನ್ನು ರೂಪಿಸಲು ಹಾಗೂ ಕಚ್ಚುಗಳನ್ನುಂಟು ಮಾಡಲು, ಶಿಲೆಗಳು ಕತ್ತರಿಸುವ ತಂತ್ರ ಬಳಕೆಯಾಗಿದೆ. ಈ ಶಿಲಾಯುಗದ ಜನರು ಸೌಂದರ್ಯ ಪ್ರಜ್ಞೆಯುಳ್ಳವರಾಗಿದ್ದು ವಿವಿಧ ಉಪಕರಣ ಮೇಲೆ ಬಣ್ಣ ಬಳಿದಿರುವುದರಿಂದ ಕಂಡುಬಂದಿದೆ ಷೇಕ್ ಅಲಿ (೧೯೯೭:೧೨೫) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

ಸೂಕ್ಷ್ಮ ಶಿಲಾಯುಗದಲ್ಲಿ ಮಾನವನು ಬೇಟೆಯಾಡುವುದಕ್ಕೆ ತಾಮ್ರ ಮತ್ತು ಕಂಚು ಲೋಹವನ್ನು ಬಳಸುತ್ತಿದ್ದರು. ಕೃಷಿ ಉಪಕರಣಗಳು ಸಹ ಹೊಂದಿದ್ದು ಅದರಲ್ಲಿ ಕೊಡಲಿ, ಚಪ್ಪಟೆ ಕೊಡಲಿ, ಬಾಚಿ, ಉಳಿ, ಹೊಂದಿದ್ದರು. ನಾಯಿ, ಆಕಳು, ಎತ್ತು, ಮೇಕೆ, ಪ್ರಾಣಿಗಳು ಸಾಕುತ್ತಿದ್ದರು ಹಾಗೂ ಮೀನು ಹಿಡಿಯುವ ಪದ್ಧತಿಯನ್ನು ಅಳವಡಿಸಿಕೊಂಡಿದ್ದರು. ಆಹಾರ ಸಾಮಾಗ್ರಿಗಳನ್ನು ಸಂಗ್ರಹಿಸುವುದರ ಮುಖಾಂತರ ಮುಂದಿನ ಜೀವನದ ಬಗ್ಗೆ ಯೋಚನೆಯನ್ನು ಮಾಡುತ್ತಿದ್ದರು" ಎಂದು ತಿಳಿದುಕೊಳ್ಳಬಹುದಾಗಿದೆ. ಸುಂದರ ಅವರ ಕರ್ನಾಟಕ ಪ್ರಾಗ್ಯೈತಿಹಾಸ ಮತ್ತು ಪ್ರಾಚ್ಯ ವಸ್ತು ಸಂಶೋಧನೆ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ ಹಾಗೂ ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೩೭-೩೮), ಸೂರ್ಯನಾಥ ಕಾಮತ್ (೧೯೮೪:೧೫೨-೧೫೯) ಕೃತಿಗಳಲ್ಲಿ ವಿವರಿಸಿದ್ದಾರೆ.

ಸೂಕ್ಷ್ಮ ಶಿಲಾಯುಗದ ನೆಲೆಯು ಶಹಪುರ ತಾಲೂಕಿನಲ್ಲಿ ಸುಮಾರು ೨೫ ನೆಲೆಗಳು ಪತ್ತೆ ಆಗಿವೆ. ಕೆ. ಪದ್ದಯ್ಯನವರು ಗುಲಬರ್ಗಾ ಜಿಲ್ಲೆಯ ಕೊಡೆಕಲ್ಲು ಸಂಗನಕಲ್ಲಿನಲ್ಲಿ ಉತ್ಖನನ ಕೈಗೊಂಡು ಅನೇಕ ಸಂಸ್ಕೃತಿ ಅವಶೇಷಗಳನ್ನು ಬೆಳಕಿಗೆ ತಂದರು (ಶಿವರುದ್ರಸ್ವಾಮಿ ೨೦೦೪:೩೮). ಆರ್.ಎಸ್. ಪಪ್ಪುರವರು (೧೯೭೬) ಶೋರಾಪುರ ಪ್ರದೇಶದ ಸರ್ವೇಕ್ಷಣೆ ಕೈಗೊಂಡು ಕೆಲವು

ಮಹತ್ವ ನೆಲೆಗಳನ್ನು ಅಧ್ಯಯನ ಮಾಡಿರುವರು. ಕೆ.ಪದ್ದಯ್ಯರವರು (೧೯೭೩) ನಿರಂತರ ಭೀಮಾ-ಕೃಷ್ಣಾ ನದಿ ಪಾತ್ರದಲ್ಲಿನ ಮಾನವ ಜೀವನ ಕ್ರಮದ ಬಗೆಗೆ ತಿಳಿಯಲು ಸಹಾಯಕವಾಗಿದೆ. ಇತ್ತೀಚೆಗೆ ಹುಣಸಗಿ ನದಿ ಪಾತ್ರದಲ್ಲಿನ ಸರ್ವೇಕ್ಷಣಾ ಹಾಗೂ ಉತ್ಖನನವು (೧೯೮೨) ಜೀವನ ಕ್ರಮ ಮತ್ತು ಉಪಕರಣಗಳ ಬಗ್ಗೆ ತಿಳಿಯಲು ಸಹಾಯಕವಾಗಿದೆ. ಗುಲಬರ್ಗಾ ಜಿಲ್ಲೆಯ ತಿಂಥಣಿಯಲ್ಲಿ ಸೂಕ್ಷ್ಮ ಶಿಲಾಯುಗದ ನೆಲೆಯನ್ನು ಪತ್ತೆ ಮಾಡಲಾಗಿದೆ. ಅಲ್ಲದೆ ತಿಂಥಣಿ ಪ್ರದೇಶದಲ್ಲಿ ತಾಮ್ರದ ಅದಿರನ್ನು ಸಂಗ್ರಹಿಸಿ ಅದನ್ನು ಲೋಹವನ್ನಾಗಿ ಪರಿವರ್ತಿಸುತ್ತಿದ್ದ ಕುರುಹುಗಳಿವೆ. ಎಂ. ಶೇಷಾದ್ರಿಯವರು ಸಹೋದ್ಯೋಗಿಗಳೊಂದಿಗೆ ಪ್ರಾಚ್ಯ ಸಂಶೋಧನಾ ಇಲಾಖೆ ನಡೆಸಿದ ಸಂಶೋಧನಾ ಫಲವಾಗಿ (ಅಫಜಲ್‌ಪುರ), ಉಡ್ಚಾಣ ತಾಮ್ರಯುಗದ ನಿವೇಶನಗಳು ದೊರೆತಿವೆ. ಎಸ್. ನಾಗರಾಜು ಅವರು ಗುಲಬರ್ಗಾ ಜಿಲ್ಲೆಯ ಅಮರ್ಜಾ ನದಿ ಪಾತ್ರದ ಸರ್ವೇಕ್ಷಣೆಯು ಹಲವು ನೆಲೆಗಳ ಸಂಶೋಧನೆಗೆ ಸಹಾಯಕವಾಗಿದೆ (೧೯೭೧) ಷೇಕ್ ಅಲಿ (೧೯೯೭:೧೨೪-೧೩೪) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

**ಬೃಹತ್ ಕಬ್ಬಿಣ ಶಿಲಾಯುಗ**

ಬೃಹತ್ ಕಬ್ಬಿಣ ಶಿಲಾಯುಗವು ಅಂತಿಮ ಘಟ್ಟ ಹಾಗೂ ಹೆಚ್ಚು ಮುಂದುವರಿದು ಕಬ್ಬಿಣದ ಪರಿಜ್ಞಾನ ಪಡೆದಿರುವ ಕಾಲಕ್ಕೆ ಬೃಹತ್ ಕಬ್ಬಿಣ ಶಿಲಾಯುಗವೆಂದು ಕರೆಯಲಾಗಿದೆ. ಭಾರತ ನೂತನ ತಾಮ್ರ ಶಿಲಾಯುಗ ಸಂಸ್ಕೃತಿಯು ಕಬ್ಬಿಣ ಉಪಯೋಗಿಸುವ ಬೃಹತ್ ಶಿಲಾಯುಗ ಸಂಸ್ಕೃತಿಗೆ ದಾರಿ ಮಾಡಿಕೊಟ್ಟಿದೆ. ವಿವಿಧ ಮಾದರಿಯ ಬೃಹತ್ ಶಿಲಾಗೋರಿಗಳನ್ನು ಈ ಸಂಸ್ಕೃತಿಯ ಜನರು ನಿರ್ಮಿಸಿದ್ದರಿಂದ, ಇದನ್ನು ಬೃಹತ್ ಶಿಲಾ ಸಂಸ್ಕೃತಿ ಎಂದು ಕರೆಯಲಾಗಿದೆ.

ಜೇವರ್ಗಿ, ಅಂದೋಲ, ರಾಜನಕೋಳೂರು, ಹಗರಟಗಿಗಳಲ್ಲಿಯ ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿಯ ಕೆಲವೊಂದು ಕಲ್ಗೋರಿಗಳನ್ನು ಮೇಡೋಸ್ ಟೇಲರ್ ಅವರು ತುಂಬಾ ಎಚ್ಚರಿಕೆಯಿಂದ ಅಗೆದು ಕೂಲಂಕಷವಾಗಿ ಅಧ್ಯಯನ ಮಾಡಿದ್ದಾರೆ. ದಕ್ಷಿಣ ಭಾರತದಲ್ಲಿ ೨೦೦೦ ಕ್ಕೂ ಹೆಚ್ಚು ಶೋಧವಾಗಿರುವ ಕಲ್ಗೋರಿಗಳು ಆಯಾ ಪ್ರದೇಶಗಳಲ್ಲಿ ಭಿನ್ನತೆಯನ್ನು ಹೊಂದಿವೆ. ಗುಲಬರ್ಗಾ ಪ್ರದೇಶಗಳಲ್ಲಿ ನಾಲ್ಕು ಮುಖ್ಯ ಪ್ರಕಾರಗಳು ಕಂಡು ಬಂದಿವೆ. ಕಲ್ಲು ವೃತ್ತಗಳು, ವೃತ್ತಾಕಾರದ ಕಲ್ಲು ಗುಡ್ಡೆಗಳು, ಕಂಡಿಕೋಣೆಗೋರಿಗಳು, ದಾರಿ ಸಹಿತ ಕಂಡಿಕೋಣೆ ಗೋರಿಗಳು ಇವೆ. ಮೊದಲು ಎರಡು ಪ್ರಕಾರ ಜೇವರ್ಗಿ, ಆಂದೋಲಗಳಲ್ಲಿವೆ. ಮೂರನೆಯದು ರಾಜನಕೋಳೂರಿನಲ್ಲಿ ಹಾಗೂ ನಾಲ್ಕನೆಯದು ಹಗರಟಗಿಯಲ್ಲಿ ಇದೆ. ಹುಣಸಗಿಯಲ್ಲಿದ್ದ ಕಲ್ಗೋರಿಗಳೆಲ್ಲವೂ ಹಾಳಾಗಿ ಹೋಗಿವೆ. ಬಲ್ಲೆ, ಕತ್ತಿ, ತ್ರಿಶೂಲ ಮೊದಲಾದ ಶಸ್ತ್ರಗಳು, ಕಬ್ಬಿಣದ ನಾಲಗೆಯುಳ್ಳ ಕಂಚಿನ ಸಣ್ಣ ಸಣ್ಣ ಗಂಟೆಗಳು, ಹಿಡಿಕೆಯುಳ್ಳ ಬಾದಾಮಿ ಆಕಾರದ

ಹಣತೆಗಳು, ಸಣ್ಣ ಸಣ್ಣ ತಟ್ಟೆಗಳು ಮೊದಲಾದವುಗಳು ಇವೆ. ಎಂದು ಸಂಶೋಧನೆಗಳ ಮೂಲಕ ಕಂಡುಕೊಳ್ಳಲಾಗಿದೆ ಎಂದು ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೭೭:೩೯) ಕೃತಿಯಲ್ಲಿ ತಿಳಿಸಿದ್ದಾರೆ.

ಈ ಬೃಹತ್ ಶಿಲಾಯುಗದ ನೆಲೆಗಳು, ಗೋರಿಗಳು ಪ್ರತಿಯೊಂದು ತಾಲೂಕಿನಲ್ಲಿ ಕಂಡು ಬಂದಿದ್ದು ವ್ಯವಸಾಯ, ಪಶುಪಾಲನೆ, ಬೇಟೆ, ಮೀನುಗಾರಿಕೆ ಮುಂತಾದ ಮೂಲ ವೃತ್ತಿಗಳು ಕಂಡುಬರುತ್ತವೆ.[೬] ಇವರು ಬಳಸಲ್ಪಡುವ ಅನೇಕ ಸಾಧನಗಳು ಕಬ್ಬಿಣದಿಂದ ಮಾಡಲ್ಪಟ್ಟಿದ್ದವು. ಇದರ ಜೊತೆ ಜೊತೆಗೆ ತಾಮ್ರದ ಮತ್ತು ಕಲ್ಲಿನ ಸಾಧನೋಪಕರಣಗಳು ಹೊಂದಿದ್ದವು.

ಈ ಸಂಸ್ಕೃತಿಯು ವಸತಿ ನಿವೇಶನಗಳಲ್ಲಿ ಕಪ್ಪು, ಕೆಂಪು, ಮತ್ತು ಕೆಂಪುಕಪ್ಪು ವರ್ಣದ ಮೃತ್ ಪಾತ್ರೆಗಳು, ಕಬ್ಬಿಣದ ಅರೆ ಪ್ರಶಸ್ತ ಶಿಲೆಯ ಮಣಿಗಳು, ಶಂಖದ ಬಳೆಚೂರು, ಮಣ್ಣಿನ ಗೊಂಬೆಗಳೂ ಕಂಡುಬಂದಿವೆ. ಮಡಕೆಗಳು, ಲೋಹಗಳು, ಕತ್ತಿ ಚಾಕು, ಉದ್ದದ ಸರಳು, ನಿತ್ಯದ ಗೃಹ ಉಪಯೋಗಿಗಳಾಗಿವೆ. ಚುರು, ಬಾಣ, ಕೊಕ್ಕೆ, ಬಿಲ್ಲೆ, ಗಾಜು, ಕಲ್ನಾರ, ಉತ್ತಮ ಜಾಲೆಯ ಕಾರ್ನಿಲಿಯನ್ ಕ್ರಿಸ್ಟರ್ ಕಲ್ಲುಗಳು ಮೊದಲಾದವು ಕೃಷಿ ಚಟುವಟಿಕೆಗಳಿಗೆ ಹಾಗೂ ಬೇಟೆಗಳಿಗೆ ಉಪಯೋಗಿಸಲಾಗಿದೆ ಎಂದು ತೆಲಗಾವಿ (೨೦೦೪:೧೦), ಸುಂದರ (೧೯೫೪–೮೧), ಷೇಕ್ ಅಲಿ (೧೯೭೭:೧೮೩) ಮುಂತಾದ ಕೃತಿಕಾರರು ಹೆಚ್ಚಿನ ವಿಷಯವನ್ನು ತಮ್ಮ ಕೃತಿಗಳಲ್ಲಿ ವಿವರಣೆ ನೀಡಿದ್ದಾರೆ.

ಸಾದಾರಣವಾಗಿ ಹೆಚ್ಚಿನ ನಿವೇಶನಗಳು ಬೆಟ್ಟದ ತಪ್ಪಲು ಪ್ರದೇಶ ಮತ್ತು ಮೈದಾನ ಪ್ರದೇಶದಲ್ಲಿ ಹೆಚ್ಚಿನ ನಿವೇಶನ, ಕೃಷಿ ಭೂಮಿಗಳಾಗಿದ್ದು ಸಾಕಷ್ಟು ಹಾಳಾಗಿವೆ. ಈ ಯುಗ ಕಲ್ಗೋರಿಗಳ ನಿರ್ಮಾಣ ಈ ಶಿಲಾಯುಗದ ವೈಶಿಷ್ಟ್ಯವಾಗಿದೆ. ಎಂದು ಇತಿಹಾಸಕಾರರು ವ್ಯಕ್ತಪಡಿಸಿದ್ದಾರೆ.

ಗುಲಬರ್ಗಾ ಪ್ರದೇಶಕ್ಕೆ ಸಂಬಂಧಪಟ್ಟ ಬೃಹತ್ ಕಬ್ಬಿಣ ಶಿಲಾಯುಗದ ನೆಲೆಗಳು ಬಗ್ಗೆ ಕೃತಿಗಳಲ್ಲಿ ಸವಿವರವಾಗಿ ನಮೂದಿಸಿದ್ದಾರೆ.

ಗುಲಬರ್ಗಾ ಪ್ರದೇಶದ ಶಿಲಾಯುಗದ ಚಾರಿತ್ರಿಕ ಹಿನ್ನಲೆಯನ್ನು ತಿಳಿಯಲು ೧೯ನೇ ಶತಮಾನದ ಉತ್ತಾರಾರ್ಧ ದಶಕಗಳಲ್ಲಿ 'ರಾಬರ್ಟ ಬ್ರೂಸ್ ಫೊಟ್' ಭೂ ವಿಜ್ಞಾನಿಯು ಸಂಶೋಧನೆಗಳನ್ನು ಈ ಪ್ರದೇಶದಲ್ಲಿ ಕೈಗೊಂಡರು, ೧೯೭೦ರ ದಶಕದ ಆದಿ ಭಾಗದಲ್ಲಿ ದಖ್ಖನ ಸ್ನಾತಕೋತ್ತರ ಮತ್ತು ಸಂಶೋಧನಾ ಸಂಸ್ಥೆಯು, ಕೆ. ಪದ್ದಯ್ಯ ನವರು ಪುರಾತತ್ವ ಅನ್ವೇಷಣೆ ಕೈಗೊಂಡರು. ೧೯ನೇ ಶತಮಾನದ ಮಧ್ಯಭಾಗದಲ್ಲಿ ಕರ್ನಲ್ ಮೆಡೋಸ್

ಟೇಲರ್ ರವರ ಕಬ್ಬಿಣ ಯುಗದ ಬೃಹತ್ ಶಿಲಾ ಸಂಸ್ಕೃತಿಯ ಆವಶೇಷಗಳನ್ನು ಜೇವರ್ಗಿ, ಆಂದೋಲ, ಚಿಕ್ಕನಹಳ್ಳಿ, ರಾಜನಕೋಳೂರು, ಹಗರಟಗಿ, ಪತ್ತೆಮಾಡಿ ಅಧ್ಯಯನ ಮಾಡಿದರು, ಆನಂತರ ಮಳಖೇಡ ಹಾಗೂ ಭೀಮನದಿ ದಂಡೆ ಪ್ರದೇಶದಲ್ಲಿ ಅ.ಸುಂದರ. ಎಸ್. ನಾಗರಾಜು ಅವರು ಮಧ್ಯ ಹಳೆ ಶಿಲಾಯುಗದ ಕಲ್ಲಿನ ಉಪಕರಣಗಳು ಶೋಧಿಸಿದರು. ಸುಂದರ ಅವರು ಉಡಚಣ, ಎಡಸಗಿಯಲ್ಲಿ ತಾಮ್ರಯುಗದ ಹಂತದ ನೂತನ ಶಿಲಾಯುಗದ ಜನ ವಾಸ್ತವ್ಯದ ನೆಲೆಗಳನ್ನು ಗುರುತಿಸಿದರು. ಕೆ. ಪದ್ದಯ್ಯನವರು ಕ್ಷೇತ್ರ ಕಾರ್ಯ ಕೈಗೊಳ್ಳವುದರ ಮುಖಾಂತರ ಶಿಲಾಯುಗಗಳ ಬಗ್ಗೆ ಬೆಳಕನ್ನು ಚೆಲ್ಲಿದ್ದಾರೆ. ಕಪಟರಾಳ ಕೃಷ್ಣರಾಯರು, ಜೊತೆಗೆ ಎಸ್.ನಾಗರಾಜು ೧೯೬೪ರ ಸನ್ನತಿಯ ಭಾಗದ ಕ್ಷೇತ್ರ ಕಾರ್ಯ ಕೈಗೊಂಡು ವರದಿಯನ್ನು ವೃತ್ತ ಪತ್ರಿಕೆಯಲ್ಲಿ ಪ್ರಕಟಿಸಿದರು. ಆನಂತರ ಶೇಷಾದ್ರಿ, ಪಿ.ಬಿ.ದೇಸಾಯಿ, ಎಂ. ಎಸ್. ನಾಗರಾಜರಾವ್ ನೆಲೆಗಳನ್ನು ಪರಿಶೀಲಿಸುವುದರ ಮುಖಾಂತರ ವರದಿಗಳನ್ನು ಪ್ರಕಟಿಸಿದರು. ಈ ಪ್ರಕಟಣೆಗಳಿಂದ ನೆಲೆಯ ಮಹತ್ವವನ್ನು ಅರಿತು ಪ್ರಾಚ್ಯವಸ್ತು ನಿರ್ದೇಶನಾಲಯವು ಅ.ಸುಂದರ ಅವರ ನೇತೃತ್ವದಲ್ಲಿ ಪ್ರಥಮ ಉತ್ಖನನ ಮಾಡಿತು. ಇನ್ನೊಂದು ಮಹತ್ವ ಶೋಧನೆಯನ್ನು ಪುರಾತತ್ವ ಸರ್ವೇಕ್ಷಣಾ ಇಲಾಖೆ ಹೈದರಾಬಾದ್ ವೃತ್ತದವರು ಮಾಡಿದರು. ಇದರ ಮುಖಾಂತರ ಶಿಲಾಯುಗದ ನೆಲೆಗಳು ಹೆಚ್ಚಿಗೆ ಬೆಳಕಿಗೆ ಬಂದವು. ಈ ತರಹದ ಪರಿಶ್ರಮ ವರದಿಗಳನ್ನು ಕೆ.ಬಿ.ಶಿವತಾರಕ ರವರ ತಮ್ಮ ಕೃತಿಯಾದ ಕರ್ನಾಟಕ ಪುರಾತತ್ವ ನೆಲೆಗಳು ಎಂಬುದರಲ್ಲಿ ೧೬೩ ರಿಂದ ೨೧೬ ಪುಟಗಳಲ್ಲಿ ದಾಖಲಾತಿಯನ್ನು ನೀಡಿದ್ದಾರೆ ಆದರೆ ಹೆಚ್ಚಾಗಿ ವಿಷಯದ ವಿವರಣೆಯನ್ನು ನೀಡಿಲ್ಲ.

ಶಿಲಾಯುಗಕ್ಕೆ ಸಂಬಂಧಪಟ್ಟಂತೆ ದಿವಾಕರ ಸಂಪಾದಿತ ಕೃತಿಯಾದ 'ಕರ್ನಾಟಕದ ಪರಂಪರೆ' (೨೦೦೬:೧೦೩–೧೧೦), ಷೇಕ್ ಅಲಿ ಅವರ ಕರ್ನಾಟಕ ಚರಿತ್ರೆ (೧೯೯೭–೩೪:೪೦), ಪಾಟೀಲರ 'ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್' (೧೯೯೭:೩೪–೪೦), ತೆಲಗಾವಿ 'ಮೌರ್ಯ ಮತ್ತು ಶಾತವಾಹನ ಯುಗ' (೨೦೦೪), ಮಹದೇವ 'ಕರ್ನಾಟಕ ಪುರಾತತ್ವ ಶೋಧ' (೨೦೦೦), ಶಿವತಾರಕ್ ಅವರ ಕರ್ನಾಟಕದ ಪುರಾತತ್ವ ನೆಲೆಗಳು (೨೦೦೧:೧೬೩–೨೧೫) ಮುಂತಾದ ಕೃತಿಗಳು ಪ್ರಾಗೀತಿಹಾಸದ ಬಗ್ಗೆ ಮಾಹಿತಿಗಳನ್ನು ನೀಡಿದ್ದಾರೆ. ಆದರೂ ಸಹ ಹಳೆ ಶಿಲಾಯುಗದ ಮತ್ತು ಸೂಕ್ಷ್ಮ ಶಿಲಾಯುಗದ ಬಗೆಗೆ ಸಂಶೋಧನೆಗಳೂ ಹಾಗೂ ಅಧ್ಯಯನಗಳು ಆಗಬೇಕಾಗಿದೆ. ಈ ರೀತಿಯಾಗಿ ಶಿಲಾಯುಗದ ನೆಲೆಗಳು ಗುಲಬರ್ಗಾ ಪ್ರದೇಶದಲ್ಲಿ ಕಂಡುಬರುತ್ತವೆ.

**ಮೌರ್ಯರು.**

ಗುಲಬರ್ಗಾ ಪ್ರದೇಶವು ಚರಿತ್ರೆಯಲ್ಲಿ ಮೌರ್ಯರ ಆಳ್ವಿಕೆಗೆ ಒಳಪಟ್ಟಿತ್ತು ಎಂಬುದಕ್ಕೆ

ಅನೇಕ ಆಧಾರಗಳ ಮುಖಾಂತರ ದೃಢಪಡುತ್ತದೆ. ಮೌರ್ಯರ ಆಳ್ವಿಕೆ ಕುರಿತು ಪ್ರತ್ಯೇಕ ಗುಲಬರ್ಗಾ ಪ್ರದೇಶಕ್ಕೆ ಸಂಬಂಧಪಟ್ಟಂತಹ ಯಾವುದೇ ಕೃತಿಗಳು ರಚನೆಗೊಳ್ಳದಿದ್ದರು ಲಭ್ಯವಿರುವ ಕೃತಿಗಳ ಮೂಲಕ ಮೌರ್ಯರ ಇತಿಹಾಸವನ್ನು ತಿಳಿದುಕೊಳ್ಳಬಹುದು. ಗುಲಬರ್ಗಾ ಪ್ರದೇಶ ಇವರ ಆಡಳಿತಕ್ಕೆ ಒಳಪಟ್ಟಿತ್ತು ಎಂಬುದಕ್ಕೆ ಮೂಲ ಆಧಾರ ಇವರ ಶಾಸನಗಳು, ನಾಣ್ಯಗಳು, ಮುಂತಾದವು, ಗುಲಬರ್ಗಾ ತಾಲೂಕಿನ ಹೆಬ್ಬಾಳ ಎನ್ನುವ ಗ್ರಾಮದಲ್ಲಿ ೧೯೪೦ರಲ್ಲಿ ಬೆಳ್ಳಿಯ ಪಂಚ್ ಚಿಹ್ನೆಯ ನಾಣ್ಯಗಳು ಪತ್ತೆಯಾದವು. ೨೨೫ ಬೆಳ್ಳಿಯ ನಾಣ್ಯಗಳನ್ನು ಪಿ.ಎಲ್.ಗುಪ್ತ ಅವರು ಅಧ್ಯಯನ ಮಾಡಿದ್ದಾರೆ. ಇವರ ನಾಣ್ಯಗಳು ನಾಲ್ಕು ವಿವಿಧ ಸ್ತರಗಳಿಗೆ ಸೇರಿದವು. ಕರ್ನಾಟಕದಲ್ಲಿ ಅಶೋಕನ ಲಘುಶಾಸನಗಳೂ ಸನ್ನತಿಯಲ್ಲಿ ದೊರೆತ್ತಿದ್ದು, ಇವನ ಆಡಳಿತ ಒಳಪಟ್ಟಿರುವುದಕ್ಕೆ ಸಾಕ್ಷಿಯಾಗಿವೆ ನರಸಿಂಹಮೂರ್ತಿ (೨೦೦೩:೪೯), ತೆಲಗಾವಿ (೨೦೦೪:೪೫–೪೬), ತಮ್ಮ ಕೃತಿಗಳಲ್ಲಿ ತಿಳಿಸಿದ್ದಾರೆ.

ಗುಲಬರ್ಗಾ ಜಿಲ್ಲೆಯ ಸನ್ನತಿಯಲ್ಲಿ ಬೃಹತ್ ಉತ್ಖನನ ನಡೆಯುತ್ತಿವೆ. ಇಲ್ಲಿ ಅಶೋಕನ ಕಾಲದ ಮಡಕೆಗಳು ಮತ್ತು ಇತರ ವಸ್ತುಗಳು ಹೇರಳವಾಗಿ ದೊರಕಿವೆ ಆದರಿಂದ ಮೌರ್ಯಕಾಲದ ನೆಲೆಯು ಇದ್ದಿತೆಂದು ಖಚಿತವಾಗಿ ತಿಳಿಯುತ್ತದೆ. ಇಲ್ಲಿ ಪಂಚ್ ಮಾಡಿದ ೮ ಬೆಳ್ಳಿಯ ನಾಣ್ಯಗಳೂ ದೊರಕಿವೆ. ಸನ್ನತಿಯು ಅಶೋಕನ ಸಾಮ್ರಾಜ್ಯದ ದಕ್ಷಿಣ ಭಾಗದಲ್ಲಿಯ ಒಂದು ಪ್ರಮುಖ ಪಟ್ಟಣವಾಗಿತ್ತು. ಅಷ್ಟೆ ಅಲ್ಲದೆ ಪ್ರಮುಖ ಆಡಳಿತ ಕೇಂದ್ರವು ಆಗಿದ್ದಿರಬಹುದು. ಈ ನೆಲೆಯಲ್ಲಿ ಕರ್ನಾಟಕ ಹಾಗೂ ಕೇಂದ್ರ ಸರಕಾರ ಪುರಾತತ್ವ ಇಲಾಖೆ ೧೯೮೫ ರಿಂದ ಉತ್ಖನನ ನಡೆಸಿದರು. ೭೦ಕ್ಕೂ ಹೆಚ್ಚು ಪ್ರಾಕೃತ ಭಾಷೆ ಮತ್ತು ಬ್ರಾಹ್ಮಿ ಲಿಪಿಯ ಶಾಸನ, ನೂರಾರು ಶಿಲ್ಪಾವಶೇಷಗಳು ದೊರೆತಿವೆ. ಸನ್ನತಿಯಲ್ಲಿ ಮೌರ್ಯ ಸಾಮ್ರಾಜ್ಯದ ಒಬ್ಬ ಉನ್ನತ ಆಡಳಿತಾಧಿಕಾರಿ ಇದ್ದಿರಬೇಕೆಂದು ಮತ್ತು ಆಕಾಲದಿಂದಲೇ ಸನ್ನತಿ ಪ್ರದೇಶದಲ್ಲಿ ದೊರೆತಿರುವ ಪುರಾತತ್ವಿಯ ವಸ್ತು ವಿಶೇಷಗಳು, ಪ್ರಾಚೀನ ಕಾಲದ ಬೌದ್ಧ ಕೇಂದ್ರವೆಂದು ಈಗಾಗಲೇ ಗುರುತಿಸಲ್ಪಟ್ಟ ಸನ್ನತಿ ಜೀನಾಯಾನ ಶಾಖೆಯ ಆರಾಧನಾ ಕೇಂದ್ರವಾಗಿದ್ದಿರಬೇಕೆಂದು ದೇವರಾಜ ತಳವಾರ (೧೯೯೬:೫) ಅಭಿಪ್ರಾಯಪಟ್ಟಿದ್ದಾರೆ. ಸುವರ್ಣಗಿರಿ ಬಗ್ಗೆ ಇ.ಹುಲ್ಷ್, ಜೆ.ಎಫ್ ಫ್ಲೀಟ್, ಡಿ.ಆರ್.ಭಂಡಾರಕರ್, ರಾಜಗಿರಿ ಪರಿಸರದಲ್ಲಿ ಎಂದರೆ, ಎಮ್.ಕೆ.ರಾಯಚೌದರಿ, ಸೋನಗಿರ್ ಪಟ್ಟಣದಲಿ, ಕೃಷ್ಣಮಚಾರ್ಯರು ಮತ್ತು ಡಿ.ಎನ್.ಸರ್ಕಾರ ಜೊನ್ನಗರಿಯನ್ನು, ಸಿ.ಆರ್.ನಾರಾಯಣರಾವ್ ಮತ್ತು ಜಯರಾಮ ಶರ್ಮರು, ಶ್ರೀಲಂಕೆಯನ್ನು, ಹೆಚ್. ಕೃಷ್ಣಶಾಸ್ತ್ರೀ, ಹುಲ್ಷ್ ಸನ್ನತಿಯನ್ನು ಸುವರ್ಣಗಿರಿಯ ಎಂದು ಕರೆಯಲಾಗಿತ್ತು.[೭] ಈ ಅಭಿಪ್ರಾಯಗಳನ್ನು ತೆಲಗಾವಿಯವರು (೨೦೦೪:೪೫–೪೬) ತಮ್ಮ ಕೃತಿಯಲ್ಲಿ ಇತಿಹಾಸಕಾರರ ಭಿನ್ನಾಭಿಪ್ರಾಯಗಳನ್ನು ವಿಮರ್ಶಿಸಿದ್ದಾರೆ.

ಅಶೋಕನು ಒಬ್ಬ ಧರ್ಮನಿಷ್ಠ ವ್ಯಕ್ತಿಯಾಗಿದ್ದು ಅವನ ಶಾಸನದಲ್ಲಿ ಹೊರಡಿಸಿದ ಅಹಿಂಸ ತತ್ವಗಳು ಸರ್ವಶ್ರೇಷ್ಠ ವ್ಯಕ್ತಿತ್ವವನ್ನು ನಿರೂಪಿಸುತ್ತದೆ. ಆರ್.ಎಸ್. ಶರ್ಮರವರು ತನ್ನ ಶಾಸನಗಳ ಮೂಲಕ ಪ್ರಜೆಗಳೊಂದಿಗೆ ನೇರವಾಗಿ ಮಾತನಾಡಿದ ಮೊದಲ ಭಾರತಿಯ ಅರಸನೆಂದರೆ ಅಶೋಕ (ಶರ್ಮಾ ೧೯೯೭:೧೩೪). ನಾ ಕಸ್ತೂರಿಯವರು ಹೇಳುವಂತೆ ಅಹಿಂಸೆ ಎಂಬ ತತ್ವಕ್ಕೆ ಅಶೋಕನು ಬಹು ವಿಶಾಲವಾದ ಅರ್ಥವನ್ನು ಕೊಟ್ಟನು ಎಂದು ಅಭಿಪ್ರಾಯಪಟ್ಟಿದ್ದಾರೆ. ಇದರಿಂದ ಅಶೋಕನು ದಯಪರ, ಸಹಧರ್ಮ ಸಹಿಷ್ಣುತವಾದಿ ಆಗಿದ್ದು ಅಶೋಕನು ಶಾಸನಗಳು ಧರ್ಮಶಾಸನಗಳಾಗಿದ್ದು ಧರ್ಮ ಪ್ರಸಾರದ ಉದ್ದೇಶ ಹೊಂದಿದ್ದವು.

ಮೇಲಿನ ವಿಷಯಗಳು ಪಾಟೀಲ (೧೯೯೭:೪೩), ಗೋಪಾಲರಾವ್ (೨೦೦೭:೩೯-೪೦), ಎ.ವಿ.ನರಸಿಂಹಮೂರ್ತಿ (೨೦೦೩:೪೮) ತಮ್ಮ ಕೃತಿಗಳಲ್ಲಿ ಹೆಚ್ಚಿನ ವಿವರಣೆಯನ್ನು ನೀಡಿದ್ದಾರೆ.

**ಶಾತವಾಹನರು**

ಮೌರ್ಯರ ನಂತರ ಆಳ್ವಿಕೆ ಬಂದ ಇವರು ಗುಲಬರ್ಗಾ ಪ್ರದೇಶದ ಇವರ ನೇರ ಆಳ್ವಿಕೆಗೆ ಒಳಪಟ್ಟಿತ್ತು. ಇದಕ್ಕೆ ಸಾಕ್ಷಿ ಎಂಬಂತೆ ಚಿತ್ತಾಪೂರ ತಾಲೂಕಿನ ಸನ್ನತಿಯಲ್ಲಿ ಸಿಕ್ಕಿರುವ ಶಾಸನಗಳು, ಭೌದ್ಧಸ್ತೂಪಗಳು, ಶಿಲ್ಪ, ಅವಶೇಷಗಳು ಹಾಗೆಯೇ ಇಟ್ಟಿಗೆ ರಕ್ಷಣೆಗೋಡೆ ಇದರೊಳಗೆ ನಗರವಿದ್ದ ಕುರುಹು ತಾಮ್ರದ ನಾಣ್ಯ, ಅಲ್ಪಸ್ವಲ್ಪ ಮಡಕೆಯ ಚೂರು ಸಿಕ್ಕಿವೆ. ಇತ್ತೀಚೆಗೆ ಅಣಬಿ, ಹಸರಗುಂಡಗಿ ಮುಂತಾದ ಕಡೆ ಶಾತವಾಹನರ ಶಾಸನ, ಸ್ಮಾರಕ ಶಿಲೆಗಳು ಶೋಧವಾಗಿವೆ. ಕಣಗಿನಾಹಾಳದಲ್ಲಿ ಸ್ತೂಪದ ಶಿಲಾತಳಪಾಯವು ಕಾಣಿಸುತ್ತಿತ್ತು. ತೆಲಗಾವಿ (೨೦೦೪:೯೧) ತಮ್ಮ ಕೃತಿಯಲ್ಲಿ ವಿವರಿಸಿದ್ದಾರೆ.

ಶಾತವಾಹನರು ೪೫೦ ವರ್ಷಗಳು ಆಳ್ವಿಕೆ ನಡೆಸಿ ಸುಮಾರು ೩೦ ದೊರೆಗಳು ಅಧಿಕಾರಕ್ಕೆ ಬಂದರು. ಶಾತವಾಹನರ ಮೂಲದ ಬಗ್ಗೆ ಇತಿಹಾಸಕಾರರಲ್ಲಿ ಭಿನ್ನಾಭಿಪ್ರಾಯ ಹೊಂದಿದ್ದು, ರಾಪ್ಸನ್, ಡಾ. ಸ್ಮೀತ್ ಮತ್ತು ಆರ್.ಜಿ. ಭಂಡಾರ್ಕರ್ ಆಂಧ್ರಪ್ರದೇಶ ಎಂದು ಅಭಿಪ್ರಾಯಪಡುತ್ತಾರೆ. ಅಜಯ್ ಮಿತ್ರ ಶಾಸ್ತ್ರಿಯವರ ಪ್ರಕಾರ ಕರ್ನಾಟಕದ ಉತ್ತರ ಭಾಗದಲ್ಲಿ ಇವರ ಒಂದು ರಾಜಧಾನಿ ಸ್ಥಾಪಿತವಾಗಿದ್ದಲ್ಲಿ ಅದು ಗುಲಬರ್ಗಾ ಜಿಲ್ಲೆ ಸನ್ನತಿಯಲ್ಲೆ (ಶಾಸ್ತ್ರಿ ೧೯೯೮:೭೦).

ಶಾತವಾಹನರು ೩೦ ಅರಸರುಗಳಲ್ಲಿ ೩ನೇ ಶಾತಕರ್ಣಿ, ಹಾಲ, ಗೌತಮಿ ಪುತ್ರ ಶಾತಕರ್ಣಿ, ವಶಿಷ್ಟಿಪುತ್ರ ಶ್ರೀ ಪುಳಮಾಯಿ, ಯಜ್ಞಶ್ರೀ ಶಾತಕರ್ಣಿ ಪ್ರಮುಖ ಅರಸರಾಗಿದ್ದರು ಇವರು ತಮ್ಮ ರಾಜಧಾನಿ ಪ್ರತಿಷ್ಠಾನ ಅಥವಾ ಪೈಠಾನ್‌ವನ್ನಾಗಿ ಮಾಡಿಕೊಂಡು ಆಳ್ವಿಕೆ

ನಡೆಸಿದರು. ಹಾಗೆಯೇ ಅನೇಕ ಯುದ್ಧಗಳು ಕೈಗೊಳ್ಳುವುದರ ಮುಖಾಂತರ ಸಾಮ್ರಾಜ್ಯ ವಿಸ್ತರಣೆ ಮಾಡಿದರು. ಪಲ್ಲವರೊಂದಿಗೆ ಮತ್ತು ಕುಂತಳದ ಚುಟರೊಂದಿಗೆ ವೈವಾಹಿಕ ಸಂಬಂಧ ಬೆಳೆಸಿದರು. ಗೌತಮಿ ಪುತ್ರ ಶಾತಕರ್ಣಿ ಪ್ರಮುಖ ಅರಸನಾಗಿದ್ದು ಅನೇಕ ಯುದ್ಧಗಳಲ್ಲಿ ಗೆಲುವು ಸಾಧಿಸಿದ್ದನ್ನು ಕಂಡುಬರುತ್ತದೆ. ನಾಸಿಕ ಶಾಸನವು ಯವನರು, ಪಹ್ಲವರ, ಶಕರ, ನಾಶಕನೇಂದು ತಿಳಿಸುತ್ತದೆ. ಹಾಗೆಯೇ ಗುಜರಾತ, ಸೌರಾಷ್ಟ್ರ, ಮಾಳ್ವ, ಬಿರಾರ್, ಶಕ್, ಸಾಮ್ರಾಜ್ಯಗಳು ಸೋಲಿಸಿ ಸೌರಾಷ್ಟ್ರ ಮತ್ತು ಮಾಳ್ವದ ಮೇಲೆ ತನ್ನ ಪ್ರಭುತ್ವ ಸಾಧಿಸಿದ. ಅವರ ಶೌರ್ಯ, ಸಾಧನೆಗೆ ಪಶ್ಚಿಮ ಪ್ರಭು, ಪ್ರತಿಷ್ಠಾನದ ಪ್ರಭು, ರಾಜಮಹಾರಾಜ ಹಾಗೂ ತ್ರೈಸಮುದ್ರ ತೋಯ ಪೀತವಾಹನ ಎಂಬ ಬಿರುದನ್ನು ಪಡೆದಿದ್ದನು. ಈ ಅಂಶವು ಸನ್ನತಿಯಲ್ಲಿಯ ವಶಿಷ್ಠ ಪುಲಮಾಯಿಯ ಶಾಸನ ಪುಷ್ಠಿಕರಿಸುತ್ತದೆ ತೆಲಗಾವಿ (೨೦೦೪:೮೭), ಗಿಲ್ಬರ್ಟ್ ಸಿಕ್ವೇರಾ (೨೦೦೪:೧೬೪), ಷೇಕ್ ಅಲಿ (೨೦೦೬:೧೨೪) ತಮ್ಮ ಕೃತಿಗಳಲ್ಲಿ ತಿಳಿಸಿದ್ದಾರೆ.

ಆರ್ಥಿಕವಾಗಿ ಇವರು ಭೂ ಕಂದಾಯವನ್ನು ಅವಲಂಬಿಸಿದ್ದರು ೧/೬ ರಷ್ಟು ಭೂ ಕಂದಾಯವನ್ನು ಹೊಂದಿತ್ತು ಹಾಗೂ ನ್ಯಾಯದ ಶುಲ್ಕ ಸಹ ವಿಧಿಸುತ್ತಿದ್ದರು. ಉಪ್ಪಿನ ಮೆಲೆ ರಾಜ್ಯ ಏಕಸ್ವಾಮ್ಯತೆಯನ್ನು ಹೊಂದಿತ್ತು. ಇವರ ನಾಣ್ಯಗಳು ಸನ್ನತಿಯ ಉತ್ಖನನದಲ್ಲಿ ಮತ್ತು ಹಿಪ್ಪರ್ಗಿಯಲ್ಲಿ ೧೦ ನಮೂನೆ ನಾಣ್ಯಗಳು ದೊರೆತಿವೆ. ಇತ್ತೀಚೆಗೆ ಗುಲಬರ್ಗಾ ಜಿಲ್ಲೆಯ ಹರದನಗರ ಗ್ರಾಮದಲ್ಲಿ ಗೌತಮಿ ಪುತ್ರ ಶಾತಕರ್ಣಿ ಸೇರಿದ ನಾಣ್ಯಗಳು ದೊರೆತಿವೆ. ನಾಣ್ಯಗಳು ಕಾರ್ಷಾಪಣ, ದ್ರಮ್ಮ್, ಪಣ, ಗದ್ಯಾಣ, ಮತ್ತು ದಿವಾರ್ ಎಂಬ ೫ ರೀತಿಯ ನಾಣ್ಯಗಳು ಹೊಂದಿದ್ದರು ಎಂದು ಗಿಲ್ಬರ್ಟ್ ಸಿಕ್ವೇರಾ (೨೦೦೪:೧೬೯), ನರಸಿಂಹಮೂರ್ತಿ (೨೦೦೩:೫೬-೬೧) ಮುಂತಾದ ಕೃತಿಕಾರರು ತಮ್ಮ ಕೃತಿಗಳಲ್ಲಿ ವಿವರಣೆ ನೀಡಿದ್ದಾರೆ.

ಶಾತವಾಹನರ ಕಾಲದಲ್ಲಿ ಬ್ಯಾಂಕಿಂಗ್ ವ್ಯವಹಾರಗಳು, ವೃತ್ತಿ ಸಂಘಗಳು ಅಸ್ತಿತ್ವದಲ್ಲಿದ್ದವು.° ವ್ಯಾಪಾರ ವಾಣಿಜ್ಯವು ರೋಮ್, ಇಟಲಿ, ಗ್ರೀಕ್, ಅರಬ್ ದೇಶಗಳೊಂದಿಗೆ ಸಂಪರ್ಕ ಹೊಂದಿತ್ತು. ಶಾತವಾಹನರ ಸಾಮಂತರಲ್ಲಿ ಮೂರು ಮುಖ್ಯ ವರ್ಗಗಳಿದ್ದವು ೧.ರಾಜ, ೨.ಮಹಾಭೋಜ, ೩. ಮಹಾರಥಿ, ವರ್ಣ ವ್ಯವಸ್ಥೆಯನ್ನು ಹೊಂದಿದ್ದು ಕಂಬಾರ, ಕುಂಬಾರ, ಅಕ್ಕಸಾಲಿಗ, ಗಾಣಿಗ, ನೇಕಾರ ಮುಂತಾದ ಉಪಜಾತಿ ಅಸ್ತಿತ್ವದಲ್ಲಿತ್ತೆಂದು ಗಿಲ್ಬರ್ಟ್ ಸಿಕ್ವೇರಾ (೨೦೦೪:೧೬೭) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

ಕಲೆ ಮತ್ತು ವಾಸ್ತುಶಿಲ್ಪಗಳು ಅಮರಾವತಿ, ನಾಗರ್ಜುನಕೊಂಡ, ಗೊಲಿ, ಕಂಡುಬರುತ್ತವೆ. ವರ್ಣ ಚಿತ್ರಕಲೆಗೆ ಅಜಂತಾದಲ್ಲಿಯ ೯ನೇ ಮತ್ತು ೧೦ನೇ ಗುಹೆಗಳಲ್ಲಿ ಕಂಡುಬರುತ್ತವೆ. ಚೈತ್ಯಾಲಯಗಳು ವಿಹಾರಗಳು ಅಥವಾ ಸಂಘರಾಮಗಳು, ಸ್ತೂಪಗಳು ಗುಹಾಂತರ

ದೇವಾಲಯಗಳು ನಿರ್ಮಿಸಿದ್ದಾರೆ. ಸನ್ನತಿಯಲ್ಲಿ ಸಹ ಬೌದ್ಧ ಸ್ತೂಪಗಳು ಮತ್ತು ದಿಬ್ಬಗಳು ಹೊಂದಿದ್ದವು ಎಂದು ತೆಲಗಾವಿ (೨೦೦೪:೯೭) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

**ಬಾದಾಮಿ ಚಾಲುಕ್ಯರು**

ಕದಂಬರ ಪತನವಾದ ನಂತರ ಬಾದಾಮಿ ಚಾಲುಕ್ಯರು ಪ್ರಬಲರಾಗಿ ಕ್ರಿಶ ೫೪೦ ರಿಂದ ೭೫೩ ರವರೆಗೆ ಸುಮಾರು ೯ ಜನ ಅರಸರು ಆಳ್ವಿಕೆಯನ್ನು ನಡೆಸಿದರು. ಕದಂಬ, ಗಂಗ, ಆಳುಪ, ಹೈಹಯ, ಮುಂತಾದ ಮನೆತನಗಳಲ್ಲಿ ಹಂಚಿಹೋಗಿದ್ದ ಕನ್ನಡನಾಡು ಬಾದಾಮಿ ಚಾಲುಕ್ಯರ ಕಾಲದಲ್ಲಿ ಒಗ್ಗೂಡಿದಂತಾಗಿ ಅದಕ್ಕೆ ಬಂದು ಐತಿಹಾಸಿಕ ಸ್ಥಿರತೆ, ವ್ಯಾಪ್ತಿ, ಪ್ರಭಾವ ಕಂಡುಕೊಂಡಿತು. ಬಿಜಾಪುರ ಜಿಲ್ಲೆಯ ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ರಾಜ್ಯದ ಗಡಿಯು ಉತ್ತರದಲ್ಲಿ ನರ್ಮದೆ, ಪೂರ್ವದಲ್ಲಿ ಕರ್ನೂಲ, ಗುಂಟೂರು, ಮತ್ತು ನೆಲೂರು, ದಕ್ಷಿಣದಲ್ಲಿ ಕಾವೇರಿ ಮತ್ತು ಪಶ್ಚಿಮದಲ್ಲಿ ಅರಬ್ಬಿ ಸಮುದ್ರದವರೆಗೆ ವಿಸ್ತರಿಸಿತು ವೆಂಕಟಾಚಲಶಾಸ್ತ್ರಿ (೨೦೦೯:೬೩), ಆಲೂರು ವೆಂಕಟರಾಯರು (೨೦೦೬:೪೧–೪೨), ತಮ್ಮ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

ಗುಲಬರ್ಗಾ ಜಿಲ್ಲೆಯು ಅಪರೋಕ್ಷವಾಗಿ ಬಾದಾಮಿ ಚಾಲುಕ್ಯರ ಆಡಳಿತದ ಹತೋಟಿಗೆ ಒಳಪಟ್ಟಿದ್ದರೂ ಅವರ ಕಾಲದ ಶಾಸನಗಳಾಗಲಿ ಅಥವಾ ಯಾವುದೇ ಅವಶೇಷಗಳಾಗಲಿ ಲಭ್ಯವಿಲ್ಲ. ಗುಲಬರ್ಗಾದಲ್ಲಿ ವರದಿಯಾಗಿರುವ ಚಾಲುಕ್ಯ ವಿನಯಾದಿತ್ಯನ ಕಾಲದ ತಾಮ್ರ ಶಾಸನವು 'ಕೂಟ' ಶಾಸನವಾಗಿರುವುದರಿಂದ ಅಗಣ್ಯವೆನಿಸುತ್ತದೆ. ನಿಂಬರಗಿಯ ೧೧೩೪ರ ಶಾಸನವು ಕಲ್ಯಾಣ ಚಾಲುಕ್ಯ ಅರಸ ಮುಮ್ಮಡಿ ಸೋಮೇಶ್ವರ ಕಾಲಕ್ಕೆ ಸೇರಿದ್ದಾಗಿದೆ. ಬಾದಾಮಿ ಚಾಲುಕ್ಯ ಅರಸ ವಿನಯಾದಿತ್ಯನಿಂದ ನಿಂಬರಗಿ ಗ್ರಾಮವನ್ನು ಊರಿನ ಒಡೆಯ ಕಲಿದೇವನ ಪೂರ್ವಜನಾದ ನಾರಾಯಣಚಾರ್ಯನು ದತ್ತಿ ಪಡೆದಿದ್ದ ಅಂಶವನ್ನು ಸಾಂದರ್ಭಿಕವಾಗಿ ತಿಳಿಸುತ್ತದೆ. ಈ ವಿಷಯವು ಗುಲಬರ್ಗಾ ಜಿಲ್ಲೆ ಗ್ಯಾಸೇಟಿಯರ್ (೧೯೯೭:೪೫) ಕೃತಿಯಲ್ಲಿ ಉಲ್ಲೇಖಿಸಲಾಗಿದೆ.

ಕರ್ನಾಟಕದಲ್ಲಿ ೨ ಚಾಲುಕ್ಯ ಮನೆತನ ಆಳ್ವಿಕೆ ನಡೆಸಿವೆ. ಮೊದಲು ಬಾದಾಮಿ ರಾಜಧಾನಿಮಾಡಿಕೊಂಡ ಆಳಿದರು. ಇವರಿಗೆ ಪಶ್ಚಿಮ ಚಾಲುಕ್ಯರು ಎಂದೂ ನಂತರ ಕೆಲಕಾಲ ಮರೆಯಾಗಿದ್ದು ರಾಷ್ಟ್ರಕೂಟರ ನಂತರ ಕಲ್ಯಾಣವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದರು. ಇವರಿಗೆ ಪೂರ್ವ ಚಾಲುಕ್ಯರ ಎಂದು ಕರೆಯಲಾಗಿದೆ. ಬಾದಾಮಿ ಚಾಲುಕ್ಯರ ಸೇನೆಯನ್ನು 'ಕರ್ನಾಟಕ ಬಲ' ಎಂದು ಪ್ರಸಿದ್ಧಿ ಹೊಂದಿತ್ತು (ಗೋಪಾಲರಾವ್ ೧೯೯೫:೫೨–೫೪) 'ಚಾಲುಕ್ಯ' ಎಂಬ ಮೂಲದ ಅಥವಾ ಪದದ ಉತ್ಪತ್ತಿಯ ಬಗ್ಗೆ ಕರ್ನಾಟಕದ

ಪರಂಪರೆ (೨೦೦೬:೨೩೮-೨೪೫) ಕೃತಿಯಲ್ಲಿ ವಿವರಿಸಿದ್ದಾರೆ. ವೆಂಕಟಾಚಲಶಾಸ್ತ್ರೀ (೧೯೮೩:೬೩), ಆಲೂರು ವೆಂಕಟರಾಯರು (೨೦೦೬:೪೧) ಕೃತಿಯಲ್ಲಿ ಸವಿವರವಾಗಿ ತಿಳಿಸಿದ್ದಾರೆ.

ಬಾದಾಮಿ ಚಾಲುಕ್ಯರ ಅರಸರಾದ ಪುಲಕೇಶಿ, ಕೀರ್ತಿವರ್ಮ, ಮಂಗಳೇಶ, ೨ನೇ ಪುಲಕೇಶಿ, ವಿಕ್ರಾಮಾದಿತ್ಯ, ವಿನಯಾದಿತ್ಯ, ವಿಜಾಯಾದಿತ್ಯ, ೨ನೇ ವಿಕ್ರಾಮಾದಿತ್ಯ, ೨ನೇ ಕೀರ್ತಿವರ್ಮ ಆಳ್ವಿಕೆಯನ್ನು ನಡೆಸಿದರು. ಇವರ ಸಾಮ್ರಾಜ್ಯದ ವಿಸ್ತರಣೆ ನೀತಿಯಿಂದಾಗಿ ಗಂಗರು, ಸೇಂದ್ರಕ, ಅಳುಪ, ಗುಜರಾತಿ ಬಾಣ, ಭೋಜ, ಹೀಗೆ ಅನೇಕ ಮಾಂಡಳಿಕ ಅರಸರು ಇವರ ಆಧೀನದಲ್ಲಿ ಇದ್ದರು. ಆಡಳಿತದಲ್ಲಿ ಮಹಾರಾಷ್ಟ್ರ, ರಾಷ್ಟ್ರಮಂಡಲ, ವಿಷಯ, ಬೋಗ, ಗ್ರಾಮ ಮುಂತಾದ ಆಡಳಿತ ಘಟಕ ಉಲ್ಲೇಖಗಳು ಚಾಲುಕ್ಯರ ಶಾಸನದಲ್ಲಿ ಕಂಡುಬರುತ್ತವೆ. ದಕ್ಷಿಣ ಭಾರತದ ವಾಸ್ತು ಶೈಲಿಯಲ್ಲಿ ಬಾದಾಮಿ ಚಾಲುಕ್ಯರ ಶೈಲಿಗೆ ಪ್ರತ್ಯೇಕ ಸ್ಥಾನವನ್ನು ನೀಡಲಾಗಿದೆ. 'ಐಹೊಳೆಯನ್ನು ಹಿಂದೂ ದೇವಾಲಯ ಶೈಲಿಯ ತೊಟ್ಟಿಲೆಂದು' ಪ್ರಸಿದ್ಧ ಕಾಲಾತಜ್ಞ ಪರ್ಸಿಬ್ರೌನ್ ಅಭಿಪ್ರಾಯಪಡುತ್ತಾರೆ ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೪೫), ಆಲೂರು ವೆಂಕಟರಾಯರು (೨೦೦೬:೪೧-೪೨), ಗೋಪಾಲರಾವ್ (೧೯೯೫:೫೨-೫೪) ತಮ್ಮ ಕೃತಿಗಳಲ್ಲಿ ಮೇಲಿನ ವಿಷಯ ಪ್ರಸ್ತಾಪ ಮಾಡಿದ್ದಾರೆ.

**ರಾಷ್ಟ್ರಕೂಟರು**

ಕರ್ನಾಟಕದ ರಾಜಮನೆತನಗಳಲ್ಲಿ ರಾಷ್ಟ್ರಕೂಟರು ಪ್ರಮುಖರಾಗಿದ್ದಾರೆ. ಸುಮಾರು ಕ್ರಿ.ಶ. ೮ನೇ ಶತಮಾನದಿಂದ ೧೦ನೇ ಶತಮಾನದವರೆಗೆ ಗುಲಬರ್ಗಾ ಪ್ರದೇಶದ ಮಾನ್ಯಖೇಟವನ್ನು ರಾಜ್ಯಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆಯನ್ನು ನಡೆಸಿದರು. ಉಪಲಬ್ಧವಿರುವ ದಾಖಲೆಗಳ ಮೇಲೆ ಫ್ಲೀಟ್, ಹುಲ್ಪ್, ಬರ್ನೆಲ್ ಸಿ.ವಿ. ವೈದ್ಯ, ಆಲ್ತೇಕರ, ವಿನ್ಸೆಂಟ್ ಸ್ಮಿತ್, ಶಂಬಾ ಜೋಶಿ, ಆರ್.ಎಸ್ ಪಂಚಮುಖಿ ಮುಂತಾದವರು ತಮ್ಮ ದೃಷ್ಟಿಕೋನದಿಂದ ಚರ್ಚಿಸಿ ತಮ್ಮದೇ ಆದ ತೀರ್ಮಾನಕ್ಕೆ ಬಂದಿದ್ದಾರೆ ಷೇಕ್ ಅಲಿ (೧೯೯೭:೩೮). ಫ್ಲೀಟರ ಪ್ರಕಾರ ರಾಥೋರ್ ಮತ್ತು ರಾಥೋಡ್ ಎಂದು ಸಿ.ವಿ. ವೈದ್ಯರು, ಮಾಹಾರಾಷ್ಟವೆಂದು ಎ.ಸಿ. ಬರ್ನೆಲ್ ಆಂಧ್ರದ ರೆಡ್ಡಿ ಜನಾಂಗವೆಂದು ಇವರ ಮೂಲದ ಬಗ್ಗೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕೊನೆಗೆ ಆಲ್ತೇಕರ್ ಅವರು ಕನ್ನಡದವರೆಂದು ಹೇಳುತ್ತಾ ಎಲ್ಲಾ ಇತಿಹಾಸಕಾರರ ಹೇಳಿಕೆಯನ್ನು ಅಲ್ಲಗಳೆದಿದ್ದಾರೆ. ಶ್ರೀ ಶಂಭಾ. ಜೋಶಿಯವರು 'ಕನ್ನಡ ನೆಲೆ' ಎಂಬ ತಮ್ಮ ಗ್ರಂಥದಲ್ಲಿಯೂ ರಾಷ್ಟ್ರಕೂಟರು ಉಗಮದ ಬಗ್ಗೆ ಪ್ರಸ್ತಾಪಿಸಿದ್ದಾರೆ. ಆರ್.ಎಸ್. ಪಂಚಮುಖಿಯವರು ತಮ್ಮ ಕರ್ನಾಟಕ ಇತಿಹಾಸ ಎಂಬ ಗ್ರಂಥದಲ್ಲಿ ರಾಷ್ಟ್ರಕೂಟರ ಮೊದಲಿಗೆ ಲತ್ತಲೂರಿಂದ ಬಂದರೆಂದು ತಿಳಿಸುತ್ತಾರೆ. ಸೀತಾಬಾಲ್ದಿ ಶಾಸನದಲ್ಲಿ ಆರನೆಯ ವಿಕ್ರಮಾದಿತ್ಯನ ಮಾಂಡಲಿಕನಾದ ಧಾಡಿಭಡಕನು

ರಾಷ್ಟ್ರಕೂಟ ವಂಶದವನೆಂದೂ ಲತ್ತಲೂರಪುರ ವಿನಿರ್ಗತನೆಂದೂ ಹೇಳಿರುವುದನ್ನು ಉಲ್ಲೇಖಿಸಿದೆ. ಇದರಿಂದ ಪರಮೇಶ್ವರ ಎಂಬ ಪದದ ಅರ್ಥವು ಲತ್ತಲೂರಪುರ ವಿನಿರ್ಗತವೆಂದು ಸ್ಪಷ್ಟಪಡಿಸಿದ್ದಾರೆ. ನಂಜುಂಡಸ್ವಾಮಿ (೨೦೦೯:೪-೫) ತಮ್ಮ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

ಇತ್ತೀಚೆಗೆ ಮೈಸೂರಿನ ಪ್ರಾಚ್ಯ ಸಂಶೋಧನಾ ಇಲಾಖೆಯವರು ಗುಲಬರ್ಗಾ ಜಿಲ್ಲೆಯ ಸಿರಿವಾಳ ಗ್ರಾಮದಲ್ಲಿ ಸಂಶೋಧನೆ ನಡೆಸಿದೆ. ಆಲ್ತೇಕರ್‌ರ ವಿಚಾರಕ್ಕೆ ಪೂರಕವಾಗಿ ರಾಷ್ಟ್ರಕೂಟರ ಮೊದಲ ರಾಜಧಾನಿ 'ಮಯೂರ ಖಂಡಿ' ತರುವಾಯ ರಾಜಧಾನಿ ಮಾನ್ಯಖೇಟವಾಗಿದ್ದು, ದೊಡ್ಡ ನೇಗಿಲು ಅದರ ಜೊತೆ ಗರುಡ ಲಾಂಛನ ಕಂಡುಬರುತ್ತಿವೆ. ಪೂಜಾರ (೨೦೦೫:೧೪೨) ತಮ್ಮ ಈ ಅಂಶಗಳನ್ನು ಕೃತಿಯಲ್ಲಿ ತಿಳಿಸಿದ್ದಾರೆ.

ದಂತಿದುರ್ಗನಿಂದ ಸ್ಥಾಪನೆಯಾದ ಸಾಮ್ರಾಜ್ಯವು, ಒಂದನೇ ಕೃಷ್ಣ, ಎರಡನೇ ಗೋವಿಂದ, ಧ್ರುವ, ಮೂರನೇ ಗೋವಿಂದ, ಅಮೋಘವರ್ಷ ನೃಪತುಂಗ, ಎರಡನೆಯ ಕೃಷ್ಣ, ಮೂರನೆಯ ಇಂದ್ರ, ಮೂರನೆಯ ಕೃಷ್ಣ, ಇವರು ರಾಷ್ಟ್ರಕೂಟ ಸಾಮ್ರಾಜ್ಯದ ಪ್ರಮುಖ ದೊರೆಗಳಾಗಿದ್ದರು. ರಾಷ್ಟ್ರಕೂಟರ ರಾಜರ ಯುದ್ಧ ಸಾಹಸಗಳು ಶಾಸನಗಳಲ್ಲಿ ಕಂಡುಬರುತ್ತವೆ. ಗಂಗರನ್ನು, ಪ್ರತಿಹಾರರನ್ನು ಮತ್ತು ಪಲ್ಲವರನ್ನು ಗೆದ್ದದ್ದು 'ರಾಧನ್ ಪುರ್' ಫಲಕಗಳಲ್ಲಿ ನಿರೂಪಿತವಾಗಿದೆ. ಮೂರನೇ ಗೋವಿಂದನು ವೈರಿಗಳನ್ನು ಚಂದ್ರನು ಕತ್ತಲೆಯನ್ನು ಹೋಗಲಾಡಿಸುವಂತೆ ನಾಶಪಡಿಸಿದ. ಚೋಳ, ಕೇರಳ, ಪಾಂಡ್ಯರೂ ಸಿಂಹಳ, ವೆಂಗಿ, ಮೇಲೆ ಪ್ರಭುತ್ವವನ್ನು ಸಾಧಿಸುವುದರ ಮುಖಾಂತರ ರಾಜ್ಯವನ್ನು ವಿಸ್ತರಿಸಿದನು. ಮೂರನೇ ಗೋವಿಂದನ ಉತ್ತರ ದಾಳಿ ೭೯೫ ರಿಂದ ೮೦೦ ಕಾಲಾವಧಿಯಲ್ಲಿ ಮಾಳ್ವ, ಕೋಸಲ, ಕಳಿಂಗ, ವೆಂಗಿ, ದೆಹಲಿ ಮತ್ತು ಓಡ್ರರಾಜ ಪರಾಭವಗೊಳಿಸಿದನು ದಿವಾಕರ್ (೨೦೦೬:೨೮೪), ಸೂರ್ಯನಾಥ ಕಾಮತ್ (೨೦೦೫:೬೭-೬೮) ಕೃತಿಗಳಲ್ಲಿ ಮೇಲಿನ ವಿಷಯವನ್ನು ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

ಅಮೋಘವರ್ಷ ನೃಪತುಂಗನು ಯುದ್ಧದಲ್ಲಿ ಆಸಕ್ತಿಯನ್ನು ಹೊಂದದೆ ಇವನೊಬ್ಬ ಶಾಂತಿಪ್ರಿಯ ಅರಸನಾಗಿದ್ದನು. ಚಾಲುಕ್ಯರು, ಗಂಗರು, ಪಲ್ಲವರು, ಜೊತೆಗೆ ವೈವಾಹಿಕ ಸಂಬಂಧವನ್ನು ಬೆಳೆಸಿದನು. ಸ್ವತಃ ವಿದ್ವಾಂಸನಾಗಿದ್ದ ಈತನನ್ನು 'ಪ್ರಶ್ನೋತರ ರತ್ನಮಾಲ' ಎಂಬ ಕೃತಿಯನ್ನು ರಚಿಸಿದನು. ಈತನು ಜನಾನುರಾಗಿ, ಪ್ರಜಾಸೇವಕನಾಗಿದ್ದ, ಸಾಮ್ರಾಜ್ಯದಲ್ಲಿ ಕ್ಷಾಮಬಾಧೆಯನ್ನು ಉಂಟಾದಾಗ ಕೊಲ್ಲಾಪುರದ ದೇವಿಗೆ ತನ್ನ ಎಡೆಗೈ ಹೆಬ್ಬೆರಳನ್ನು ಬಲಿ ನೀಡಿದನು ಎಂದು ಸಂಜನಾ ಶಾಸನದಲ್ಲಿ ದಾಖಲಾಗಿದೆ ಷೇಕ್ ಅಲಿ (೧೯೯೭:೨೭). ಕ್ರಿ.ಶ.೮೭೮ರಲ್ಲಿ ಅಮೋಘವರ್ಷ ನಿಧನನಾದಾಗ ಅವನ ಮಗ ಇಮ್ಮಡಿ ಕೃಷ್ಣನು ಅಧಿಕಾರಕ್ಕೆ ಬಂದನು. ಇವನು ಪೂರ್ವದ ಚಾಲುಕ್ಯರು, ಗೂರ್ಜರು, ಪ್ರತಿಹಾರರು, ಮತ್ತು ಚೋಳರ

ಮೇಲೆ ದೀರ್ಘ ಕಾಲದವರೆಗೆ ಯುದ್ಧಗಳನ್ನು ಮಾಡಬೇಕಾಯಿತು. ಮೂರನೇ ಕೃಷ್ಣನು ಅಧಿಕಾರಕ್ಕೆ ಬಂದಾಗ ಸಾಮ್ರಾಜ್ಯದ ರಾಜಕೀಯ ಸ್ಥಿತಿ ಸುಧಾರಿಸಿತು. ಕ್ರಿಶ ೯೬೭ರಲ್ಲಿ ಇವನ ಮರಣದ ನಂತರ ಇವರ ಆಳ್ವಿಕೆಯ ಪತನ ಪ್ರಾರಂಭವಾಯಿತು. ಈ ಸಂದರ್ಭದಲ್ಲಿ ಪರಮಾರರ ಪ್ರಭು ಸೀಯಕನು ರಾಷ್ಟ್ರಕೂಟರ ಪ್ರಾಂತಗಳ ಮೇಲೆ ದಾಳಿ ಮಾಡಿ ಸಾಮ್ರಾಜ್ಯದ ಮುಖ್ಯ ನಗರವಾದ ಮಾನ್ಯಖೇಟವನ್ನ ಸೂರೆಗೊಂಡು ಇದರ ಪರಿಣಾಮವಾಗಿ ಇಮ್ಮಡಿ ಕರ್ಕನ ದುರ್ಬಲ ಆಡಳಿತವು ಕೊನೆಗೊಂಡಿತು. ರಾಷ್ಟ್ರಕೂಟರು ಕರ್ನಾಟಕ ಚರಿತ್ರೆಯಲ್ಲಿ ಉನ್ನತವಾದ ಸಾಮ್ರಾಜ್ಯವನ್ನು ಸ್ಥಾಪಿಸಿ ಬಾಣರು, ನೊಳಂಬರು, ವೈಡುಂಬರು, ಗಂಗರು, ಪೂರ್ವ ಚಾಲುಕ್ಯರು, ಕೊಂಕಣದ ಶಿಲಾಹಾರರು, ಚೇದಿಯ ಕಲಚೂರಿಗಳು ಆಧೀನರಾಗಿ ಆಳ್ವಿಕೆಯನ್ನು ನಡೆಸಿದರು ಎಂದು ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೪೭-೪೮) ಷೇಕ್ ಅಲಿ ಅವರು (೧೯೯೭:೨೨) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

ರಾಷ್ಟ್ರಕೂಟರು ಉತ್ತಮ ಆಡಳಿತ ವ್ಯವಸ್ಥೆಯಲ್ಲಿ ರಾಜ್ಯವನ್ನು ವಿಷಯ, ನಾಡು, ಗ್ರಾಮಗಳಾಗಿ ವಿಭಜಿಸಿದರು[೧೦] ಮತ್ತು ಪ್ರಾಂತ್ಯಗಳನ್ನು ಸಂಖ್ಯಾನುಗುಣವಾಗಿ ವಿಭಜಿಸುವಂತಹ ಪದ್ದತಿ ಜಾರಿಗೆ ತಂದರು. ಬನವಾಸಿ ೧೨೦೦೦, ಬೆಳವೊಲ ೩೦೦, ಕುಂದಗಂಗೆ ೭೦ ಮುಂತಾದ ನಗರಗಳಿದ್ದವು. ದಖ್ಖನ ಆಡಳಿತದ ಮುಖ್ಯ ವರಮಾನವೆಂದರೆ ಭೂ ಕಂದಾಯವಾಗಿದ್ದು, ವಸ್ತು ರೂಪದಲ್ಲಿ ಅಥವಾ ಶ್ರಮದ ರೂಪದಲ್ಲಿ ಕೊಡಬಹುದಾಗಿತ್ತು. ಸರ್ವೆ ಮಾಡುವುದರ ಮುಖಾಂತರ ಕಂದಾಯ ನಿಗದಿ ಪಡಿಸುತ್ತಿದ್ದರು ಸಂಗ್ರಹಕ್ಕೆ ಅಧಿಕಾರಿಗಳನ್ನು ನೇಮಕ ಮಾಡುತ್ತಿದ್ದರು. ಆರ್.ಎಸ್.ಶರ್ಮಾರವರ ಪ್ರಕಾರ ರಾಷ್ಟ್ರಕೂಟರ ಕಾಲದಲ್ಲಿ ರೈತನ ಮೇಲಿನ ತೆರಿಗೆಯ ಭಾರ ಬಹಳ ಹೆಚ್ಚಾಗಿದ್ದಿತು ಎಂದು ಅಭಿಪ್ರಾಯಪಡುತ್ತಾರೆ ಷೇಕ್ ಅಲಿ (೧೯೯೭:೧೬).

ರಾಷ್ಟ್ರಕೂಟರು ಹತ್ತಿ ಕೈಗಾರಿಕೆ, ಚರ್ಮದ ಹದ ಮಾಡುವುದು, ಚಾಪೆ ಹಣೆಯುವುದು, ಜನಪ್ರಿಯ ಕೈಗಾರಿಕೆಗಳಾಗಿದ್ದವು, ಸ್ತ್ರೀಯರು ಸಕ್ರೀಯವಾಗಿ ಆಡಳಿತದಲ್ಲಿ ಭಾಗವಹಿಸುತ್ತಿದ್ದರು ರಾಷ್ಟ್ರಕೂಟರ ನಾಣ್ಯಗಳು ಶಾಸನದಲ್ಲಿ ಉಲ್ಲೇಖವಿದೆ. ಧ್ರುಮ್, ಸುವರ್ಣ, ಗದ್ಯಾಣ, ಕಳಂಜು, ಕಾಸು, ಮಂಜಡಿ ಅಕ್ಕಂ, ಎಂಬ ನಾಣ್ಯಗಳು ಬಳಕೆಯಲ್ಲಿದ್ದವು. ಅಲ್ತೇಕರ್ ಪ್ರಕಾರಃ ಗದ್ಯಾಣದ ತೂಕ ೯೬ ಗ್ರೇನ್ ಇತ್ತೀಚೆಗೆ ಮುಕಂದ ಪ್ರಭುರವರು ಚಿನ್ನದ ನಾಣ್ಯವನ್ನ ೩ನೆ ಕೃಷ್ಣನಿಗೆ ಸೇರಿದೆ ಎಂಬ ಅಭಿಪ್ರಾಯ ಪಟ್ಟಿದ್ದಾರೆ. ಇತ್ತೀಚೆಗೆ ನಿತ್ಯಾನಂತ ಪೈ ರವರು ನಾಲ್ಕನೇ ಗೋವಿಂದನಿಗೆ ಸೇರಿದ ಚಿನ್ನದ ನಾಣ್ಯವನ್ನ ಪ್ರಕಟಿಸಿದ್ದಾರೆ. ಮಳಖೇಡದಲ್ಲಿ ಕೆಲವು ತಾಮ್ರದ ನಾಣ್ಯಗಳ ಮೇಲೆ ಕಾಕರಾಯ ಎಂಬ ಬರಹವಿದೆ. ಅದರಿಂದ ಕರ್ಕರಾಜನಿಗೆ ಸೇರಿದ್ದು ಎಂದು ಭಾವಿಸಲಾಗಿದೆ. ನಾಣ್ಯಗಳು ಮತ್ತೆ ಪರೀಕ್ಷಿಸಿದಾಗ ಕಾಕತೀಯ ಎಂದು ತಿಳಿದು

ಬಂದಿತು ಎಂದು ಖಂಡೋಬರಾವ್ (೨೦೦೨:೫೪), ನರಸಿಂಹಮೂರ್ತಿ (೨೦೦೩:೭೨-೭೬), ಶಿವರುದ್ರಸ್ವಾಮಿ (೨೦೦೪:೧೩೯) ಇವರ ಕೃತಿಗಳಲ್ಲಿ ನಾಣ್ಯಗಳ ಬಗ್ಗೆ ಹೆಚ್ಚಿನ ವಿಷಯವನ್ನು ಒಳಗೊಂಡಿದೆ.

ರಾಷ್ಟ್ರಕೂಟ ಕಲೆ ಮತ್ತು ವಾಸ್ತುಶಿಲ್ಪವು ಸನ್ನತಿಯಲ್ಲಿ ಪ್ರಸ್ತುತ ಕಂಡುಬರದಿದ್ದರು, ಆಳ್ವಿಕೆಯ ಕಾಲದಲ್ಲಿ ಒಂದು ಉತ್ತಮ ಕಲೆ ಮತ್ತು ವಾಸ್ತುಶಿಲ್ಪದ ಕೇಂದ್ರವಾಗಿದ್ದೆಂದು ತಿಳಿದು ಬರುತ್ತದೆ.[೧೧] ಲಲಿತಕಲೆಗಳಾದ ಚಿತ್ರಕಲೆ, ನೃತ್ಯ, ಸಂಗೀತ, ಉನ್ನತ ಸ್ಥಾನಹೊಂದಿತ್ತು. ಗೋಪಾಲರಾವ್ ಅವರ ರಾಷ್ಟ್ರಕೂಟ ಶಿಲ್ಪಕಲೆ ಕೃತಿಯಲ್ಲಿ ಹೆಚ್ಚಿನ ವಿಷಯ ತಿಳಿಸಲಾಗಿದೆ.

ಸುಲೆಮಾನ ಪ್ರಕಾರ: ಸನ್ನತಿ ನಗರವು ಜಗತ್ತಿನ ಸುಂದರ ನಗರ ಎಂದು ಹೊಗಳಿದ್ದಾನೆ. ಮತ್ತು ಆಕಾಲದ ವಿಶ್ವದ ನಾಲ್ಕು ಬೃಹತ್ ರಾಷ್ಟ್ರಗಳಲ್ಲಿ ಈ ಸಾಮ್ರಾಜ್ಯವು ಒಂದಾಗಿತ್ತು ಎಂದು ಹೇಳಿದ್ದಾರೆ ಶಿವರುದ್ರಸ್ವಾಮಿ (೨೦೦೪:೧೩೬-೧೩೭), ಈ ಹೇಳಿಕೆಯು ರಾಷ್ಟ್ರಕೂಟರ ಆಳ್ವಿಕೆಯ ಬಗ್ಗೆ ವೈಭವಿಕರಿಸಿದ್ದನ್ನು ಗಮನಿಸಬಹುದಾಗಿದೆ.

**ಕಲ್ಯಾಣದ ಚಾಲುಕ್ಯರು**

ಕಲ್ಯಾಣದ ಚಾಲುಕ್ಯರು, ರಾಷ್ಟ್ರಕೂಟರನ್ನು ಪದಚ್ಯುತಗೊಳಿಸಿ ಅಧಿಕಾರ ಸ್ಥಾಪಿಸಿದರು. ಕ್ರಿ.ಶ. ೯೭೩ರಲ್ಲಿ ೨ನೇ ತೈಲಪನಿಂದ ಸ್ಥಾಪಿತವಾಗಿ ೧೧೯೮ರವರೆಗೆ ೨೨೫ ವರ್ಷಗಳ ಕಾಲ ಆಳ್ವಿಕೆಯನ್ನು ನಡೆಸಿದರು. ನರ್ಮದೆಯಿಂದ ಕಾವೇರಿಯವರೆಗೂ ಸಾಮ್ರಾಜ್ಯ ವ್ಯಾಪಿಸಿದ್ದು ಮಹಾರಾಷ್ಟ್ರದ ದಕ್ಷಿಣ ಭಾಗಗಳು, ಆಂದ್ರದ ಪಶ್ಚಿಮ ಭಾಗಗಳು, ಕರ್ನಾಟಕವು ಸಂಪೂರ್ಣ ಆಳ್ವಿಕೆಯನ್ನು ನಡೆಸಿದರು. ಇವರ ನೂರಾರು ಶಾಸನಗಳು ನಮಗೆ ದೊರೆತಿವೆ ಅವುಗಳಲ್ಲಿ ೬ನೇ ವಿಕ್ರಮಾದಿತ್ಯನವು ಹೆಚ್ಚಾಗಿ ಕಂಡುಬರುತ್ತವೆ. ಗುಲಬರ್ಗಾ ಜಿಲ್ಲೆಯಲ್ಲಿ ನೂರಾರು ಶಾಸನಗಳು ದೊರೆತಿದ್ದು ಅವರ ಆಡಳಿತ ಪ್ರಭಾವವು ಜಿಲ್ಲೆಯಾದ್ಯಂತ ಕಂಡುಬರುವುದು. ಬಾದಾಮಿ ಚಾಲುಕ್ಯರು ಮತ್ತು ಕಲ್ಯಾಣಿ ಚಾಲುಕ್ಯರ ಪರಸ್ಪರ ಸಂಬಂಧಿಗಳೆಂದು ಪ್ಲೀಟ್, ಆಲ್ತೇಕರ್ ಮತ್ತು ಭಂಡಾರ್ಕರ ಸಂಶಯ ವ್ಯಕ್ತಪಡಿಸಿದ್ದಾರೆ (ಕಾಮತ್ ೨೦೦೫:೮೭-೯೧). ಪ್ರಾರಂಭದಲ್ಲಿ ಏತಗಿರಿಯಲ್ಲಿ ಆಳ್ವಿಕೆ ನಡೆಸಿ ನಂತರ ಕಲ್ಯಾಣವನ್ನು ರಾಜಧಾನಿ ಮಾಡಿಕೊಂಡು ಆಳ್ವಿಕೆಯನ್ನು ನಡೆಸಿದರು ಪಾಟೀಲ (೧೯೯೭:೪೮), ಗೋಪಾಲ್‌ರಾವ್ (೨೦೦೭:೫೯-೬೨) ಕೃತಿಯಲ್ಲಿ ತಿಳಿದುಬರುತ್ತದೆ.

ಚಾಲುಕ್ಯ ವಂಶದ ಮೂಲ ಪುರುಷನಾದ ತೈಲಪನು ಚೋಳ, ಚೇದಿ ಅರಸರನ್ನೂ ಗೆದ್ದು, ಮಾಳ್ವ ಪ್ರದೇಶದ ಮಂಜನನ್ನು ಸೋಲಿಸುವುದರ ಮುಖಾಂತರ ರಾಜ್ಯವನ್ನು ವಶಪಡಿಸಿಕೊಂಡನು. ನಂತರ ಬಂದ ಸೋಮೇಶ್ವರ ಅಹಮಲ್ಲನು ಚೋಳರೊಡನೆ

ಕಾದಾಡಬೇಕಾಯಿತು. ಹಾಗೆಯೇ ಕನೋಜ, ಬಂಗಾಲ, ಆಸಾಮ್, ಸಿಂಹಳ ದ್ವೀಪದ ಅರಸರೆಲ್ಲರೂ ಇವನಿಗೆ ಶರಣಾಗತರಾದರಾದರು. ನಂತರ ಕೊನೆಯ ದಿನಗಳಲ್ಲಿ ಸೋಮಶ್ವರನಿಗೆ ವಿಷಮ ಜ್ವರ ಹುಟ್ಟಿತು. ಆಗ ತುಂಗಭಧ್ರೆಯ ಬದಿಗೆ ಬಂದು ಸುವರ್ಣದಾನ ಮಾಡಿ ನದಿಯಲ್ಲಿ ಮುಳುಗಿ ಸತ್ತು ಹೋದನು. ನಂತರ ಇಮ್ಮಡಿ ಸೋಮೇಶ್ವರ ಆಳ್ವಿಕೆಯನ್ನು ನಡೆಸಿದರು ಇವನ ನಂತರ ಕ್ರಿ.ಶ. ೧೦೭೬ರಲ್ಲಿ ೬ನೇ ವಿಕ್ರಮಾದಿತ್ಯನು ಆಳ್ವಿಕೆ ನಡೆಸಿದನು. ೧೦೭೬ ವಿಕ್ರಮ ಶಕೆಯನ್ನು ಪ್ರಾರಂಭಿಸಿದನು. ವಿಕ್ರಮಾದಿತ್ಯನು ಕರ್ನಾಟಕದ ಹೆಮ್ಮೆಯ ಚಕ್ರವರ್ತಿ ದೀರ್ಘ ಕಾಲದವರೆಗೆ, ೫೧ ವರ್ಷ ಆಳ್ವಿಕೆ ಮಾಡಿದನು. ಅನೇಕ ಯುದ್ದಗಳನ್ನು ನಡೆಸಿದನು. ವೆಂಗಿಯ ಚಾಲುಕ್ಯರು, ಕಂಚಿ ಕೇರಳದ ಅರಸರು, ಕಾಕೀತಿಯರನ್ನು, ಚೋಳರನ್ನು ಸೋಲಿಸಿದರು. ಚೋಳರ ನಿರಂತರವಾಗಿ ಯುದ್ದದಲ್ಲಿ ತೊಡಗಿದ್ದನು ಪಾಟೀಲ (೧೯೯೭:೫೦), ಆಲೂರು ವೆಂಕಟರಾಯರು (೨೦೦೬:೫೦-೫೧) ಬಸವರಾಜ (೨೦೦೪:೧೪೩) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

೬ನೇ ವಿಕ್ರಮಾದಿತ್ಯನು ಮುಖ್ಯವಾಗಿ ಶಾಂತಿ ಪ್ರಿಯನಾಗಿದ್ದು ಅನೇಕ ಜಲಾಶಯಗಳು ದೇವಾಲಯಗಳು ಮತ್ತು ಅಗ್ರಹಾರಗಳು ಸ್ಥಾಪನೆಯಾದವು. ಹಿಂದೂ ಕಾನೂನಿಗೆ ಆಧಾರಭೂತ ಕೃತಿಯಾದ "ಮಿತಾಕ್ಷರಸಂಹಿತೆ"ವನ್ನು ಈತನ ಆಸ್ಥಾನದಲ್ಲಿದ್ದ ಹಾಗೂ ಇದೇ ಜಿಲ್ಲೆಯ ಚಿತ್ತಾಪುರ ತಾಲೂಕಿನ ಮರ್ತುರಿಗೆ ಸೇರಿದ ವಿಜ್ಞಾನೇಶ್ವರನ್ನು ರಚಿಸಿದನ್ನು ವಿಕ್ರಮಾದಿತ್ಯನ ತಮ್ಮನಾದ ಜಯಸಿಂಹನು ಬನಾವಾಸಿ ೧೨೦೦, ಸಾಂತರಿಗೆ-೧೦೦೦, ಬೆಳವೊಲ-೩೦೦ ಪ್ರಾಂತ್ಯಗಳಿಗೆ ಮಹಾ ಮಂಡಳೇಶ್ವರನಾಗಿ ನೇಮಿಸಿದನ್ನು ವಿಕ್ರಮಾದಿತ್ಯ ೧೦೮೮-೮೯ ನಿಂಬರಗಿಯ ಶಾಸನದಲ್ಲಿ ನರ್ಮದಾ ನದಿಯನ್ನು ದಾಟಿ ಹೋಗಿ ಆ ನದಿಯ ದಡದ ರಾಜರನ್ನು ಗೆದ್ದನು ಎಂದು ತಿಳಿಸುತ್ತದೆ. ನಂತರ ಮುಮ್ಮಡಿ ಸೋಮೇಶ್ವರ ಅಧಿಕಾರಕ್ಕೆ ಬಂದನು. ಭೂಲೋಕಮಲ್ಲನೆಂಬ ಬಿರುದನ್ನು ಧರಿಸಿ ಸರ್ವಜ್ಞ ಚಕ್ರವರ್ತಿ ಎಂದು ಜನಪ್ರಿಯನಾದನು. ಇವನ ಆಳ್ವಿಕೆಯು ಬಹುತೇಕ ಶಾಂತಿಯಿಂದ ಕೂಡಿತ್ತು. ನಂತರ ಮುಮ್ಮಡಿ ತೈಲಪನು ಅಧಿಕಾರಕ್ಕೆ ಬಂದನು. ಇವನ ಮರಣದ ನಂತರ ಬಿಜ್ಜಳನು ಸ್ವತಂತ್ರ ಸಾರ್ವಭೌಮತ್ವ ಹೊಂದುವಂತಾಯಿತು ದಿವಾಕರ್ (೨೦೦೬:೩೩೨) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

ಗುಲಬರ್ಗಾ ಜಿಲ್ಲೆಯಲ್ಲಿ ಕಲ್ಯಾಣ ಚಾಲುಕ್ಯರ ಕಾಲದ ನೂರಾರು ಶಿಲಾಶಾಸನಗಳು ಲಭ್ಯವಿದ್ದು, ಆಳ್ವಿಕೆ ತಿಳಿದುಕೊಳ್ಳಲು ಸಹಾಯಕವಾಗಿವೆ. ಆಡಳಿತ ವಿಭಾಗಗಳೆಂದರೆ ಸಾಗರ-೫೦೦, ಆರಲು-೩೦೦, ಕೆಂಭಾವಿ-೨೪, ನೆರೆಯುಂಬೊಳೆ-೭೦ ಮುಂತಾದ ಆಡಳಿತ ಘಟಕಗಳು ಹೊಂದಿದ್ದು, ಏವೂರು, ಮುದನೂರು, ಎರೆರಾವ್, ಕುಳ, ಫೇರಿ, ಅಂದೇಲಿ, ಕೊಂಡಗುಳಿ ಸಗರ, ಸಿರವಾಳ, ಇವು ಪ್ರಸಿದ್ಧ ಅಗ್ರಹಾರ ಮತ್ತು ಪಟ್ಟಣ/ನಗರ ಆಗಿದ್ದವು. ಸೋಮೇಶ್ವರನ

ನಾಗಾವಿ ಶಾಸನವು (೧೦೫೮) ನಾಗಾವಿಯ ಅಗ್ರಹಾರದ ಘಟಕ ಸ್ಥಾನಕ್ಕೆ ಮಧುಪ ಅರಸ ದಣ್ಣಾಯಕನು ದತ್ತಿಬಿಟ್ಟ ವಿಚಾರವಿದೆ. ಇದೊಂದು ಪ್ರಾಚೀನ ವಿದ್ಯಾಕೇಂದ್ರವಾಗಿದ್ದು ವೇದಶಾಸ್ತ್ರ, ತರ್ಕಶಾಸ್ತ್ರ, ನ್ಯಾಯಶಾಸ್ತ್ರ ಮುಂತಾದ ವಿಷಯಗಳಲ್ಲಿ ವಿಶೇಷ ವಿದ್ಯಾರ್ಜನಗೆ ಅವಕಾಶವಿತ್ತೆಂದು ಶಾಸನ ತಿಳಿಸುತ್ತದೆ. ಸುರಪುರದ ಏವೂರು, ಆಳಂದ, ಬೈಚಬಾಳದ, ಮುದನೂರು, ಮುಂತಾದ ಸ್ಥಳಗಳಲ್ಲಿ ಇವರ ಶಾಸನಗಳು ಕಂಡುಬಂದು ಇವರ ಬಗ್ಗೆ ಹೆಚ್ಚಿನ ಬೆಳಕನ್ನು ಚಲ್ಲುತ್ತವೆ ಎಂದು ದಿವಾಕರ್ (೨೦೦೬:೩೯೯-೩೪೧), ಪಾಟೀಲ (೧೯೯೭:೫೧-೫೩) ತಮ್ಮ ಕೃತಿಯಲ್ಲಿ ವಿವರಿಸಿದ್ದಾರೆ.

ಕಲ್ಯಾಣ ಚಾಲುಕ್ಯರು ಧಮ್ಮ್, ಗದ್ಯಾಣ, ಪನ, ಹೊನ್, ಹಾಗ್, ಕಾಗಿ, ವೀಸಗಳಿಗೆ, ಮತ್ತು ಬೇಳೆಗಳ ಹೆಸರುಗಳು ಕಂಡುಬಂದಿವೆ. ಬೆಳ್ಳಿ, ಚಿನ್ನ ಮತ್ತು ತಾಮ್ರದ ನಾಣ್ಯಗಳು ಮುದ್ರಿಸುತ್ತಿದ್ದರು. ಶ್ರೀ ಚಂದ್ರ, ಸೂರ್ಯ, ದೇವಸ್ಥಾನ, ಗೋಪುರ, ಆನೆ, ಸಿಂಹ, ಮುಂತಾದ ನಾಣ್ಯಗಳ ಮೇಲೆ ಚಿತ್ರಗಳನ್ನು ಮುದ್ರಿಸಲಾಗುತ್ತಿತ್ತು ಎಂದು ಖಂಡೋಬರಾವ್ (೨೦೦೨:೫೯-೬೦) ತಮ್ಮ ಕೃತಿಯಲ್ಲಿ ನಮೂದಿಸಿದ್ದಾರೆ.

**ಕಲ್ಯಾಣದ ಕಲಚೂರಿಗಳು**

ಕಲ್ಯಾಣ ಚಾಲುಕ್ಯರ ನಂತರ ಕಲಚೂರಿಗಳು ಅಧಿಕಾರಕ್ಕೆ ಬಂದರು. ಕೇವಲ ೨೨ ವರ್ಷಗಳ ಕಾಲ ಆಳ್ವಿಕೆ ನಡೆಸಿದರು, ಆದರೂ ಈ ಅಲ್ಪ ಅವಧಿಯಲ್ಲಿಯೂ ಕೂಡ ಕರ್ನಾಟಕವು ರಾಜಕೀಯ, ಸಮಾಜಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಸಾಕಷ್ಟು ಬದಲಾವಣೆಗಳೂ ಕಂಡುಬಂದಿತು. ಮೂಲತಹ ಮಧ್ಯ ಭಾರತದ ಕಾಲಿಂಜರಕ್ಕೆ ಸೇರಿದ ಯದು ಸಹ ಪ್ರಜಿತ್ ವಂಶಕ್ಕೆ ಸೇರಿದವರು. ಬಾದಾಮಿ ಚಾಲುಕ್ಯ, ರಾಷ್ಟ್ರಕೂಟ ಮತ್ತು ಕಲ್ಯಾಣ ಚಾಲುಕ್ಯರ ಜೊತೆ ಸಂಬಂಧಿಗಳಾಗಿದ್ದರು. ಇವರ ಮೂಲದ ವಿವಿಧತೆಯನ್ನು ಸೂರ್ಯನಾಥ ಕಾಮತ್ (೨೦೦೫:೯೬-೧೦೧), ದಿವಾಕರ್ (೨೦೦೬:೩೪೬), ಪಾಟೀಲ (೧೯೯೭:೫೩), ಗೋಪಾಲರಾವ್ (೨೦೦೭:೬೩-೬೪) ಮುಂತಾದ ಕೃತಿಕಾರರ ಕೃತಿಗಳಲ್ಲಿ ಮೇಲಿನ ವಿಷಯ ತಿಳಿಸಿದ್ದಾರೆ.

ಕಲಚೂರಿಯ ಎರಡನೇ ಬಿಜ್ಜಳ ಕ್ರಿಶ ೧೧೨೯ರ ಸುಮಾರಿಗೆ ತರಿಕಾಡುನಾಡು, ಕರಾಡ-೪೦೦೦ ಹಾಗೂ ತರ್ದವಾಡಿ-೧೦೦೦ ಮಾಂಡಳಿಕನಾಗಿ ಕ್ರಿಶ೧೧೫೭ರಲ್ಲಿ ಸ್ವತಂತ್ರ ಘೋಷಿಸಿಕೊಂಡು ಆಳ್ವಿಕೆ ಮಾಡಲಾರಂಭಿಸಿದ. ಇವನು ಮಹಾರಾಜಾಧಿಕಾರ, ಕಾಲಂಜ ಪುರುವರಾಧೀಶ್ವರ, ಸುವರ್ಣವೃಷಭಧ್ವಜ ಮುಂತಾದ ಬಿರುದುಗಳು ಹೊಂದಿದ್ದನು. ಎರಡನೇ ಬಿಜ್ಜಳನು ತೈಲಪನು ಕ್ರಿಶ ೧೧೬೨ ರಲ್ಲಿ ನಿಧನ ಹೊಂದಿದಾಗ ಕಲ್ಯಾಣ ಚಕ್ರವರ್ತಿಯಾದನು. ಬಂಡೆದ್ದ ಹೊಯ್ಸಳ ನರಸಿಂಹ ಹಾಗೂ ಉಚ್ಚಂಗಿಯ ವಿಜಯ ಪಾಂಡ್ಯನನ್ನು ಬಗ್ಗಿಸಿದನು.

ಅಲ್ಲದೆ ಸೇವುಣರು, ಚೋಳರು ಆಂಧ್ರದ ಚೋಡರು, ಹಾಗೂ ಕಳಿಂಗದ, ಗಂಗರಾಘವನನ್ನು, ಗುಜರಾತಿನ ಚಾಲುಕ್ಯ ಕುಮಾರ ಪಾಲನನ್ನು ಸೋಲಿಸಿದನು ಎಂದು ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೭೭:೫೪) ಕೃತಿಯಲ್ಲಿ ತಿಳಿಸಲಾಗಿದೆ.

ಬಿಜ್ಜಳನು ಭಂಡಾರಿ ಬಸವಣ್ಣನವರ ನೇತೃತ್ವದಲ್ಲಿ ಆದ ವೀರಶೈವ ಜಾಗೃತಿ ಕಲ್ಯಾಣಕ್ಕೆ ದೂರದಿಂದ ಶಿವಶರಣರನ್ನ ಆಕರ್ಷಿಸಿತು, ಜಾತಿ, ಬೇಧ, ಭಾವ, ಮೇಲು ಕೀಳೂ ಎಂಬ ಭಾವನೆ ತೊರೆದು ಹಾಕಿದರು ಕಾಯಕದ ಮಹತ್ವ ಅರುಹಿ ಸತ್ಯ ಶುದ್ಧ ಕಾಯಕ ಪ್ರತಿಪಾದಿಸಿದರು. ಅಸ್ಪೃಶ್ಯ ಜಾತಿಯ ತರುಣನ ಜೊತೆ ಬ್ರಾಹ್ಮಣಿ ತರುಣಿಯನ್ನು ವಿವಾಹ ಮಾಡಿದನು. ಸಂಪ್ರಾದಾಯಸ್ಥ ಶರಣರು ಬಿಜ್ಜಳನಿಗೆ ದೂರು ನೀಡಿದರು. ವರ್ಣಾಶ್ರಮ ಧರ್ಮ ರಕ್ಷಣೆ ರಾಜನ ಕರ್ತವ್ಯವೆಂಬ ಒತ್ತಾಯ ನೀಡಿದರು, ವಧು ವರರ ತಂದೆಯರನ್ನು ಮರಣದಂಡನೆ ವಿಧಿಸಿದನು ಇದರಿಂದ ಮನನೊಂದ ಬಸವಣ್ಣ ಕಲ್ಯಾಣವನ್ನು ತ್ಯಜಿಸಿ ಕಪ್ಪಡಿ ಸಂಗಮಕ್ಕೆ ಬಂದು ಐಕ್ಯರಾದರು ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೭೭:೫೪), ಆಲೂರು ವೆಂಕಟರಾಯರು (೨೦೦೬:೫೫) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

ಬಿಜ್ಜಳನು ತನ್ನ ಜೀವಂತವಿದ್ದಾಗಲೇ ಕ್ರಿ.ಶ. ೧೧೬೭ರ ಹಿರಿಯ ಮಗನಾದ ಸೋಮದೇವನಿಗೆ ಅಧಿಕಾರವಿತ್ತನು. ನಂತರ ಸಂಕಮನು, ಅಹಮಲ್ಲ, ಸಿಂಗಣ್ಣ, ಮುಂತಾದ ಅರಸರು ೨೬ ವರ್ಷಗಳ ಸಂಕ್ಷಿಪ್ತ ಅವಧಿಯಲ್ಲಿ ಆಳ್ವಿಕೆ ನಡೆಸಿದರು ಎಂದು ಶಾಸನ ಮುಖಾಂತರ ತಿಳಿದು ಬರುತ್ತದೆ. ಗುಲಬರ್ಗಾ ಜಿಲ್ಲೆಯಲ್ಲಿ ಇವನ ಕಾಲದ ಸುಮಾರು ೫೦ ಶಾಸನಗಳು ಇಲ್ಲಿಯವರೆಗೂ ಲಭ್ಯವಿದ್ದು, ಪ್ರಮುಖವೆಂದರೆ ಸೇಡಂ ತಾಲೂಕಿನ ಅಡಕಿ ಗ್ರಾಮದ ಶಾಸನ ಹಲವುದತ್ತಿಗಳನ್ನು ಉಲ್ಲೇಖಿಸುತ್ತದೆ. ಆಫಜಲ್‌ಪುರದ ತಾಲೂಕಿನ ಚಿನಮಳ್ಳಿಯಲ್ಲಿ ಸುರಪುರದ ಹಗರಟಗಿಯ ಸಂಕಮನ ಶಾಸನವು, ವರ್ತಕರು ಮತ್ತು ದಾನದ ಉಲ್ಲೇಖವಿದೆ ಮತ್ತು ಚಿಕ್ಕಮುದನೂರಿನ ಬಿಜ್ಜಳ ಆಳ್ವಿಕೆ, ಭೂಮಿದತ್ತಿಯ ಬಗೆಗೆ ತಿಳಿಸುತ್ತದೆ. ಚಿತ್ತಾಪುರ ತಾಲೂಕಿನ ಕಾಳಿಗೆ, ಸೇಡಂ, ತಾಲೂಕಿನ ಮಳಖೇಡ ಅಗ್ರಹಾರದ ಅಭಿವೃದ್ಧಿಗಾಗಿ ನೀಡಿದ ದತ್ತಿಯನ್ನು ಉಲ್ಲೇಖಿಸುತ್ತದೆ. ಅಫಜಲ್‌ಪುರ ತಾಲೂಕಿನ ಗೋಬ್ಬುರು, ಆಳಂದ, ಊಡಲು ಗ್ರಾಮದಲ್ಲಿ ಗುಲಬರ್ಗಾ ತಾಲೂಕಿನ ಹರಸೂರಿನ ಕಲ್ಲೂರಿನ, ಸುರಪುರದ ತಾಲೂಕಿನ ಹೆಮ್ಮಡಗಿ, ಜೇವರ್ಗಿ ತಾಲೂಕಿನ, ಯಡ್ರಾಮಿ ಗ್ರಾಮದಲ್ಲಿ ಶಾಸನಗಳು ಪತ್ತೆಯಾಗಿವೆ. ಹೆಚ್ಚಾಗಿ ದಾನದತ್ತಿ, ಬಿರುದುಗಳು ವಂಶಾವಳಿ ತಿಳಿಸುವ ಶಾಸನಗಳು ಹೆಚ್ಚಾಗಿರುವುದನ್ನು ಕಂಡುಬರುತ್ತವೆ ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೭೭:೫೫) ಕೃತಿಯಲ್ಲಿ ತಿಳಿಸಿದ್ದಾರೆ. ಹನುಮಾಕ್ಷಿ ಗೋಗಿಯವರು 'ಕಲಬುರ್ಗಿ ಜಿಲ್ಲೆಯ ಶಾಸನಗಳು' (೧೯೯೬) ಕೃತಿಯಲ್ಲಿ ಸಂಗ್ರಹಿಸಿದ್ದಾರೆ.

ಕಲಚೂರಿಗಳ ನಾಣ್ಯದ ಬಗ್ಗೆ ಹೆಚ್ಚಿನ ಮಾಹಿತಿ ದೊರೆತಿಲ್ಲ. ಆದರೂ ಕೆಲವೊಂದು ಸಂಶೋಧನೆಗೆ ಸಿಕ್ಕಿರುವ ನಾಣ್ಯಗಳಲ್ಲಿ ೬೭ ಚಿನ್ನ ನಾಣ್ಯಗಳ ೫೪.೫ ಗ್ರೇನ್ ತೂಕವಿದ್ದು ರಾಯಮುರಾರಿ, ಸೇವಿದೇವ ಎಂದು ಮುದ್ರಿಸಿದ್ದರೆಂದು ಇಲಿಯಟ್ ತಿಳಿಸಿದ್ದಾರೆ. ಕಲ್ಯಾಣ ಚಾಲುಕ್ಯರ ನಾಣ್ಯಗಳಿಗೆ ಹೋಲುತ್ತಿದ್ದು ೨ನೇ ಬಿಜ್ಜಳನು ಕಲಚೂರಿ ಎಂದು ಮುದ್ರಸಲಾಗಿತ್ತು. ಗೀರಾಜಪತಿ ಮತ್ತು ಶ್ರೀ ಗಣೇಶನ, ಬಸವಣ್ಣನವರ ಹೆಸರಿನಲ್ಲಿ ಮುದ್ರಿತ ನಾಣ್ಯವನ್ನು ಬೆಳಕಿಗೆ ತಂದಿದ್ದಾರೆ ಎಂದು ಖಂಡೋಬಾರಾವ್ (೨೦೦೨:೬೮) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

**ದೇವಗಿರಿಯ ಸೇವುಣರು**

ದೇವಗಿರಿಯ ಯಾದವರ ಇತಿಹಾಸವು ಕಲ್ಯಾಣ ಚಾಲುಕ್ಯರು ಮತ್ತು ಕಲಚೂರಿಗಳ ಅಧಿಪತ್ಯವು ಕೊನೆಗೊಂಡ ನಂತರ ಕರ್ನಾಟಕದಲ್ಲಿ ಇವರ ಆಳ್ವಿಕೆ ಪ್ರಾರಂಭವಾಯಿತು. ವಾಸ್ತವವಾಗಿ ಈ ಮನೆತನದ ಮೂಲವನ್ನು ಪುರಾಣಗಳ ಅಸ್ಪಷ್ಟ ದಿನಗಳಿಗೆ ಕೊಂಡೊಯ್ಯಲಾಗುತ್ತದೆ. ಮಧ್ಯ ಯುಗಿನ ರಾಜವಂಶಗಳಂತೆ ತಾವು ಪೌರಾಣಿಕ ನಾಯಕ ಯದುವಿನಿಂದ ಬಂದವರೆಂದೂ, ದ್ವಾರಕಾ ಅಥವಾ ದ್ವಾರಾವತಿಯಿಂದ ಬಂದವರೆಂದೂ ಐದನೇ ಭಿನ್ನಮನು (೧೧೮೫-೧೧೯೩) ಕಲಚೂರಿಯನ್ನು ಮತ್ತು ಕಲ್ಯಾಣಿ ಚಾಲುಕ್ಯರನ್ನು ಸೋಲಿಸಿದ ನಂತರ ಅಲ್ಲಿಂದ ಮುಂದಕ್ಕೆ ಈ ವಂಶದ ಹೆಸರು ದೇವಗಿರಿಯ ಯಾದವರು ಅಥವಾ ಸೇವುಣರೆಂದೇ ಬಳಕೆಗೆ ಬಂದಿತು. ದಕ್ಷಿಣ ರಾಜಕೀಯ ವಿವಾದಿಂದ ಭಿನ್ನಮನಿಗೆ ಆಕ್ರಮಣಕಾರಿ ದಂಡೆಯಾತ್ರೆಯನ್ನ ನಡೆಸಲು ಅವಕಾಶವಾಯಿತು. ಅವನು ೨ ಲಕ್ಷಕ್ಕೆ ಮೇಲ್ಪಟ್ಟ ಕಾಲಾಳುಗಳು, ಹನ್ನೆರಡು ಸಾವಿರ ರಾವುತರೂ ಉಳ್ಳ ಪ್ರಬಲ ಸೈನ್ಯವನ್ನು ಹೊಂದಿತ್ತು. ಕಲ್ಯಾಣದ ೪ನೇ ಸೋಮೇಶ್ವರದಿಂದ ಚಾಲುಕ್ಯರ ರಾಜಧಾನಿ ಕಲ್ಯಾಣವೊಂದನ್ನಲ್ಲದೆ, ಎರಂಬಗೆ, ರಾಜಧಾನಿಯಾದ ಕಿಸುಕುಡನಾಡನ್ನು ತರ್ದವಾಡಿ ನಾಡನ್ನೂ, ಬೇಳವೊಲವನ್ನೂ ಸುತ್ತಮುತ್ತಲಿನ ಪ್ರದೇಶವನ್ನ ಗೆದ್ದು ಗೋವೆಯ ಕದಂಬರು ಭಿಲ್ಲಮನ ಸಾರ್ವಬೌಮತ್ವವನ್ನು ಅಂಗೀಕರಿಸಿತು, ನಿರಂತರವಾಗಿ ದೋರಸಮುದ್ರದ ಹೋಯ್ಸಳರೊಂದಿಗೆ ತಾವು ಹೊರಾಟವನ್ನ ನಡೆಸುತ್ತಿದ್ದುದರಿಂದ ಅವರ ರಾಜ್ಯದ ಎಲ್ಲೆಯು ಆಗಾಗ ಬದಲಾಗುತ್ತಿತ್ತು. ಭಿನ್ನಮನು ಕ್ರಿ.ಶ. ೧೧೯೩ರಲ್ಲಿ ಮರಣನಂತರ ಜೈತುಗಿಯಸಿಂಹಾಸನ ವನ್ನೇರಿದನು. ಈತನ ತರುವಾಯ ಸಿಂಘಣನು ಕ್ರಿ.ಶ.೧೨೦೦ಕ್ಕೆ ಅಧಿಕಾರಕ್ಕೆ ಬಂದನು. ಕ್ರಿ.ಶ. ೧೨೪೭ರಲ್ಲಿ ಕೃಷ್ಣನು ಅಧಿಕಾರಕ್ಕೆ ಬಂದನು. ನಂತರ ಮಹಾದೇವ (೧೨೬೦-೭೧) ಇವನ ಕಾಲದಲ್ಲಿ ಗ್ರಂಥಗಳು ರಚನೆಯಾದವು. ದೇವಾಲಯಗಳು, ವಾಸ್ತು ಪಂಥಕ್ಕೆ "ಹೇಮಾದ್ರಿ ಪಂಥ"ವೆಂಬ ಅನ್ವರ್ಥನಾಮವಾಗಿದೆ[೨] ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೫೬-೫೮), ಷೇಕ್ ಅಲಿ (೧೯೯೭:೭೬), ದಿವಾಕರ್ (೨೦೦೬:೪೭೯) ಕೃತಿಯಲ್ಲಿ ತಿಳಿಸಿದ್ದಾರೆ.

ಮಹಾದೇವನ ಪತನ ನಂತರ ರಾಮದೇವನು ಸಿಂಹಾಸನಕ್ಕೆ ಬಂದನು. ನೆರೆ ಅರಸನಾದ ಪರಮಾರರು, ಕಾಕತೀಯರು ಮತ್ತು ಹೊಯ್ಸಳರ ಮೇಲೆ ಅಗಾಗ ಯುದ್ಧವಾಗುತ್ತಿತ್ತು. ಹೀಗೆ ನೆರೆ ರಾಜ್ಯಗಳೊಂದಿಗೆ ಯುದ್ಧ ಯಾರಿಗೂ ಸಹಾಯ ಮಾಡಲಿಲ್ಲ. ಅವುಗಳ ಉದ್ದೇಶ ರಾಜ್ಯ ವಿಸ್ತರಣೆ ಯಾದರೂ ಪರಸ್ಪರ ನಡೆವೆ ಬೆಳೆಯುತ್ತಿದ್ದ ಕಹಿ ಭಾವನೆ, ಮತ್ತು ಸಂಪನ್ಮೂಲಗಳು ಪೋಲಾಗಿ ಅವರು ದುರ್ಬಲರಾದರೂ ಇವುಗಳಿಂದ ಉಂಟಾದ ಅನೈಕ್ಯತೆ ಹೊರಗಿನ ದಾಳಿಕೋರರರನ್ನು ಆಕರ್ಷಿಸಿತು. ಇದರ ಲಾಭ ಬಳಸಿಕೊಂಡರು. ಅದರಲ್ಲಿ ಪ್ರಭಾವಶಾಲಿ ಅಲ್ಲಾ–ಉ–ದ್ದಿನ್ ಖಿಲ್ಜಿ ಎಂದು ಷೇಕ್ ಅಲಿ (೧೯೭೭:೮೭) ತಮ್ಮ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

ಗುಲಬರ್ಗಾ ಜಿಲ್ಲೆಯಲ್ಲಿ ಸೇವುಣರ ಕಾಲದ ಹಲವಾರು ಶಾಸನಗಳು ಲಭ್ಯವಿದ್ದು ಅವರ ಆಳ್ವಿಕೆಗೆ ಒಳಪಟ್ಟಿರುವುದನ್ನು (ಶಹಪುರ) ಸಿರವಾಳದ ಭಿಲ್ಲಮನ ಕ್ರಿಶ ೧೧೮೯ರ ಶಾಸನ, (ಚಿತ್ತಾಪುರ) ಇಂಗಳೀಗೆಯ ಯಾದವ ಸಿಂಘಣನ ಕ್ರಿಶ ೧೨೨೯ರ ಶಾಸನ, (ಸುರಪುರ) ಹಗರಿಟಿಗೆಯ ಸಿಂಘನ ಕ್ರಿಶ ೧೨೩೧ರ ಶಾಸನ, ಯಾಳಿಗೆಯಯಾದ ಮಹಾದೇವನ ಕ್ರಿಶ ೧೨೬೬ರ ಶಾಸನ (ಜೇವರ್ಗಿ) ಆಂದೋಲದ ರಾಮಚಂದ್ರನ ಕ್ರಿಶ ೧೩೩೮ರ ಶಾಸನ (ಅಫಜಲ್‌ಪುರ) ಬನಮಳ್ಳಿಯ ರಾಮಚಂದ್ರದೇವನ ಕ್ರಿಶ ೧೨೯೨ರ ಶಾಸನ ದೊರೆತಿರುವುದನ್ನು ಸವಿವರವಾಗಿ ಗುಲಬರ್ಗಾ ಗ್ಯಾಸೆಟಿಯರ್ (೧೯೭೭:೫೮) ಕೃತಿಯಲ್ಲಿ ಉಲ್ಲೇಖಿಸಲಾಗಿದೆ.

ಲಂಕಾ ಅಥವಾ ಸಿಲೋನಿನಿಂದ ಪ್ರಚಾರಕ್ಕೆ ಬಂದ 'ಮೊಡಿ' ಎಂಬ ಬರಹ ವಿಧಾನವನ್ನು ಹೆಮಾದ್ರಿ ಆಚರಣೆಗೆ ತಂದನೆಂದು ಪ್ರತೀತಿ ದಿವಾಕರ (೨೦೦೬:೪೮೨) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

ಮುಸ್ಲಿಮ್ ದಂಡೆಯಾತ್ರೆಗಳು ಮತ್ತು ರಾಜ್ಯದಲ್ಲಿನ ಅಂತಹಕಲಹಗಳು ಪ್ರಧಾನವಾಗಿ ಯಾದವ ವಂಶದ ಅವನತಿಗೆ ಕಾರಣವಾದವೆಂದು ಕರ್ನಾಟಕದ ಪರಂಪರೆಯಲ್ಲಿ ತಿಳಿಸಲಾಗಿದೆ. ಅಲ್ಲಾವುದ್ದೀನ್ ದಂಡೆತ್ತಿ ಬಂದನು. ಆಗಿನ ಕಾಲದ ಘಟನೆಗಳ ನಿರೂಪಕರರಾದ ಬರಾನಿ, ಇಸಾಮಿ, ಫೆರಿಸ್ತಾ ಈ ಎಲ್ಲ ಮುಸ್ಲಿಮ್ ಅಗಾಧವಾದ ಕೊಳ್ಳೆಯನ್ನು ವಿವರಿಸಿದ್ದಾರೆ. ಫರಿಸ್ತಾ ಹೇಳುವಂತೆ ಅಲ್ಲಾವುದ್ದೀನನು ೬೦೦ ಮಣ ಚಿನ್ನ, ೭ ಮಣ ಮುತ್ತು, ೨ ಮಣ ವಜ್ರ, ಕೆಂಪು, ಪಚ್ಚೆ, ನೀಲಂ, ಮತ್ತಿತರ ಪ್ರಾಶಸ್ತ್ಯ ಶಿಲೆಗಳು, ೧,೦೦೦ ಮಣ ಬೆಳ್ಳಿ ಮತ್ತು ೪೦೦೦ ರೇಷ್ಮೆ ಮತ್ತಿತರ ವಸ್ತುಗಳು ಹೊಂದಿದ್ದರು ಎಂದು ಹೇಳಿದ್ದಾರೆ ಇದು ದಿವಾಕರ್‌ರು ಕರ್ನಾಟಕದ ಪರಂಪರೆಯಲ್ಲಿ (೨೦೦೬:೪೮೩) ಉಲ್ಲೇಖಿಸಿದ್ದು, ಈ ವಿಷಯವನ್ನು ಗಮನಿಸಿದರೆ ಉತ್ಪ್ರೇಕ್ಷೆಯಿಂದ ಕೂಡಿದ್ದು ಅಸತ್ಯಕ್ಕೆ ದೂರವಾದ ಅಭಿಪ್ರಾಯವನ್ನು ಫರಿಸ್ತಾ ನೀಡಿರುವುದನ್ನು ನೋಡಬಹುದು.

ಗುಲಬರ್ಗಾ ಪ್ರದೇಶದ ಪ್ರಾಚೀನ ಕಾಲದ ಚರಿತ್ರೆಯನ್ನು ಗಮನದಲ್ಲಿರಿಸಿಕೊಂಡು, ಕೃತಿಗಳು ಹೆಚ್ಚಾಗಿ ರಚನೆಗೊಂಡಿರುವುದನ್ನು ಕಾಣುವುದಿಲ್ಲ. ಕೆಲವು ಕೃತಿಗಳು ಕೆಲವು ಅಧ್ಯಯನಗಳಲ್ಲಿ

ಸೀಮಿತಗೊಂಡ ಕೃತಿಗಳು ರಚನೆಗೊಂಡಿದ್ದು, ಗುಲಬರ್ಗಾ ಪ್ರದೇಶದ ಸಂಕ್ಷಿಪ್ತವಾಗಿ ಇತಿಹಾಸದ ಮೇಲೆ ಬೆಳಕನ್ನು ಚೆಲ್ಲಲೂ ಸಹಾಯಕವಾಗಿದೆ. ಆದರೂ ಕೆಲ ಕೃತಿಗಳು ಗುಲಬರ್ಗಾ ಪ್ರದೇಶಕ್ಕೆ ಸಂಬಂಧಪಟ್ಟಿವೆ. ಎಂ.ಬಿ. ಪಾಟೀಲರ ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೭೭:೪೦-೫೪), ಹನುಮಾಕ್ಷಿಗೋಗಿ ಅವರ ಕಲ್ಬುರ್ಗಿ ಜಿಲ್ಲೆಯ ಶಾಸನಗಳು (೧೯೯೬), ಈ ಪ್ರದೇಶದ ಶಾಸನಗಳು ಒಂದು ಕಡೆಗೆ ಕ್ರೋಢೀಕರಿಸಿ ಅದರ ಪಠ್ಯ ಮಾತ್ರ ಕೊಟ್ಟಿದ್ದು ಹೆಚ್ಚಿನ ವಿವರಣೆಯನ್ನು ಹೊಂದಿಲ್ಲ. ಟಿ.ಎಂ. ಭಾಸ್ಕರ್ ಮತ್ತು ಶ್ರೀ ರಾಜಶೇಖರ ಹತಗುಂದಿ ಸಂಪಾದಿಸಿದ ಕೃತಿ 'ಕಲಬುರ್ಗಿ ಜಿಲ್ಲೆ ದರ್ಶನ' (೨೦೦೫:೨೧೯-೨೨೬), ಅಪ್ಪಾರಾವ್ ಅಕ್ಕೋಣಿ ಅವರ ಸಂಪಾದಿತ 'ಗುಲಬರ್ಗಾ ಜಿಲ್ಲೆ ಕಥಾ ಸಂಕಲನ' (೨೦೧೦), ಧ್ರುವನಾರಾಯಣ ಅವರು ಸಂಪಾದಿತ 'ಸುರಪುರ ಸಂಸ್ಥಾನದ ಇತಿಹಾಸ' (೨೦೦೫), ಮುಡಬಿ ಗುಂಡೇರಾವ್ ಅವರು 'ಸೇಡಮ್ ತಾಲೂಕಿನ ಐತಿಹಾಸಿಕ ಸ್ಮಾರಕಗಳು' (೧೯೯೯), ಡಿ.ಎನ್.ಅಕ್ಕಿ ಅವರ 'ಸಗರನಾಡಿನ ಸಿರಿ' (೧೯೯೬), ಈ ಕೃತಿಗಳಲ್ಲಿ ಕೆಲವು ಕೃತಿಗಳು ಪ್ರಾಂತೀಯತೆ ಒಳಗೊಂಡ ಇತಿಹಾಸವನ್ನು ರಚನೆಗೊಂಡ ಕೃತಿಗಳಾಗಿವೆ. ಪರಿಪೂರ್ಣವಾಗಿ ಗುಲಬರ್ಗಾ ಪ್ರದೇಶದ ಇತಿಹಾಸವನ್ನು ಕಟ್ಟಿಕೊಡಲು ವಿಫಲವಾಗುತ್ತವೆ. ಸೈದ್ಧಾಂತಿಕವಾಗಿ ಗುಲಬರ್ಗಾ ಪ್ರದೇಶದ ಚರಿತ್ರೆಯು ಬೆಳವಣಿಗೆ ಕುರಿತು ಚರಿತ್ರೆ ಲೇಖನಶಾಸ್ತ್ರಕ್ಕೆ ಇನ್ನೂ ಹೆಚ್ಚಿನ ಕೃತಿಗಳನ್ನು ಪರಿಗಣಿಸುವುದರ ಅಭ್ಯಸಿಸುವ ಪ್ರಯತ್ನಗಳು ಮಾಡಲಾಗಿದೆ. ಈ ಮೇಲ್ಕಂಡ ರೀತಿಯಲ್ಲಿ ವಿವರಿಸುವಾಗ ಈ ಒಂದು ಅಧ್ಯಯನ ಉದ್ದೇಶ ಮತ್ತು ವ್ಯಾಪ್ತಿ, ಸ್ವರೂಪದಂತೆ ವಿವರಿಸಲಾಗಿದೆ. ಮುಂದಿನ ಚರಿತ್ರೆ ಬೆಳವಣಿಗೆ ಮತ್ತು ಚರಿತ್ರೆ ಲೇಖನಶಾಸ್ತ್ರದ ಪ್ರಯತ್ನಗಳು ಈ ಕೆಳಕಂಡಂತೆ ವಿವರಿಸಲಾಗಿದೆ.

## ಮಧ್ಯಕಾಲೀನ ಚರಿತ್ರೆ ಕೃತಿಗಳ ಅವಲೋಕನ

ಗುಲಬರ್ಗಾ ಪ್ರದೇಶದ ಚರಿತ್ರೆ ರಚನೆಯಲ್ಲಿ ಮಧ್ಯಕಾಲೀನ ಚರಿತ್ರೆಯು ವಿಭಿನ್ನವಾಗಿದ್ದು ವಿಶಾಲ ಸಾಮ್ರಾಜ್ಯ, ಸಂಸ್ಕೃತಿಗಳು ಬೆಳವಣಿಗೆಗೊಂಡಿವೆ. ಇಲ್ಲಿ ಹಿಂದೂ ಮುಸ್ಲಿಮ್‌ರ ನಡುವಿನ ಹೋರಾಟಗಳು, ಪೈಪೋಟಿಗಳು ಸಾಮಾನ್ಯವಾಗಿ ಕಂಡುಬರುತ್ತವೆ. ಗುಲಬರ್ಗಾ ಪ್ರದೇಶವು ಬಹುತೇಕ ಮುಸ್ಲಿಮರಿಂದ ಆಳ್ವಿಕೆ ಒಳಪಟ್ಟಿದ್ದು ಕಂಡುಬರುತ್ತದೆ. ಆದರೂ ಮಧ್ಯಕಾಲೀನ ಚರಿತ್ರೆಯಲ್ಲಿ ಆಳ್ವಿಕೆ ನಡೆಸಿದ ರಾಜವಂಶಗಳೆಂದರೆ ವಿಜಯನಗರ ಸಾಮ್ರಾಜ್ಯ, ಬಹಮನಿ ಸುಲ್ತಾನರು, ಬಿಜಾಪುರದ ಶಾಹಿಸುಲ್ತಾನರು, ಮೊಗಲರು, ಸುರಪುರದ ನಾಯಕರು, ಪ್ರಮುಖರಾಗಿದ್ದಾರೆ. ಪ್ರಸ್ತುತ ಅಧ್ಯಾಯದ ಭಾಗದಲ್ಲಿ ಇವರ ರಾಜಕೀಯ ಬೆಳವಣಿಗೆ, ಆಡಳಿತ ಬೆಳವಣಿಗೆ ಮತ್ತು ಪ್ರಾಮುಖ್ಯತೆಯನ್ನು ವಿವಿಧ ಕೃತಿಗಳು, ಲೇಖನಗಳನ್ನು ಅವಲೋಕಿಸುವುದರ ಮುಖಾಂತರ ಸೈದ್ಧಾಂತಿಕವಾಗಿ ವಿವರಿಸಲು ಪ್ರಯತ್ನಿಸಲಾಗಿದೆ.

ಮಧ್ಯಕಾಲೀನ ಚರಿತ್ರೆಯಲ್ಲಿ ವಿಜಯನಗರ ಸಾಮ್ರಾಜ್ಯ, ಬಹಮನಿ ಸುಲ್ತಾನರು, ಬಿಜಾಪುರದ ಶಾಹಿ ಸುಲ್ತಾನರು, ಮೊಗಲರು, ಸುರಪುರದ ನಾಯಕರು, ಕುರಿತಾದ ಅಧ್ಯಯನಕ್ಕೆ ಎಂ.ಬಿ. ಪಾಟೀಲ ಅವರು ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೫೮-೭೨), ಷೇಕ್ ಅಲಿ ಅವರ ಕರ್ನಾಟಕ ಚರಿತ್ರೆ ಸಂಪುಟ ೩ ಮತ್ತು ೪ (೧೯೯೭), ದಿವಾಕರ್ ಅವರ ಕರ್ನಾಟಕದ ಪರಂಪರೆ (೨೦೦೬:೧-೭೦), ಆಲೂರು ವೆಂಕಟರಾಯರ ಕರ್ನಾಟಕ ಗತವೈಭವ (೨೦೦೬), ಎ.ವಿ.ನರಸಿಂಹಮೂರ್ತಿಯವರ ದೆಹಲಿ ಸುಲ್ತಾನರ ಆಧಿಪತ್ಯ ಭಾಗ-೧ (೨೦೦೧:೩೮೧-೪೭೮), ಧ್ರುವನಾರಾಯಣ ಸಂಪಾದಿತ ಸುರಪುರ ಸಂಸ್ಥಾನದ ಇತಿಹಾಸ (೨೦೦೫), ಹನುಮಾಕ್ಷಿ ಗೋಗಿ (ಸಂ) ಕಲ್ಬುರ್ಗಿ ಜಿಲ್ಲೆಯ ಶಾಸನಗಳು (೧೯೯೬), ಡಿ.ಎನ್.ಅಕ್ಕಿ, ಸಗರನಾಡಿನ ಸಿರಿ (೧೯೯೬), ಮುಂತಾದ ಕೃತಿಗಳು ಅಧ್ಯಯನಕ್ಕೆ ಸಹಕಾರಿಯಾಗಿವೆ.

## ವಿಜಯನಗರ ಸಾಮ್ರಾಜ್ಯ

ವಿಜಯನಗರ ಸಾಮ್ರಾಜ್ಯವು ಮಧ್ಯಕಾಲೀನ ಚರಿತ್ರೆಯಲ್ಲಿ ಪ್ರಮುಖ ರಾಜವಂಶಗಳಲ್ಲಿ ಒಂದಾಗಿದ್ದು. ಇದು ದಕ್ಷಿಣ ಭಾರತದಲ್ಲಿ ತನ್ನ ಪ್ರಭುತ್ವವನ್ನು ಸಾಧಿಸಿತ್ತು. ಕ್ರಿ.ಶ. ೧೩೩೬ರಲ್ಲಿ ಸಂಗಮನ ಮಕ್ಕಳಾದ ಹರಿಹರ ಮತ್ತು ಬುಕ್ಕರಾಯರಿಂದ ತುಂಗಭದ್ರ ನದಿಯ ದಂಡೆಯಲ್ಲಿರುವ ಪಂಪಾಕ್ಷೇತ್ರವೆಂದು ಪ್ರಸಿದ್ಧಿಯಾಗಿರುವ ಹಂಪೆಯಲ್ಲಿ ಸ್ಥಾಪಿಸಿದರು. ಈ ಸಾಮ್ರಾಜ್ಯದ ಸ್ಥಾಪನೆಯನ್ನು ಹಿಂದೂ ಧರ್ಮದ ರಕ್ಷಣೆಯನ್ನು ಮಾಡಲು ಮತ್ತು ಮುಸ್ಲಿಮ್ ದಾಳಿಯನ್ನು ತಡೆಗಟ್ಟಿ ಹಿಂದೂ ಧರ್ಮ, ಸಾಂಸ್ಕೃತಿ ಪೋಷಿಸುವುದು ಎಂಬ ನೆಲೆಯ ಮೇಲೆ ವಿಷಯವನ್ನು ಪ್ರಸ್ತಾಪಗೊಂಡಿದೆ. ಇದು ವಿದ್ಯಾರಣ್ಯರ ಮಾರ್ಗದರ್ಶನದ ಮೇರೆಗೆ ಸ್ಥಾಪಿಸಲಾಗಿದೆ ಸೂರ್ಯನಾಥ ಕಾಮತ್ (೧೯೯೯:೧೪೮-೧೪೯), ಆಲೂರು ವೆಂಕಟರಾಯರ (೨೦೦೬:೬೭-೬೮), ದಿವಾಕರ್ (೨೦೦೬:೪-೮), ವಸುಂದರಾ ಫಿಲಿಯೋಜಾ (೧೯೯೯) ವಿಜಯನಗರ ಸ್ಥಾಪನೆ ಮತ್ತು ಮೂಲದ ಬಗ್ಗೆ ವಿವರವಾಗಿ ಚರ್ಚಿಸಿದ್ದಾರೆ.

ವಿಜಯನಗರದ ಸಂಗಮ ವಂಶದಲ್ಲಿ ೯ ಜನ ಅರಸರು ಆಳ್ವಿಕೆ ನಡೆಸಿದರು. ಗುಲಬರ್ಗಾ ಪ್ರದೇಶಕ್ಕೆ ಸಂಬಂಧಪಟ್ಟಂತೆ ಕ್ರಿ.ಶ. ೧೩೪೭ರಲ್ಲಿ ಬಹಮನಿ ಸುಲ್ತಾನರ ಆಳ್ವಿಕೆ ಆರಂಭವಾಯಿತು ಇದರಿಂದ ಇವರ ಪ್ರಭಾವ ಈ ಪ್ರದೇಶದ ಮೇಲೆ ಅಷ್ಟೇನು ಕಾಣುವುದಿಲ್ಲ. ಬಹಮನಿ ಸುಲ್ತಾನರು ಮತ್ತು ವಿಜಯನಗರ ನಡುವಣ ಅನೇಕ ಹೋರಾಟಗಳು ನಡೆದವು. ಇಮ್ಮಡಿ ದೇವರಾಯನ ಕಾಲದಲ್ಲಿಯೂ ಮುಂದುವರೆಯಿತು. ಬಹಮನಿ ಸುಲ್ತಾನರು ವಿಜಯನಗರದ ದಾಳಿಯಿಂದ ಸುರಕ್ಷಿತವಾಗಿರಲು ತನ್ನ ರಾಜಧಾನಿಯನ್ನು ಗುಲಬರ್ಗಾದಿಂದ ಬೀದರಗೆ ವರ್ಗಾಯಿಸಿದರು ಭೂಸನೂರ ಮಠ (೧೯೮೮:೨೦-೨೧), ಆಲೂರು ವೆಂಕಟರಾಯರು (೨೦೦೬:೬೭) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

ಗುಲಬರ್ಗಾ ಪ್ರದೇಶಕ್ಕೆ ಸಂಬಂಧಪಟ್ಟಂತೆ ವಿಜಯನಗರ ಸಾಮ್ರಾಜ್ಯದ ಅರಸರನ್ನು ಉಲ್ಲೇಖಿಸುವ ಶಾಸನಗಳು ಕೃಷ್ಣದೇವರಾಯನ (೧೫೦೯-೧೫೨೯) ಆಳ್ವಿಕೆಯ ಕಾಲದವರೆಗೆ ಲಭ್ಯವಿರುವುದಿಲ್ಲ. ಕೃಷ್ಣದೇವರಾಯನ ಕಾಲದ್ದೆಂದು ಹೇಳಲಾಗುವ ತಾಮ್ರ ಶಾಸನವು ಶಹಾಪುರ ವಿಶ್ವಕರ್ಮ ಏಕದಂಡಿ ಮಠದಲ್ಲಿದೆ ಎಂದು ವರದಿಯಾಗಿದೆ (ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ ೧೯೭೭:೫೮). ಕೃಷ್ಣದೇವರಾಯನು ಗುಲಬರ್ಗಾ, ಬೀದರಗಳನ್ನು ಪ್ರವೇಶಸಿ ಕ್ರಿ.ಶ.೧೫೨೩ರಲ್ಲಿ ಗುಲಬರ್ಗಾವನ್ನು ತನ್ನ ವಶಪಡಿಸಿಕೊಂಡು ಮೂರನೆ ಮಹಮ್ಮದನ ಮೊಮ್ಮಕಳಾದ ಮೂರನೆ ಅಲ್ಲಾ-ಉದ್-ದೀನ್ ವಲಿಮುಲ್ಲಾ ಮತ್ತು ಕಲೀಮುಲ್ಲಾಗಳನ್ನು ಬಿಡುಗಡೆ ಮಾಡಿದ ನಂತರ ಹಿರಿಯ ಮಗನಾದ ಮೂರನೇ ಅಲ್ಲಾಉದ್‌ದೀನ್‌ನನ್ನು ಗುಲಬರ್ಗಾ ಸುಲ್ತಾನನ್ನಾಗಿ ನೇಮಿಸಿ ವಲಿಮುಲ್ಲಾ ಮತ್ತು ಕಲೀಮುಲ್ಲಾಗಲನ್ನು ತನ್ನೊಡನೆ ವಿಜಯನಗರಕ್ಕೆ ಕರೆದಿಕೊಂಡು ಹೋಗಿ ಅಲ್ಲಿ ಸುರಕ್ಷಿತವಾಗಿಟ್ಟು ಆದರದಿಂದ ನೋಡಿಕೊಂಡನೆಂದು ತಿಳಿದು ಬರುತ್ತದೆ. ಗುಲಬರ್ಗಾದಲ್ಲಿ ಸುಲ್ತಾನನ ಆಳ್ವಿಕೆಯನ್ನು ಪುನಶ್ಚೇತನಗೊಳಿಸಿ ಮುಸ್ಲಿಮ್ ಚಕ್ರಾಧಿಪತ್ಯದ ಮೇಲೆ ತನ್ನ ಹತೋಟಿಯನ್ನು ಸ್ಥಾಪಿಸಿದನು. ಈ ರಾಜಕೀಯ ಸಾಧನೆಯಿಂದಾಗಿ ಕೃಷ್ಣದೇವರಾಯನಿಗೆ "ಯವನರಾಜ್ಯ ಸ್ಥಾಪನಾಚಾರ್ಯ" ಎಂಬ ಬಿರುದು ಪಡೆದುಕೊಂಡನು. ಪಾಟೀಲ್ (೧೯೯೭:೫೯) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

ದಖ್ಖನಲ್ಲಿ ಬಹಮನಿ ರಾಜ್ಯ ಒಡೆದು ಹುಟ್ಟಿಕೊಂಡ ಐದು ಶಾಹಿ ರಾಜ್ಯಗಳ ಒಳಜಗಳ ಲಾಭ ಪಡೆದು ರಾಮರಾಯನು ರಾಜ್ಯವನ್ನು ಕೃಷ್ಣ ನದಿಯ ಆಚೆಗೆ ವಿಸ್ತರಿಸಿದನು. ಇವನ ವಿಭಜಿಸಿ ಆಳುವ ನೀತಿ, ಆಂತರಿಕ ಹಸ್ತಕ್ಷೇಪ ಒಂದು ದಿನ ವಿಜಯನಗರ ಸಾಮ್ರಾಜ್ಯ ಅವನತಿಯ ಕಾರಣಗಳಲ್ಲಿ ಒಂದಾಗಿ ಪರಿಣಮಿಸಿತು ಸೂರ್ಯನಾಥ ಕಾಮತ್ (೨೦೦೫:೧೫೯-೧೬೦) ತಮ್ಮ ಕೃತಿಯಲ್ಲಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ರಕ್ಕಸಗಿ-ತಂಗಡಗಿ ಕದನದಲ್ಲಿ ವಿಜಯನಗರ ಸೇನೆಗೆ ಸೋಲುಂಟಾಯಿತು ಅಳಿಯ ರಾಮರಾಯನನ್ನು ಸೆರೆಹಿಡಿದು ಆನಂತರ ಆತನಿಗೆ ತಲೆದಂಡ ವಿಧಿಸಲಾಯಿತು. ಈ ತಲೆದಂಡ ಮಾಡಿದ್ದು ಗುಲಬರ್ಗಾ ಜಿಲ್ಲೆಯ "ಬನ್ನಟ್ಟಿ"ಯಲ್ಲಿ ಎಂಬ ಅಸ್ಪಷ್ಟ ಅಭಿಪ್ರಾಯವಿದೆ. ಪಿ.ಎಂ.ಜೋಷಿಯವರ "ದಿ ಹಿಸ್ಟರಿ ಆಫ್ ಮಿಡಿವಲ್ ಡೆಕ್ಕನ್", ಉದ್‌ಗ್ರಂಥ, ಎ.ಕೃಷ್ಣ, 'ಸಗರನಾಡ ದರ್ಶನ' (೧೯೮೫) ಉಲ್ಲೇಖಿಸಿದ್ದಾರೆ (ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ ೧೯೭೭:೫೯). ವಿಜಯನಗರ ಸಾಮ್ರಾಜ್ಯವು ಮತ್ತೆ ಹಲವು ವರ್ಷಗಳು ಆಳ್ವಿಕೆಯನ್ನು ಮುಂದು ವರೆದರೂ ಗುಲಬರ್ಗಾ ಜಿಲ್ಲೆಯ ಮೇಲೆ ಅದರ ಪ್ರಭಾವ ಯಾವದೇ ರೀತಿಯಲ್ಲಿ ಉಂಟಾಗಲಿಲ್ಲ ಬಿಜಾಪುರ ಜಿಲ್ಲೆ ಗ್ಯಾಸೆಟಿಯರ್ (೧೯೯೯:೧೨೮), ಪಾಟೀಲ (೧೯೯೭:೫೯) ತಮ್ಮ ಗ್ಯಾಸೆಟಿಯರ್‌ನಲ್ಲಿ ತಿಳಿಸಿದ್ದಾರೆ.

**ಬಹಮನಿ ಸಾಮ್ರಾಜ್ಯ**

ಕ್ರಿ.ಶ.೧೩೪೭ರಲ್ಲಿ ಸ್ಥಾಪಿತವಾದ ಬಹಮನಿ ಸಾಮ್ರಾಜ್ಯ ದಖ್ಖನ್ನಿನಲ್ಲಿ ಮಧ್ಯಕಾಲೀನ ಯುಗದಲ್ಲಿ ಸ್ಥಾಪಿತವಾದ ಪ್ರಖ್ಯಾತ ಮುಸ್ಲಿಮ್ ಸಾಮ್ರಾಜ್ಯವಾಗಿದೆ. ಇದು ವಿಜಯನಗರ ಸಮಕಾಲೀನ ಸಾಮ್ರಾಜ್ಯವಾಗಿದ್ದು ರಾಜಕೀಯ ಸಾರ್ವಭೌಮತ್ವಕ್ಕಾಗಿ ನಿರಂತರವಾಗಿ ಸಂಘರ್ಷಿಸಿತು. ಮಹಮ್ಮದ್ ಬಿನ್ ತುಘಲಕನ ವಿರುದ್ಧ ವಿವಿಧ ಪ್ರಾಂತಗಳಲ್ಲಿ ಬಂಡಾಯದ ಪ್ರಮುಖ ಪರಿಣಾಮವೆಂದರೆ ಗುಲಬರ್ಗಾದಲ್ಲಿ ಬಹಮನಿ ಸುಲ್ತಾನ ಸಾಮ್ರಾಜ್ಯದ ಸ್ಥಾಪನೆ. ಹಸನಗಂಗು ಎಂಬುವನಿಂದ ಸ್ಥಾಪಿತವಾದ ಸಾಮ್ರಾಜ್ಯವು ಗುಲಬರ್ಗಾ ರಾಜಧಾನಿಯನ್ನಾಗಿ ಆಳ್ವಿಕೆ ಮಾಡಿದರು ಎಂದು ಗೋಪಾಲರಾವ್ (೨೦೦೭:೭೮-೭೯), ಸೂರ್ಯನಾಥ ಕಾಮತ್ (೨೦೦೫:೧೮೦-೧೯೫) ತಮ್ಮ ಕೃತಿಗಳಲ್ಲಿ ತಿಳಿಸಿದ್ದಾರೆ.

ಗುಲಬರ್ಗಾ ಮಸೀದೆಯೊಂದರಲ್ಲಿರುವ ಪರ್ಷಿಯನ್ ಶಾಸನವು ಈತನಿಗೆ "ಸಿಖಂದರ್ ಇ-ಸಾನಿ ಅಲ್ಲಾ-ಉದ್-ದೀನ್ ಹಸನ್ ಬಹುಮನ್ ಶಾಹ ಅಲ್-ವಲೀ ಎಂಬ ಬಿರುದು ಹೊಂದಿದನು (ಪಾಟೀಲ ೧೯೯೭:೬೧). ಈತನ ಮೂಲದ ಬಗ್ಗೆ ವಿವಿಧ ಅಭಿಪ್ರಾಯಗಳು ಹೊಂದಿದ್ದು, ಫರಿಸ್ತಾನ ಹೇಳಿಕೆಯ ಪ್ರಕಾರ ಬ್ರಾಹ್ಮಣನೊಬ್ಬನಲ್ಲಿ ಅಲ್ಲಾ-ಉದ್-ದೀನ್‌ನನು ಸೇವಕನಾಗಿದ್ದುದರಿಂದ ಮಾಲಿಕ ಸ್ಮರಣೆಗಾಗಿ ತನ್ನನ್ನು ತಾನೇ ಗಂಗೂ ಬಹಮನಿ ಎಂದು ಕರೆದುಕೊಂಡಂತೆ ವ್ಯಕ್ತವಾಗುತ್ತದೆ. ಆದರೆ ಬರ್ಹಾನ್-ಇ-ಮಸೀದೆ ಹಾಗೂ ತಬಕತ್-ಇ-ಅಕ್ಬರ್ ಗ್ರಂಥದ ಕೃರ್ತವಾದ ನಿಜಾಮುದ್ದೀನ್ ಅಹಮದ್ ಮತ್ತು ಪ್ರಸಿದ್ಧ ಅರಬ್ ಇತಿಹಾಸಕಾರರು ಬ್ರಾಹ್ಮಣ ಜ್ಯೋತಿಷ್ಯ ವಿಚಾರ ಪ್ರಸ್ತಾಪಿಸುವುದಿಲ್ಲ. ಇವರು ಬೇರೆ ಹೇಳಿಕೆಯನ್ನು ನೀಡುತ್ತಾರೆ ನರಸಿಂಹಮೂರ್ತಿ (೨೦೦೧:೩೮೧-೩೮೨), ಷೇಕ್ ಅಲಿ (೧೯೯೭:೨೬), ಕೃಷ್ಣಕೋಲ್ಹಾರ ಕುಲಕರ್ಣಿ (೨೦೦೨:೨೪) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

ಅಲ್ಲಾವುದ್ದೀನ್ ಹಸನ್ ಬಹಮನ್ ಶಾಹ (೧೩೪೭-೧೩೫೮) ಅಧಿಕಾರಕ್ಕೆ ಬಂದು ಗುಲಬರ್ಗಾಕ್ಕೆ ತನ್ನ ರಾಜಧಾನಿಯನ್ನು ಬದಲಿಸಿದಾಗ ಗುಲಬರ್ಗಾದಲ್ಲಿ "ಪೋಚರೆಡ್ಡಿ" ಎಂಬ ಹಿಂದೂ ಬಂಡಾಯಗಾರನೊಬ್ಬನು ನಾಯಕನಾಗಿದ್ದನು. ಹಸನಗಂಗುವಿಗೆ ಮುಖ್ಯ ಸಮಸ್ಯೆಯೊಡ್ಡಿದ್ದನು. ಅಲ್ಲಾವುದ್ದೀನ್ ಹಸನ್ ಬಹಮನ್‌ಶಾಹನು, ಸಾಮ್ರಾಜ್ಯ ವಿಸ್ತರಿಸಿದನ್ನಲ್ಲದೆ ನಾಲ್ಕು ತರಫ್ ಅಥವಾ ಪ್ರಾಂತಗಳಾಗಿ ವಿಭಜಿಸಿದನು. ಗುಲಬರ್ಗಾ, ಬೀದರ್, ಬೇರಾರ್ ಮತ್ತು ದೌಲತಬಾದ, ಪ್ರಾಂತೀಯ ರಾಜ್ಯಪಾಲರಿಗೆ ತರಫ್‌ದಾರ್, ಅಮೀರ್ ಎಂಬ ಹೆಸರಿತ್ತು. ಇವನ ಸಾಮ್ರಾಜ್ಯ ಅತ್ಯಲ್ಪ ಕಾಲದಲ್ಲಿ ಉತ್ತರದ ಮಧ್ಯಪ್ರದೇಶದ ಮಂಡುವಿನಿಂದ ಹಿಡಿದು ದಕ್ಷಿಣ ಕೃಷ್ಣಾ ನದಿಯವರೆಗೂ, ಪಶ್ಚಿಮ ಕೊಂಕಣದಿಂದ ಹಿಡಿದು ಪೂರ್ವದ ತೆಲಂಗಾಣದ

ಭೊಂಗೀರ್‌ವರೆಗೆ ವಿಸ್ತರಿಸಿತು. ಕೃಷ್ಣಾ ನದಿಯಿಂದ ದಕ್ಷಿಣಕ್ಕೆ ಇವನ ರಾಜ್ಯ ವಿಸ್ತರಿಸಲು ವಿಜಯನಗರ ಸಾಮ್ರಾಜ್ಯ ಅಡಚಣೆಯಾಗಿತ್ತು ಎಂದು ಷೇಕ್ ಅಲಿ (೧೯೭೭:೨೯), ಸೂರ್ಯನಾಥ ಕಾಮತ್ (೨೦೦೫:೧೮೦–೧೮೧), ಪಾಟೀಲ (೧೯೯೭:೬೨) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

ಮಹಮ್ಮದ್ ಶಾಹ (೧೩೫೫–೭೫) ಅಧಿಕಾರಕ್ಕೆ ಬಂದು, ತನ್ನ ಅವಧಿಯಲ್ಲಿ ರಾಜಧಾನಿಯಾದ ಗುಲಬರ್ಗಾವನ್ನು ಬೃಹತ್ ಕಟ್ಟಡಗಳಿಂದ ಹಾಗೂ ಉತ್ತಮ ನಗರ ವ್ಯವಸ್ಥೆಗಳಿಂದ ಆಧುನಿಕಗೊಳಿಸಿದನು. ಈತನು ಸೂಫಿ ಸಂತರಾಗಿದ್ದ ಶೇಕ್ ಫಾರಿಬ್, ಶೇಕ್ ಬೀಜಾಪುರಿ ಮತ್ತು ಶೇಕ್ ಜುನಾದಿಗಳಿಗೆ ಆಶ್ರಯ ನೀಡಿದನಲ್ಲದೆ ಸ್ವತಃ ತಾನೇ ಸೂಫಿ ಸಂತರ ನಿಷ್ಠಾವಂತ ಭಕ್ತನಾಗಿದ್ದನು. ತೆಲಂಗಾಣದ ಅರಸ ಸುಲ್ತಾನನೊಂದಿಗೆ ಒಪ್ಪಂದ ಮಾಡಿಕೊಂಡು ಚಿನ್ನದ ಸಿಂಹಾಸನವನ್ನು ಮಹಮ್ಮದ್‌ನಿಗೆ ಅರ್ಪಿಸಿದನು. ಈ ಸಿಂಹಾಸನವು ಗುಲಬರ್ಗಾ ಅರಮನೆಯಲ್ಲಿ ಸ್ಥಾಪಿಸಲಾಯಿತ್ತೆಂದು ತಿಳಿದುಬರುತ್ತದೆ.

ಅಲ್ಲಾವುದ್ದಿನ್ ಮುಜಾಹಿದನು ೧೩೭೫ರಲ್ಲಿ ಅಧಿಕಾರಕ್ಕೆ ಬಂದನು. ನಂತರ ೨ನೇ ಮಹಮ್ಮದ್ ಶಾಹ (೧೩೭೮–೯೭)ವರೆಗೆ ಅಧಿಕಾರಕ್ಕೆ ಬಂದು ಜನಹಿತ ಕಲ್ಯಾಣವನ್ನು ಗಮನದಲ್ಲಿಟ್ಟುಕೊಂಡು ಆಳ್ವಿಕೆ ನಡೆಸುತ್ತಾನೆ. ತನ್ನ ಅಧಿಕಾರಿ 'ಫಖ್ರಿ ದವಲಾ' ಮತ್ತು 'ಮುಲಾರಖಾ ಸುಲ್ತಾನ' ಎಂಬ ಇಬ್ಬರು ಹೆಂಡತಿಯ ನೇತೃತ್ವದಲ್ಲಿ ಗುಲಬರ್ಗಾದಲ್ಲಿ ಮಸೀದೆ ಕಟ್ಟಿಸಿದ ಬಗೆಗೆ ಆತನ ಕ್ರಿಶ ೧೩೯೪–೯೫ರ ಪರ್ಶಿಯನ್ ಶಾಸನವು ಉಲ್ಲೇಖಿಸುತ್ತದೆ. ತಾಜುದ್ದೀನ್ ಫಿರೋಜನು ತನ್ನ ಆಡಳಿತವನ್ನು ಪವಿತ್ರ ಕುರಾನ್ ಗ್ರಂಥದ ತತ್ವದ ಆಧಾರದ ಮೇಲೆ ನಿಯಂತ್ರಿಸಿದ. ಇದರಿಂದ ಸಮಾಜದಲ್ಲಿ ಸ್ತ್ರೀಯರಿಗೆ ವಿಶೇಷ ಸ್ಥಾನಮಾನ ಮಾನ ದೊರೆಯುವಂತಾಯಿತು ಕಲೆ ಮತ್ತು ವಾಸ್ತುಶಿಲ್ಪದಲ್ಲಿ ವಿಶೇಷ ಆಸಕ್ತಿ ಹೊಂದಿದವನಾಗಿ ಗುಲಬರ್ಗಾ ಮತ್ತು ಫಿರೋಜಾಬಾದ್‌ದಲ್ಲಿ ಸುಂದರವಾದ ಮಸೀಚೆಗಳು, ಕಟ್ಟಡಗಳು ನಿರ್ಮಿಸಿದನೆಂದು ತಿಳಿದುಬರುತ್ತದೆ. ಸ್ಪೇನಿನ ಕೊರ್ಡೋಲಾ ಎಂಬಲ್ಲಿರುವ ಸುಂದರವಾದ ಮಸೀಚೆಯ ಮಾದರಿಯಲ್ಲೆ ಗುಲಬರ್ಗಾದಲ್ಲಿ ಜುಮ್ಮಾ ಮಸೀದೆಯನ್ನು ನಿರ್ಮಿಸಿದನು. ಪೂರ್ಣವಾಗಿ ಛಾವಣಿಯಿಂದ ಆವೃತ್ತವಾಗಿರುವ ಮಸೀದೆಯು ಭಾರತದಲ್ಲೇ ಮೊದಲನೆಯದೆಂಬ ಅಭಿಪ್ರಾಯವಿದೆ. ದೌಲತಾಬಾದನಲ್ಲಿ ಹಸನ್ ಘಿಲಾನಿ ಎಂಬ ಖಗೋಳ ವಿಜ್ಞಾನಿಯ ಮಾರ್ಗದರ್ಶನದಂತೆ ಕ್ರಿಶ. ೧೪೦೭ರಲ್ಲಿ ಒಂದು ಖಗೋಳ ವಿಕ್ಷಣಾಲಯವನ್ನು ನಿರ್ಮಿಸಿದನು. ಮತ್ತು ಭೀಮಾ ನದಿಯ ತೀರದಲ್ಲಿ ಫಿರೋಜಬಾದ್ ಎಂಬ ಹೊಸ ನಗರವನ್ನು ಫಿರೋಜ್‌ನು ನಿರ್ಮಿಸಿದನು. ಈತನು ಈ ನಗರವನ್ನು ಎರಡನೇ ರಾಜಧಾನಿಯನ್ನಾಗಿ ಉಪಯೋಗಿಸುತ್ತಿದ್ದನು ಎಂದು ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೬೪), ದಿವಾಕರ್ (೨೦೦೬:೬೨), ಸೂರ್ಯನಾಥ ಕಾಮತ್ (೨೦೦೫:೧೮೦–೧೯೫) ತಮ್ಮ ಕೃತಿಯಲ್ಲಿ ವಿವರಿಸಿದ್ದಾರೆ.

ಫಿರೋಜನಿಗೆ ಗುಜರಾತ, ಮಾಳ್ವ ಹಾಗೂ ದಖ್ಖನ ಪ್ರದೇಶಗಳೂ ತೈಮೂರನ ಹತೋಟಿಯನ್ನು ಸ್ಥಾಪಿಸುವಲ್ಲಿ ಈತನು ನೆರವಾದನೆಂದು ಪಿ.ಬಿ. ದೇಸಾಯಿಯವರು ತಿಳಿಸುತ್ತಾರೆ. ನಂತರ ಕ್ರಿಶ ೧೪೦೯ರಲ್ಲಿ ವಿಜಯನಗರದ ಮೊದಲನೇ ದೇವರಾಯನೊಡನೆ ಸೆಣಸಾಟದಲ್ಲಿ ಫಿರೋಜನು ರಾಜಧಾನಿಯವರೆಗೂ ಮುನ್ನುಗ್ಗಿ ಸಂಧಾನ ಮಾಡಿಕೊಂಡು ಆತನ ಮಗಳನ್ನು ವಿವಾಹವಾಗಿ ಬಂಕಾಪುರವನ್ನು ವರದಕ್ಷಿಣೆ ರೂಪದಲ್ಲಿ ಪಡೆದನು ಎಂದು ಫರಿಸ್ತಾ ಅಭಿಪ್ರಾಯ ತಿಳಿಸಿದ್ದು ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೬೫)ನಲ್ಲಿ ವ್ಯಕ್ತವಾಗಿದೆ.

ಅಹಮದ್ ಶಾಹನು ಅಧಿಕಾರಕ್ಕೆ ಬಂದ ಕೆಲವೇ ದಿನಗಳಲ್ಲಿ ರಾಜಧಾನಿಯನ್ನು ಗುಲಬರ್ಗಾದಿಂದ ಬೀದರ್‌ಗೆ ವರ್ಗಾಯಿಸಲಾಯಿತು. ಇದಕ್ಕೆ ಕಾರಣ ಸ್ವಲ್ಪ ಮಟ್ಟಿಗೆ ನಿರಂತರ ಮರಣವೇ ಆಗಿರಬೇಕು. ಗುಲಬರ್ಗಾದಲ್ಲಿ ಅಧಿಕಾರಕ್ಕಾಗಿ ಕಿತ್ತಾಟ, ಒಳಸಂಚು, ಪಿತೂರಿಗಳ ಕೇಂದ್ರವಾಗಿತ್ತು. ರಾಜಧಾನಿ ಸ್ಥಳಾಂತರಿಸುವುದರಿಂದ ಉತ್ತಮ ವಾತಾವರಣ ಸೃಷ್ಟಿಯಾಗ ಬಹುದೆಂದು ಅನಿಸಿರಬಹುದು, ಹಿತರಕರ ವಾಯುಗುಣ ಪ್ರೇರಣೆ ನೀಡಿರಬಹುದು, ಅಲ್ಲದೆ ಆಡಳಿತ ದೃಷ್ಟಿಯಿಂದ ಬಹಮನಿ ಪ್ರಾಂತಗಳನ್ನು ಆಳಲು, ನಿಯಂತ್ರಿಸಲು ಗುಲಬರ್ಗಾಕ್ಕಿಂತ ಬೀದರ ಸೂಕ್ತ ಸ್ಥಳವಾಗಿತ್ತು ಎಂದು ಷೇಕ್ ಅಲಿ (೧೯೯೭:೪೬), ಕೃಷ್ಣಕೊಲ್ಹಾರ ಕುಲಕರ್ಣಿ (೨೦೦೨:೨೭) ಕೃತಿಯಲ್ಲಿ ತಿಳಿಸಿದ್ದಾರೆ. ಆದರೆ ಕೆಲವರು ವಿಜಯನಗರ ಸಾಮ್ರಾಜ್ಯದ ಸತತ ದಾಳಿಗಳು ರಾಜಧಾನಿ ವರ್ಗಾವಣೆಗೆ ಕಾರಣವೆಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಎರಡನೆ ಅಲ್ಲಾವುದ್‌ದೀನ್ ಅಹಮದ್‌ನು ಮಧ್ಯಪಾನವನ್ನು ನಿಷೇಧಿಸಿದ ಅದನ್ನು ಉಲ್ಲಂಘಿಸಿದವರಿಗೆ ಶಿಕ್ಷೆ ವಿಧಿಸುತ್ತಿದ್ದನು. ಮಸೀದೆ, ಆಸ್ಪತ್ರೆ, ಸಾರ್ವಜನಿಕ ಕಟ್ಟಡಗಳನ್ನು ನಿರ್ಮಿಸಿದನು. ಗಾಣಗಾಪುರದ ನರಸಿಂಹ ಸರಸ್ವತಿ ಸ್ವಾಮಿಗಳು ಈತನಿಗೆ ಬಂದಿದ್ದ ಉಷ್ಣದ ಕುರುವನ್ನು ವಾಸಿಮಾಡಿ ರಾಜನಿಗೆ ಉಂಟಾಗಿದ್ದ ತೀವ್ರ ವೇದನೆಯನ್ನು ಕೊನೆಗಾಣಿಸಿದರೆಂದು ಪ್ರತೀತಿಯಿದೆ ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೬೬) ಕೃತಿಯಲ್ಲಿ ತಿಳಿಸಿದೆ.

ಗುಲಬರ್ಗಾ ನಗರದಲ್ಲಿ ಅನೇಕ ಕಟ್ಟಡಗಳು, ಮಸೀದೆಗಳು ಇಂದಿಗೂ ಕಾಣಸಿಗುತ್ತವೆ. ಗುಲಬರ್ಗಾ ಕೋಟೆಯನ್ನು ಒಂದನೇ ಅಲ್ಲಾವುದ್ದೀನನು ನಿರ್ಮಿಸಿದನು. ಒಳಭಾಗದಲ್ಲಿ ಅರಮನೆ, ಸೇನಾಕಛೇರಿ, ಮಸೀದೆ ಮುಂತಾದ ಭವನಗಳು ನಿರ್ಮಿಸಲಾಗಿತ್ತು. ಕೋಟೆಯ ಪೂರ್ವಕ್ಕೆ ಗುಲಬರ್ಗಾ ನಗರ ನಿರ್ಮಾಣವಾಗಿದ್ದಿತ್ತು. ಸಂತೆ, ಬೀದಿಗಳು, ದರ್ಗಾಗಳು, ಮಸೀದೆಗಳು, ಮನೆಗಳು, ಮಳಿಗೆಗಳು, ಸಮಾದಿಗಳು ನಗರ ಭಾಗದಲ್ಲಿ ನಿರ್ಮಿತವಾಗಿವೆ. ಷೇಕ್ ಸಿರಾಜ್ ಉದ್ದೀನ್ ದರ್ಗಾ ೧೩೭೫ರಲ್ಲಿ, ಖಾಜಾ ಬಂದೇನವಾಜ್ ಮಸೀದೆಗಳೂ, ಮದರಸಾಗಳು, ಖನ್‌ಖಾನ್‌ಗಳು(ವಿಶ್ರಾಂತಿ ಧಾಮ್) ಹೊಂದಿತ್ತು. ಶಾಹ ಕಮಾಲ್ ಮುಜರದ್

ದರ್ಗಾ ೧೪೫೦, ಹಫ್ತ್ ಅಥವಾ ಸುಲ್ತಾನರ ಸಾತ್ ಗುಂಬಜ್ ೧೩೭೭–೧೪೨೨ರಲ್ಲಿ ನಿರ್ಮಾಣವಾಗಿವೆ. ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್‌ನಲ್ಲಿ ತಿಳಿಸಿದ್ದಾರೆ.

**ಬಿಜಾಪುರದ ಆದಿಲ್‌ಶಾಹಿಗಳು**

ಬಹಮನಿ ಮಹಮ್ಮದ್ ಗವಾನನ ಕೊಲೆ ಸಾಮ್ರಾಜ್ಯದ ಅಂತ್ಯಕ್ಕೆ ತ್ವರಿತಗೊಳಿಸಿತು. ಒಬ್ಬರಾದ ಮೇಲೆ ಒಬ್ಬರಂತೆ ಅಧಿಕಾರಕ್ಕೆ ಬಂದ ಅಸಮರ್ಥ ಸುಲ್ತಾನರು ತಮ್ಮ ಮಂತ್ರಿಗಳ ಕೈಗೊಂಬೆಯಾಗಿ ಮಾರ್ಪಟ್ಟರು. ಇದು ಪ್ರಾಂತಗಳ ಮೇಲಿನ ಹತೋಟಿಯನ್ನು ಸಡಿಲಗೊಳಿಸಿತು. ಪ್ರಾಂತಾಧಿಕಾರಿಗಳಿಗೆ ಸ್ವತಂತ್ರ ರಾಜ್ಯಗಳನ್ನು ಸ್ಥಾಪಿಸಲು ಸದಾವಕಾಶವನ್ನು ಮಾಡಿಕೊಟ್ಟಿತ್ತು. ೧೬ನೇ ಶತಮಾನದ ಆದಿಭಾಗದ ಹೊತ್ತಿಗೆ ಬಹಮನಿ ಸಾಮ್ರಾಜ್ಯವು ಒಡೆದು ಹೋಗಿ ೫ ಸ್ವತಂತ್ರ ಶಾಹಿ ರಾಜ್ಯಗಳು ಅಸ್ತಿತ್ವಕ್ಕೆ ಬಂದವು.[೧೩] ಆ ಸಂದರ್ಭದಲ್ಲಿ (೧೪೯೫) ಗುಲಬರ್ಗಾ ಪ್ರಾಂತದ ರಾಜ್ಯಪಾಲನಾದ ದಸ್ತೂರ್ ದಿನಾರನು ಸ್ವತಂತ್ರನಾಗುವ ಆಪೇಕ್ಷೆ ಹೊಂದಿದನು. ಆದರೆ ಯೂಸೂಫ್‌ನು ಗುಲಬರ್ಗಾದ ಬಳಿ ಸೋಲಿಸಿ ಬಂದಿಸುವಲ್ಲಿ ಯಶಸ್ವಿಯಾದನು ಸೂರ್ಯನಾಥ ಕಾಮತ್ (೨೦೦೫:೧೪೦–೧೯೫), ಮುನಿಸ್ವಾಮಿ (೧೯೯೫:೧೨೫), ಕೃಷ್ಣಕೊಲ್ಹಾರ ಕುಲಕರ್ಣಿ (೨೦೦೨:೩೨) ತಮ್ಮ ಕೃತಿಗಳಲ್ಲಿ ವಿವರಿಸಿದ್ದಾರೆ.

ಯೂಸೂಫ್ ಆದಿಲ್‌ಶಾಹನು ದಖ್ಖನ್ನಿನ ಪ್ರತಿಭಾವಂತ ರಾಜರುಗಳೊಲ್ಲಬ್ಬನು. ಮತಾಂಧನಾಗಿಲ್ಲದೆ ಹಿಂದೂ ಪ್ರಜೆಗಳನ್ನು ಗೌರವದಿಂದ ನೋಡಿಕೊಳ್ಳುತ್ತಿದ್ದನು. ೧೫೧೦ರಲ್ಲಿ ಗೋವಾವನ್ನು ಪೋರ್ಚುಗೀಸರಿಂದ ಕಿತ್ತುಕೊಂಡು ಅದೇ ವರ್ಷದಲ್ಲಿ ವಿಜಯನಗರದ ವಿರುದ್ಧ ಯುದ್ಧದಲ್ಲಿ ಯೂಸುಫ್ ಆದಿಲ್‌ಶಾಹನು ನಿಧನನಾದನು. ಈತನ ಸಮಾಧಿಯ ಹಬೀಬುಲ್ಲಾ ಸಂತನ ಸಮಾಧಿಯ ಬಳಿ ಗುಲಬರ್ಗಾ ಜಿಲ್ಲೆಯ ಗೋಗಿಯಲ್ಲಿರುವುದು (ಅಕ್ಕಿ ೧೯೯೬:೧೧). ಇನ್ನುಳಿದ ಸುಲ್ತಾನರು ಇಸ್ಮಾಯಿಲ್ ಆದಿಲ್‌ಶಾಹ, ಮಲ್ಲು ಆದಿಲ್‌ಶಾಹ ಮತ್ತು ೧ನೇ ಇಬ್ರಾಹಿಮ್ ಆದಿಲ್‌ಶಾಹ ಇವರ ಸಮಾಧಿಯು ಗೋಗಿಯ ರುದ್ರಭೂಮಿಯನ್ನು ಆಯ್ಕೆ ಮಾಡಿಕೊಂಡರು. ಇಲ್ಲಿ ಬಹಮನಿ ಶೈಲಿಯ ಗುಂಬಜವೊಂದು, ಚಂದಾಹುಸೇನಿ ದರ್ಗಾದ ಆವರಣದಲ್ಲಿ ಸಂತನ ಸಮಾಧಿಯಿದೆ. ಬಿರಾದರಿ ಎಂಬ ಕಟ್ಟಡ ಹಿಂದೂ ಶೈಲಿಯ ಕಲಶಗಳುಳ್ಳ ಹೂದಳಗಳಿಂದ ಹೊರಬಂದ ಗುಮ್ಮಟಗಳನ್ನು ಹೊಂದಿರುವ ಮಿನಾರುಗಳಿವೆ. ಈ ಕಟ್ಟಡದಲ್ಲಿ ಬಿಜಾಪುರದ ಅರಸರು ಗೋಗಿಗೆ ಬಂದಾಗ ವಿಶ್ರಾಂತಿ ಪಡೆಯಲು ಉಪಯೋಗಿಸುತ್ತಿದ್ದರು ಎಂದು ಅಕ್ಕಿ (೧೯೯೬:೧೧), ಪಾಟೀಲ (೧೯೯೭:೯೬) ತಮ್ಮ ಕೃತಿಗಳಲ್ಲಿ ಹೆಚ್ಚಿನ ವಿಷಯವನ್ನು ಪ್ರಸ್ತಾಪಿಸಿದ್ದಾರೆ.

ಕೃಷ್ಣದೇವರಾಯ ೧೫೨೦ರಲ್ಲಿ 'ಕೆಂಭಾವಿಯ' ಹತ್ತಿರ ನಡೆದ ಯುದ್ಧದಲ್ಲಿ ವಿಜಯನಗರದ ಸೈನ್ಯವು ಬಿಜಾಪುರದ ಸೈನ್ಯವನ್ನು ಸೋಲಿಸಿ ಹಿಮ್ಮೆಟ್ಟಿಸಿದವು. ಕೃಷ್ಣದೇವರಾಯನು ರಾಯಚೂರು

ದೋ ಅಬ್ ಪ್ರದೇಶವನ್ನು ಗೆಲ್ಲಲು ಮುಂದಾದನು. ಸೈನ್ಯ ಸಮೇತನಾಗಿ ರಾಯಚೂರನ್ನು ಗೆದ್ದು ಗುಲಬರ್ಗಾದತ್ತ ಮುನ್ನುಗ್ಗಿದನು. ಅಹಮ್ಮದ್ ನಗರ, ನಿಜಾಮಶಾಹನು ತಡೆಯಲು ಮುಂದಾದನು ಆದರೆ ಕೃಷ್ಣದೇವರಾಯ ಕೆಳದಿನಾಯಕನ ನೇತೃತ್ವದಲ್ಲಿ ಸೈನ್ಯ ಕಳುಹಿಸಿದನು. ಗುಲಬರ್ಗಾ ಕೋಟೆಯನ್ನು ೮ ತಿಂಗಳ ಸತತ ಸಂಘರ್ಷಗಳ ನಂತರ ವಶಪಡಿಸಿಕೊಳ್ಳಲಾಯಿತು. ಈ ಗೆಲುವಿಗಾಗಿ ಸದಾಶಿವನಾಯಕನು "ಕೋಟೆ ಕೊಲಾಹಲ" ಎಂಬ ಬಿರುದನ್ನು ಪಡೆದುಕೊಂಡನು. ಮತ್ತೆ ಗುಲಬರ್ಗಾ ಪ್ರದೇಶದ ಮೇಲೆ ಇಸ್ಮಾಯಿಲ್ ಆದಿಲ್‌ಖಾನನು ವಿಜಾಪುರದ ಸೈನ್ಯವನ್ನು ಕಳುಹಿಸಿ ಪುನಃ ವಶಪಡಿಸಿಕೊಂಡನು. ನಿಜಾಮಶಾಹ ಮತ್ತು ಆಮೀರ್ ಬರಿದ ಕೂಡಿಕೊಂಡು ಬಿಜಾಪುರ ವಶಪಡಿಸಿಕೊಳ್ಳಲು ಮುಂದಾದರು.

ಇದನ್ನು ತಿಳಿದ ಇಬ್ರಾಹಿಮ್‌ನು ಗುಲಬರ್ಗಾಕ್ಕೆ ಪಲಾಯನ ಮಾಡಿದನು. ನಂತರ ಬೀದರ ಸುಲ್ತಾನನು ಗುಲಬರ್ಗಾಕ್ಕೆ ಬಂದು ನೆರವು ನೀಡುವುದರ ಮುಖಾಂತರ ಸಹಾಯ ಮಾಡಿದನು. ಕ್ರಿ.ಶ. ೧೫೫೮ರಲ್ಲಿ ವಿಜಯನಗರ ಆಧಿನದಲ್ಲಿದ್ದ ಗುಲಬರ್ಗಾ ಪ್ರದೇಶವನ್ನು ಒಂದನೇ ಆದಿಲ್‌ಶಾಹ ಗೆದ್ದನು. ರಕ್ಕಸಗಿ-ತಂಗಡಗಿ ಯುದ್ಧವು ಗುಲಬರ್ಗಾ ಜಿಲ್ಲೆಯ ಸುರಪುರ ತಾಲೂಕಿನಲ್ಲಿರುವ "ಬನ್ನಹಟ್ಟಿ" ಎಂಬ ಅಭಿಪ್ರಾಯವಿದ್ದು ಈಗ ಇತಿಹಾಸಕಾರರು ಅಲ್ಲಗಳೆದಿದ್ದಾರೆ. (ಬಿಜಾಪುರ ಜಿಲ್ಲೆ ಗ್ಯಾಸೆಟಿಯರ್ ೧೯೯೯:೧೩೮) ಕಮಲ್‌ಖಾನನು ಸೋಲಾಪುರದ ಮುತ್ತಿಗೆ, ಸೋಲಾಪುರದ ಗೌರ್ನರ್ ಝುನ್‌ಖಾನನು ೩ ತಿಂಗಳು ನಿರಂತರ ಯುದ್ಧದ ಸಂದರ್ಭ ಬಳಸಿಕೊಂಡು ಬಹಮನಿ ಮಂತ್ರಿ ಅಮೀರ್ ಬರಿದನು ಗುಲಬರ್ಗಾ ಮತ್ತು ಸುತ್ತಮುತ್ತಲಿನ ಪ್ರದೇಶಗಳನ್ನು ವಶಪಡಿಸಿಕೊಳ್ಳುವಲ್ಲಿ ಯಶಸ್ವಿಯಾದನು ಬಿಜಾಪುರ ಜಿಲ್ಲೆ ಗ್ಯಾಸೆಟಿಯರ್ (೧೯೯೯:೧೨೮), ಪಾಟೀಲ (೧೯೯೭:೬೯-೭೧) ಕೃತಿಕಾರರು ತಮ್ಮ ಕೃತಿಗಳಲ್ಲಿ ಮೇಲಿನ ವಿಷಯವನ್ನು ವಿವರಿಸಿದ್ದಾರೆ.

**ಸುರಪುರದ ನಾಯಕರು**

ಗುಲಬರ್ಗಾ ಜಿಲ್ಲೆಯ ಸುರಪುರ ತಾಲೂಕನ್ನು ಸಂಸ್ಥಾನವನ್ನಾಗಿ ಆಳ್ವಿಕೆಯನ್ನು ನಡೆಸಿದ ನಾಯಕರು "ಸುರಪುರದ ನಾಯಕರು" ಎಂದೇ ಪ್ರಸಿದ್ಧಿಯಾದರು. ಈ ಸಂಸ್ಥಾನದ ಅರಸರನ್ನು ಗೋಸಲ ವಂಶದವರೆಂದು ಕರೆಯುವ ರೂಢಿಯಲ್ಲಿದೆ. ಇವರು ಗೋವುಗಳನ್ನು ಸಲಹುತ್ತಿದ್ದರಿಂದ ಇವರಿಗೆ ಈ ಹೆಸರು ಬಂದಿತ್ತು. ಈ ಅರಸರ ಪೂರ್ವಜರು ದಕ್ಷಿಣದಿಂದ ಬಂದವರೆಂದು ಮೂಲ ಪುರುಷನು ನರಸಿಂಹ ನಾಯಕನೆಂಬ ಅಭಿಪ್ರಾಯವಿದೆ. ಮುಂದೆ ಸುರಪುರಕ್ಕೆ ವಲಸೆ ಬಂದರು ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೭೫), ದ್ರುವನಾರಾಯಣ (೨೦೦೫:೧) ತಿಳಿಸಲಾಗಿದೆ.

ಸುರಪುರದ ಸಂಸ್ಥಾನದ ಗಡ್ಡಿ ಪಿಡ್ಡನಾಯಕನು ೧೬೫೯–೬೬ ಅಧಿಕಾರ ವಿಸ್ತೃತ ಅವಧಿಯಾಗಿದ್ದು, ವೈಷ್ಣವ ಮತಾವಲಂಬಿಗಳಾಗಿರುವುದು ಕಂಡುಬರುತ್ತದೆ. 'ಗಡ್ಡಿ' ಎಂದರೆ ಕಕ್ಕೇರಿ ಸಮೀಪ ಕೃಷ್ಣಾನದಿಯ ಅನೇಕ ಸಣ್ಣಪುಟ್ಟ ಗಡ್ಡೆಗಳಾಗಿವೆ.[೧೪] ಪಿಡ್ಡನಾಯಕನು ೧೬೫೯ರಲ್ಲಿ ತಾಳಿಕೋಟೆ ಮತ್ತು ಕೊಡೇಕಲ್ಲಿನ ಸರದೇಶ ಗಡಿಯನ್ನು ಇನಾಮು ಹಳ್ಳಿಗಳೊಡನೆ ಮಹಮ್ಮದ್ ಆದಿಲ್‌ಶಾಹನಿಂದ ಪಡೆದಿರಬೇಕು. ಗುಲಬರ್ಗಾ ಜಿಲ್ಲೆಯಲ್ಲಿ ಕೃಷ್ಣಾ ಮತ್ತು ಭೀಮಾ ನದಿಯ ನಡುವಿನ ಪ್ರದೇಶವನ್ನು ಸಗರನಾಡು ಎಂದು ಕರೆಯಲಾಗುವುದು. ಈಗಿನ ಶಹಾಪುರ ತಾಲೂಕು ಕೇಂದ್ರಕ್ಕೆ ಹೊಂದಿಕೊಂಡಂತೆ ಉನ್ನತ ಬೆಟ್ಟದ ಮೇಲೆ ಒಂದು ದುರ್ಗವಿದೆ. ಬಿಜಾಪುರದ ಪೂರ್ವಭಾಗದ ಗಡಿನಾಡಾಗಿತ್ತು. ಪಿಡ್ಡನಾಯಕ ಮತ್ತು ಪಾಮನಾಯಕ ಕೂಡಿ ಶಾಹಪೂರ ಕಿಲ್ಲೆಯನ್ನು ದಾಳಿ ಮಾಡಿ ತಮ್ಮ ವಶಕ್ಕೆ ತೆಗೆದುಕೊಂಡರು. ಪಾಪನಾಯಕನು ಆನೆಯ ಜೊತೆಯ ಹೋರಾಟದಲ್ಲಿ ಜಯಶೀಲನಾಗಲು ಬಿಜಾಪುರ ಸುಲ್ತಾನನು ಸಗರನಾಡಿನ ಎಲ್ಲಾ ಪ್ರಾಂತಗಳನ್ನು ಇವನಿಗೆ ಇನಾಮಾಗಿ ನೀಡಿದ್ದಾನೆಂದು ಕೈಫಿಯತ್ತಿನಿಂದ ತಿಳಿದುಬರುತ್ತದೆ ಎಂದು ಪಾಟೀಲ್ (೧೯೯೭:೭೬), ಕಪಟರಾಳ ಕೃಷ್ಣರಾಯರು (೨೦೦೫:೧–೫) ಕೃತಿಕಾರರು ಮೇಲಿನ ವಿಷಯ ಪ್ರಸ್ತಾಪಿಸಿದ್ದಾರೆ.

ಸುರಪುರ ಸಂಸ್ಥಾನಕ್ಕೆ ಔರಂಗಜೇಬನು ತನ್ನ ರಾಜಮುದ್ರೆಯನ್ನು ಅಲ್ಲದೇ ಹಸ್ತಮುದ್ರೆಯನ್ನು ಕಳುಹಿಸಿದನು. ಇದರಲ್ಲಿ "ನೀನು ಮುಸಲ್ಮಾನಾಗಿದ್ದರೆ ನಮ್ಮ ಧರ್ಮ ಬಂಧುವಾಗಿರುತ್ತಿದ್ದಿ, ಸುರಕ್ಷಿತನಾಗಿರುತ್ತಿದ್ದಿ, ಪತನವಿಲ್ಲದೆ ಸಂಕಟದಿಂದ ಮತ್ತು ಅನೇಕ ಶತ್ರುಗಳಿಂದ ಸಂರಕ್ಷಿಸಲ್ಪಡುತ್ತಿದ್ದಿ ಆದರೆ ಮುಸಲ್ಮಾನನಾಗಿಲ್ಲವೆಂಬುದು ಖೇದದ ಸಂಗತಿಯಾಗಿದೆ." ಎಂದು ಪಟ್ಟದಲ್ಲಿ ಸೂಚಿಸಿದ್ದಾನೆ ಇದು ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೭೭), ದ್ರುವನಾರಾಯಣ (೨೦೦೫:೧೯) ತಮ್ಮ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

ಸುರಪುರದ ಅರಸರು ಪ್ರಮುಖ ಹಾಗೂ ಪರಿಣಾಮಕಾರಿ ಆಳ್ವಿಕೆಯಾಗಿತ್ತೆಂದು ಎಲ್ಲಾ ಇನಾಮುಗಳು ಬಿಜಾಪುರದ ಅಲಿ ಆದಿಲ್‌ಶಾಹನು ಕಾಲದಲ್ಲಿಯೇ ಬಹುಮಟ್ಟಿಗೆ ನೀಡಲಾಗಿತ್ತೆಂದು, ಈತನ ಕಾಲದ ಪಾರಸಿ ಸನ್ನದ್‌ಗಳು ತಿಳಿಸುತ್ತೇವೆ. ಪ್ರಮುಖ ಪರಗಣಗಳೆಂದರೇ, ಪರಗಣಿ ತಾಳೀಕೋಟೆ, ಪರಗಣಿ, ಕೆಂಭಾವಿ–ಮಾಮಲೆ, ಮಹಮ್ಮದಾಬಾದ್–ಉರಫ್, ಸಾಲ್ಪತ್ಯಾಡ–ಪರಗಣಿ, ಆಲಮಲ ಮತ್ತು ಪರಗಣಿ ದೇವಪುರಗಳಾಗಿದ್ದವು. ಪ್ರಮುಖ ಪೇಟೆಗಳೆಂದರೆ ಶಾಹಪುರ ಪೇಟೆ, ಆಫ್‌ಜಲ್‌ಪುರ ಪೇಟೆ, ಮತ್ತು ಎಖಲಾಪುರ, ಉರುಫ್ ಕಸಬಾ ಉಸ್ತಾದಬಾದ್ (ಗೋಗಿ), ಪೇಟೆಗಳಾಗಿದ್ದವು. ಪಾಮನಾಯಕ ವಾಗಿಣಿಗೇರಿ ಮತ್ತು ಶಾಹಪುರ ಕಿಲ್ಲೆ ಎರಡರಲ್ಲೂ ಇರುತ್ತಿದ್ದನೆಂದು ಕೈಫಿಯತ್ತುಗಳಿಂದ ತಿಳಿದುಬರುತ್ತದೆ. ವಾಗಣಿಗೇರಿಯಲ್ಲಿ ಗೋಪಾಲಸ್ವಾಮಿ ದೇವಾಲಯವನ್ನು ಕಟ್ಟಿಸಿದನು. ಮತ್ತು ತನ್ನ ಹಿರಿಯ ಹೆಂಡತಿ "ಅಮ್ಮನಾಗತಿಯ" ನೆನಪಿಗಾಗಿ

ಅಮ್ಮಾಪುರವೆಂಬ ಗ್ರಾಮವನ್ನು ನಿರ್ಮಿಸಿದನು. ಈತನೇ ವಲ್ಲಭಾವಿಯ ಕೆರೆಯನ್ನು ಕಟ್ಟಿಸಿದನೆಂದು ಪ್ರತೀತಿಯಿದೆ. ಚಿಕ್ಕನಹಳ್ಳಿಯಲ್ಲಿ ಒಂದು ಹುಡೆಯನ್ನು, ವಾಗಿಣಗೇರಿಯಲ್ಲಿ ಕೋಟೆಯನ್ನು ಕಟ್ಟಿಸಿ ಮದ್ದುಗುಂಡು ತೋಪುಗಳಿಂದ ಸಜ್ಜುಗೊಳಿಸಿದನು. ಆಡಳಿತದಲ್ಲಿ ಅನೇಕ ಸುಧಾರಣೆ ಜಾರಿಗೆ ತಂದನು. ಗುಡಿಕಾರ, ಸರಸೌಬತ್, ಸರಹವಲ್ದಾರ್, ಸಬ್‌ನವೀಸ್, ಮರಾಠಿ, ಸವಾರ, ಮುಂತಾದವು ಸೇನೆಯ ಹುದ್ದೆಯಾಗಿದ್ದು ಗೋಗಿ, ದೇವಪುರ, ತಿಂಥಣಿ, ವಜ್ಜಲ, ಕೊಡೇಕಲ್ ಮುಂತಾದ ಪ್ರಾಂತಗಳಾಗಿದ್ದು ಸುಬೇದಾರನಿಂದ ಆಳ್ವಿಕೆ ಒಳಪಟ್ಟಿದ್ದವು ಎಂದು ಆತನ ಕೈಫಿಯತ್ತುಗಳಲ್ಲಿ ಉಲ್ಲೇಖಗೊಂಡಿದೆ ಪಾಟೀಲ (೧೯೯೭:೭೭) ತಮ್ಮ ಕೃತಿಯಲ್ಲಿ ವಿವರಿಸಿದ್ದಾರೆ.

ಔರಂಗಜೇಬನು ಸ್ವತಃ ವಾಗಿಣಗೇರಿ ಮೇಲೆ ದಾಳಿ ಮಾಡಿ ಕೋಟೆ ವಶಪಡಿಸಿಕೊಂಡನು ಮತ್ತು ಗೋಪಾಲಸ್ವಾಮಿ ದೇವಾಲಯ ನೆಲಸಮಮಾಡಿದನು. ಔರಂಗಜೇಬನ ಮರಣ ನಂತರ ದೇವಾಲಯವನ್ನು ದುರಸ್ಥಿಗೊಳಿಸಿ ಮೂಲ ವಿಗ್ರಹವನ್ನು ಪ್ರತಿಷ್ಠಾಪಿಸಿದರು. ವೆಂಕಟಪ್ಪನಾಯಕನು (೧೮೪೨–೫೮) ಅಧಿಕಾರಕ್ಕೆ ಬಂದನು. ಅಪ್ರಾಪ್ತ ವಯಸ್ಕನಾಗಿದ್ದುದರಿಂದ ತಾಯಿ ಈಶ್ವರಮ್ಮ ಆಡಳಿತ ನಡೆಸಿದಳು. ಮೆಡೋಸ್ ಟೇಲರ್‌ನಿಗೆ ರಾಜಕೀಯ ಪ್ರತಿನಿಧಿಯಾಗಿ ಬ್ರಿಟಿಷ್ ಸರಕಾರ ನೇಮಕ ಮಾಡಿತ್ತು. ಇಲ್ಲಿಂದ ಸುರಪುರ ಅರಸರು ಸ್ವತಂತ್ರ ಅಧಿಕಾರ ಹೊಂದಲೆ ಇಲ್ಲ. ಲಾರ್ಡ್ ಡಾಲ್ ಹೌಸಿಯು ವೆಂಕಟಪ್ಪನಾಯಕನಿಗೆ ವಾರ್ಷಿಕ ೨೦,೦೦೦ ರೂಪಾಯಿಗಳನ್ನು ಬ್ರಿಟಿಷ್ ಸರಕಾರಕ್ಕೂ ನೀಡಬೇಕೆಂದು ಸೂಚನೆ ನೀಡಿದನು. ಅದುವರೆಗೂ ನಿಜಾಮನ ನಿಯಂತ್ರಣದಲ್ಲಿದ್ದ ಸುರಪುರದಲ್ಲಿ ದಬ್ಬಾಳಿಕೆಯ ಅಡಳಿತ ಮತ್ತು ಬ್ರಿಟಿಷರ ನೀತಿಯಿಂದಾಗಿ ಆರ್ಥಿಕ ಪರಿಸ್ಥಿತಿ ಹದಗೆಟ್ಟಿತು. ಡಾಲಹೌಸಿಯು ನೀತಿಯನ್ನು ವಿರೋಧಿಸಿದನು. ನರಗುಂದದ ಬಾಬಸಾಹೇಬ್, ಮುಂಡರಗಿಯ ಭೀಮರಾಯರನ್ನು ಸೇರಿಕೊಂಡು ಬ್ರಿಟಿಷರ ವಿರುದ್ಧ ದಂಗೆ ಎದ್ದರು. ಸುರಪುರ ಕೋಟೆಯನ್ನು ವಶಪಡಿಸಿಕೊಂಡು ಬಂಧಿಸಲಾಯಿತು. ಸಿಕಂದರಾಬಾದಿಗೆ ಕರೆದುಕೊಂಡು ಹೋಗುವಾಗ ಮಾರ್ಗ ಮಧ್ಯದಲ್ಲಿ ಆತ್ಮಹತ್ಯೆ ಮಾಡಿಕೊಂಡನು. ಇದರಿಂದ ೧೮೬೧ರಲ್ಲಿ ವೆಂಕಟಪ್ಪನಾಯಕನೇ ಈ ವಂಶದ ಕೊನೆಯ ಅರಸನೆಂದು ಕಪಟರಾಳ ಕೃಷ್ಣರಾಯರು (೨೦೦೫:೩೦೨) ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೮೧) ಮೇಲಿನ ವಿಷಯಗಳನ್ನು ಕೃತಿಕಾರರು ತಮ್ಮ ಕೃತಿಗಳಲ್ಲಿ ತಿಳಿಸಿದ್ದಾರೆ.

## ಮೊಗಲರು

ಮೊಗಲ ಸಾಮ್ರಾಜ್ಯದ ಸುಲ್ತಾನರು ದಖ್ಖನ ಪ್ರದೇಶದ ಮೇಲೆ ತೀವ್ರ ಗಮನ ಹರಿಸುವುದರ ಮುಖಾಂತರ ದಾಳಿಯನ್ನು ಕೈಗೊಂಡರು ಇದಕ್ಕಿಂತ ಮುಂಚೆ ದೆಹಲಿ ಸುಲ್ತಾನರು ಅಲ್ಲಾವುದ್ದೀನ್ ಖಿಲ್ಜಿ, ಮಹಮ್ಮದ್ ಬಿನ್ ತುಘಲಕ್ ದಾಳಿ ಮಾಡುವುದರ ಮುಖಾಂತರ ಸಂಪತ್ತನ್ನು ಕೊಳ್ಳೆ ಹೊಡೆದರು. ಮೊಗಲರು ದಾಳಿಗೆ ಮುಖ್ಯ ಉದ್ದೇಶ ದಖ್ಖನ್ನಿನ ಪ್ರಬಲ ರಾಜಕೀಯ ಶಕ್ತಿಯನ್ನು

ದಮನ ಮಾಡುವುದು ಆಗಿತ್ತೇ ವಿನಹ ದುರದ್ದೇಶವನ್ನು ಹೊಂದಿರಲಿಲ್ಲ. ಮೊಗಲ ರಾಜರುಗಳಲ್ಲಿ ಔರಂಗಜೇಬನು ಹೆಚ್ಚು ಗಮನ ಹರಿಸುವುದರ ಮುಖಾಂತರ ಬೇರಾರ್, ಅಹಮ್ಮದ್ ನಗರ, ಗೋಲ್ಕಂಡ, ವಿಜಾಪುರ, ಒಳಗೊಂಡಂತೆ ಗುಲಬರ್ಗಾ ಪ್ರದೇಶದ ಮೇಲೆ ದಾಳಿ ಕೈಗೊಂಡಿರುವುದು ಗಮನಿಸಬಹುದಾಗಿದೆ.

ಔರಂಗಜೇಬನು ದಖ್ಖನಿಗೆ ರಾಜ್ಯಪಾಲನಾಗಿ ೧೬೪೫ ನೇಮಕಗೊಂಡು ಸ್ವಲ್ಪ ಕಾಲದಲ್ಲಿಯೇ ಗುಲಬರ್ಗಾ ಮೇಲೆ ದಾಳಿ ಮಾಡಿ ಅಲ್ಲಿಂದ ಮುಂದುವರೆದು ಬಿಜಾಪುರವರೆಗೂ ತಮ್ಮ ದಂಡೆಯಾತ್ರೆ ಕೈಗೊಂಡನು, ಬೀದರನ್ನು ೧೬೫೭ ರಲ್ಲಿ ಆಕ್ರಮಿಸಿ ಮಹಾಬತ್‌ಖಾನ್‌ನು ನೇತೃತ್ವದಲ್ಲಿ ಪ್ರಬಲ ಸೈನ್ಯವನ್ನು ಕಳುಹಿಸಿ ಬಿಜಾಪುರ ಎಲ್ಲೆಗಳನ್ನು ಪ್ರವೇಶಿಸಿ ಕಲ್ಯಾಣ ಮತ್ತು ಗುಲಬರ್ಗಾ ನಗರಗಳನ್ನು ಸುಲಭವಾಗಿ ಆಕ್ರಮಿಸಿಕೊಂಡನು. ಮೊಗಲರ ದಖ್ಖನ್ನಿನ ರಾಜ್ಯಪಾಲನಾಗಿದ್ದ ಬಹದ್ದೂರ್‌ಖಾನನು ತಮ್ಮ ಪ್ರಬಲ ಸೇನೆಯಿಂದ ಗುಲಬರ್ಗಾವನ್ನು ೧೬೭೭ರಲ್ಲಿ ವಶಕ್ಕೆ ತೆಗೆದುಕೊಂಡನು. ಗುಲಬರ್ಗಾ ಜಿಲ್ಲೆ ದಕ್ಷಿಣದ ಭಾಗಗಳಾದ ಸುರಪುರ, ಶಹಾಪುರ, ಸಗರನಾಡು, ಮುಂತಾದ ಪ್ರದೇಶಗಳು ಮೊದಲು ವಿಜಯನಗರದ ಮಾಂಡಲೀಕರಾಗಿದ್ದು ನಂತರ ಸ್ವತಂತ್ರವಾಗಿದ್ದ ಸುರಪುರ ನಾಯಕರ ಆಳ್ವಿಕೆಯಲ್ಲಿದ್ದವು. ಔರಂಗಜೇಬನ ದಖ್ಖನ್ನಿನ ವಿಸ್ತರಣಾ ನೀತಿಗೆ ಸುರಪುರದ ನಾಯಕರು ನಿರಂತರ ಸಮಸ್ಯೆಯಾಗಿದ್ದರು. ಕೊನೆಗೆ ನಾಯಕರ ಜೊತೆ ಮೊಗಲರು ಸಂಧಾನ ಮಾಡಿಕೊಳ್ಳಲೇ ಬೇಕಾಯಿತು. ಇದರೊಂದಿಗೆ ಗುಲಬರ್ಗಾ ಜಿಲ್ಲೆಯ ಎಲ್ಲಾ ಪ್ರಾಂತ್ಯಗಳು ಮೊಗಲರ ಹತೋಟಿಗೆ ಒಳಪಟ್ಟವು. ಇದರ ಪರಿಣಾಮವಾಗಿ ಸುರಪುರದ ನಾಯಕರು ಮೊಗಲ ಮಾಂಡಲೀಕರಾದರು. ಗುಲಬರ್ಗಾ ಜಿಲ್ಲೆಯ ದಕ್ಷಿಣ ಪ್ರಾಂತಗಳಲ್ಲಿ ಆಡಳಿತ ಹತೋಟಿಯನ್ನು ನಿರಂತರವಾಗಿ ಪಡೆಯುವಂತಾಯಿತು. ಒಟ್ಟು ವಸೂಲಾದ ಕಂದಾಯದಲ್ಲಿ ಸುರಪುರದ ನಾಯಕರಿಗೆ ಶೇಕಡಾ ೧೦ನೇ ಭಾಗವು ಲಭ್ಯವಾಗುತ್ತಿತ್ತು ಎಂದು ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೭೭:೭೨) ಕೃತಿಯಲ್ಲಿ ತಿಳಿಸಿದ್ದಾರೆ.

ಮಧ್ಯಕಾಲೀನ ನಂತರ ನಿಜಾಮ ವಂಶದ ಆಳ್ವಿಕೆ ಆರಂಭವಾಗುತ್ತದೆ. ಈ ವಂಶದ ಆಳ್ವಿಕೆಯ ಬಗ್ಗೆ ನಡೆದ ಸಂಶೋಧನಾ ವಿವರವನ್ನು ಪ್ರತ್ಯೇಕ ಅಧ್ಯಾಯದಲ್ಲಿ ಅಭ್ಯಸಿಸಲಾಗಿದೆ.

ವಸಾಹತು ಪೂರ್ವ ಚಾರಿತ್ರ ಕೃತಿಗಳ ಚರಿತ್ರೆ ಲೇಖನಶಾಸ್ತ್ರ ಗಮನಿಸಿದಾಗ ನಮಗೆ ಸಾಮಾನ್ಯವಾಗಿ ಅರಸು ಕೇಂದ್ರಿತ ಚರಿತ್ರೆಗೆ ಸೀಮಿತಗೊಳಿಸಿದ ಅಧ್ಯಯನಗಳ ಸಂಖ್ಯೆಯೇ ಹೆಚ್ಚಿನವು. ಪ್ರಾಚೀನ ಕಾಲದ ಚರಿತ್ರೆಯ ಬರವಣಿಗೆಗೆ ಹೆಚ್ಚಾಗಿ ಶಾಸನ ಸಾಮಗ್ರಿ ಮತ್ತು ಸ್ವಲ್ಪ ಸಾಹಿತ್ಯಿಕ ಆಕರಗಳನ್ನು ಅವಲಂಬಿಸುವುದು ಸಾಮಾನ್ಯವಾಗಿದೆ. ಮಧ್ಯಯುಗೀನ ಚರಿತ್ರೆಗೆ ಹೆಚ್ಚಾಗಿ ಸಾಹಿತ್ಯ, ನಾಣ್ಯ ಮತ್ತು ಶಾಸನ ಇತ್ಯಾದಿ ಆಕರಗಳನ್ನು ಅವಲಂಬಿಸಲಾಗಿದೆ. ಈ

ಆಕರ ಸಾಮಗ್ರಿಗಳ ಸೃಷ್ಟಿಕರ್ತರು ಮೇಲ್ವರ್ಗಗಳ ಜನರು ಇದರಿಂದ ಸಹಜವಾಗಿ ಮೇಲ್ವವರ್ಗಗಳ ಸಾಂಸ್ಕೃತಿಯನ್ನೇ ಹೆಚ್ಚಾಗಿ ಪ್ರತಿಬಿಂಬಿಸುವುದು ಸಹಜ. ಮೇಲ್ವರ್ಗದವರ ಸಾಂಸ್ಕೃತಿಯನ್ನೇ ಕರ್ನಾಟಕದ ಸಮಗ್ರ ಜನತೆಯು ಸಾಂಸ್ಕೃತಿಯೆಂಬಂತೆ ರಚಿಸಲಾಗಿದೆ. ಬಹುಸಂಖ್ಯಾತರ ಚರಿತ್ರೆಯನ್ನು ಒಳಗೊಂಡ ಜಾನಪದ ಸಾಮಗ್ರಿ, ಸ್ಥಳಪುರಾಣಗಳು, ಐತಿಹ್ಯ ಮುಂತಾದ ಆಕರಗಳ ಬಳಕೆಯನ್ನು ಕಂಡುಬರುವುದಿಲ್ಲ.

ಶಿಲಾಯುಗ/ಪ್ರಾಗೈತಿಹಾಸ ಸಂಬಂಧಿಸಿದಂತೆ ಅನೇಕ ಸಂಶೋಧನೆ ಕೇಂದ್ರ ಸರಕಾರವು ಕೈಗೊಂಡಿದೆ. ಕೆ. ಪದ್ದಯ್ಯ, ಅಸುಂದರ, ಶೇಷಾದ್ರಿ ಮುಂತಾದ ವಿದ್ವಾಂಸರು ಅನೇಕ ನೆಲೆಗಳು ಪತ್ತೆ ಹಚ್ಚಿದ್ದಾರೆ. ಮಾನವ ಜೀವನ ಶೈಲಿ, ಉಪಯೋಗಿಸುವಂತಹ ವಸ್ತುಗಳ ಕಂಡುಬಂದಿವೆ. ಇವುಗಳ ಬಗ್ಗೆ ಹೆಚ್ಚಿನ ಬೆಳಕು ಚೆಲ್ಲಿದ್ದಾರೆ. ಶಿಲಾಯುಗದ ಕಾಲದ ಬಗೆ ನೀಖರವಾದಂತಹ ಕಾಲಮಾನವನ್ನು ತಿಳಿಸುವಲ್ಲಿ ಭಿನ್ನಾಭಿಪ್ರಾಯ ಮತ್ತು ವ್ಯತ್ಯಾಸವನ್ನು ಕಂಡುಬರುತ್ತದೆ. ಇದು ಎಚ್.ಎಸ್.ಗೋಪಾಲರಾವ್ (೨೦೦೯), ಎಂ.ಬಿ.ಪಾಟೀಲ (೧೯೯೭), ಅ. ಸುಂದರ (೧೯೭೧), ಇರ್ಫಾನ್ ಹಬೀಬ್ ಪೂರ್ವತಿಹಾಸ (೨೦೦೮) ಇವರ ಕೃತಿಗಳಲ್ಲಿ ಕಾಲಮಾನದ ವಿವಿಧತೆಯನ್ನು ಕಾಣಬಹುದಾಗಿದೆ. ಮೌರ್ಯ ಆಳ್ವಿಕೆಯು ಗುಲಬರ್ಗಾ ಜಿಲ್ಲೆ 'ಸನ್ನಿತಿಯಲ್ಲಿ' ಆಳ್ವಿಕೆಗೆ ಹೊಂದಿತ್ತು ಎಂದು ಆಧಾರಗಳು ದೊರಕಿವೆ. ಸುವರ್ಣಗಿರಿ ಬಗ್ಗೆ ಇರುವಂತಹ ವಿದ್ವಾಂಸರ ಭಿನ್ನಾಭಿಪ್ರಾಯ ಲಕ್ಷ್ಮಣ್ ತೆಲಗಾವಿಯವರು ಮೌರ್ಯ ಮತ್ತು ಶಾತವಾಹನರ ಯುಗ ಎಂಬ ಕೃತಿಯಲ್ಲಿ ಚರ್ಚಿಸಿದ್ದಾರೆ.

ಸೂರ್ಯನಾಥ ಕಾಮತ್ ಅವರ ಕರ್ನಾಟಕ ಸಂಕ್ಷಿಪ್ತ ಇತಿಹಾಸದಲ್ಲಿ ಅರಸ, ಯುದ್ಧಗಳು, ಆಡಳಿತ ಹೆಚ್ಚಾಗಿ ವಿವರಣೆಯನ್ನು ನೀಡಲಾಗಿದ್ದು, ಕೊನೆಗೆ ಕಲೆ ಮತ್ತು ವಾಸ್ತುಶಿಲ್ಪದ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಇಲ್ಲಿ ಯಾವುದೇ ತರಹದ ಜನಸಾಮಾನ್ಯ ಬಗ್ಗೆ ಪ್ರಸ್ತಾಪವನ್ನು ಕಂಡುಬರುವುದಿಲ್ಲ. ಷೇಕ್ ಅಲಿಯವರ ಕರ್ನಾಟಕ ಚರಿತ್ರೆ ೭ ಸಂಪುಟಗಳಲ್ಲಿ ೪ನೇ ಸಂಪುಟ ಬಹಮನಿ ಸಾಮ್ರಾಜ್ಯಕ್ಕೆ ಸೀಮಿತ ಹೊಂದಿದೆ. ಹಾಗೂ ಹೈದರ್ ಅಲಿ, ಟಿಪ್ಪುಸುಲ್ತಾನ ಇಬ್ಬರ ಆಳ್ವಿಕೆಯ ಕಾಲಕ್ಕೆ ೬೦೪ ಪುಟಗಳು ಮೀಸಲಾಗಿರುವದನ್ನು ಕಂಡುಬರುತ್ತದೆ. ಶಿವರುದ್ರಸ್ವಾಮಿ ಅವರು ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ ಕೃತಿಯಲ್ಲಿ ಹೆಚ್ಚಾಗಿ ಕಲೆ ಮತ್ತು ವಾಸ್ತುಶಿಲ್ಪದ ಬಗ್ಗೆ ಹೆಚ್ಚಿನ ವಿಷಯವನ್ನು ಒಳಗೊಂಡಿದ್ದು ಕಂಡುಬರುತ್ತದೆ. ೧೯೧೭ರಲ್ಲಿ ಪ್ರಕಟಗೊಂಡ ಆಲೂರು ವೆಂಕಟರಾಯರ 'ಕರ್ನಾಟಕದ ಗತ ವೈಭವ'ವು ಕರ್ನಾಟಕದ ಚರಿತ್ರೆಯನ್ನು ಆರಂಭದಿಂದ ವಿಜಯನಗರದವರೆಗೆ ನಿರೂಪಿಸುತ್ತದೆ. ಅವರು ಕರ್ನಾಟಕ ವೈಭವವು ವಿಜಯನಗರದ ನಂತರ ಮುಕ್ತಾಯವಾಯಿತು ಎನ್ನುತ್ತಾರೆ.

ಪಂಚಮುಖಿಯವರ 'ಕರ್ನಾಟಕ ಇತಿಹಾಸ' ಮತ್ತು ವೆಂಕಟಾಚಲಶಾಸ್ತ್ರೀ ಅವರ ನಮ್ಮ ಕರ್ನಾಟಕ ಸರಳತೆ ಬರವಣಿಗೆಗಳು ಈ ಕೃತಿಗಳನ್ನು ಹೆಸರಿಸಬಹುದು.

ಗುಲಬರ್ಗಾವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆಯನ್ನು ನಡೆಸಿದ ಬಹಮನಿ ಸುಲ್ತಾನರು ಮಧ್ಯಕಾಲೀನ ಇತಿಹಾಸದಲ್ಲಿ ಗಮನಾರ್ಹ ಪಾತ್ರ ವಹಿಸಿದ್ದಾರೆ. ಬಹಮನಿಯ ಚರಿತ್ರೆ ಬರವಣಿಗೆಗೆ ಸಂಬಂಧಿಸಿದಂತೆ ಸುಲ್ತಾನರ ಮತ್ತು ಜನಸಾಮಾನ್ಯರ ಸಂಬಂಧ, ವ್ಯಾಪಾರ ವಹಿವಾಟು, ಶಿಕ್ಷಣದ ಬಗ್ಗೆ ಸುಲ್ತಾನರು ಕೈಗೊಂಡ ಸುಧಾರಣೆಗಳ ಬಗ್ಗೆ ಹೆಚ್ಚಿನ ಕೃತಿಗಳ ಬರವಣಿಗೆಯಲ್ಲಿ ಕಂಡುಬರುವುದಿಲ್ಲ. ಬಹಮನಿ ಸಾಮ್ರಾಜ್ಯದ ಕಲೆ ಮತ್ತು ವಾಸ್ತುಶಿಲ್ಪಗಳ ರಚನೆಯ ವೈಶಿಷ್ಟತೆ ಮತ್ತು ವೈಜ್ಞಾನಿಕತೆಯನ್ನು ಗುರುತಿಸುವಂತಹ ಕೃತಿಗಳು ಕಾಣುವುದಿಲ್ಲ. ಆದರೆ ರಾಜಕೀಯ ಇತಿಹಾಸ ಬರವಣಿಗೆಯಲ್ಲಿ ಕೊನೆಯಲ್ಲಿ ಹೆಸರುಗಳು ಪ್ರಸ್ತಾಪಿಸಿ ಕೈಬಿಟ್ಟಿರುವಂತಹ ಕೃತಿಗಳೇ ಹೆಚ್ಚು.

ಬಹಮನಿ ಸಾಮ್ರಾಜ್ಯದ ರಾಜಕೀಯ ಇತಿಹಾಸದ ಬರವಣಿಗೆಯಲ್ಲಿ ಹೆಚ್ಚಿನ ಕೃತಿಕಾರರು ವಿಜಯನಗರ ಸಾಮ್ರಾಜ್ಯಗಳ ನಡುವಿನ ಯುದ್ಧಗಳನ್ನು ಪ್ರಧಾನೀಕರಿಸಿ ರಚಿಸಿದ್ದನ್ನು ಗಮನಿಸಬಹುದು. ಬಹುತೇಕ ಕಡೆ ಬಹಮನಿಯ ಚರಿತ್ರೆಯನ್ನು ಬರವಣಿಗೆಯಲ್ಲಿ ನಿರ್ಲಕ್ಷ್ಯ ಮಾಡಲಾಗಿದೆ. ಆದರೆ ಬಹಮನಿ ಸಮಕಾಲೀನ ವಿಜಯನಗರ ಸಾಮ್ರಾಜ್ಯದ ಬಗ್ಗೆ ಕರ್ನಾಟಕ ಚರಿತ್ರೆ ಬರವಣಿಗೆಯಲ್ಲಿ ಬಹಳ ಉದಾರವಾಗಿ ಬರೆದಿದ್ದನ್ನು ನೋಡಬಹುದಾಗಿದೆ.

ವಿಜಯನಗರದ ಚರಿತ್ರೆಯು ಬ್ರಿಟಿಷರ ವಿಭಜಿಸಿ ಆಳುವ ನೀತಿಗೆ ಮತ್ತು ಕೋಮುವಾದಿ ಬೆಳವಣಿಗೆಗಳಿಗೆ ಬಳಕೆಯಾಯಿತು. ಹಿಂದೂ ಧರ್ಮದ ಪುನರ್ ಸ್ಥಾಪನೆಗಾಗಿ ಹುಟ್ಟಿಕೊಂಡ ಸಾಮ್ರಾಜ್ಯವೆಂದು, ಸುವರ್ಣಯುಗದ ಪ್ರತಿಪಾದನೆ ಮತ್ತು ಮುಸ್ಲಿಂ ವಿರೋಧಿ ನೆಲೆಯಿಂದ ವಿಜಯನಗರ ಚರಿತ್ರೆ ರಚನೆಗೊಂಡಿತು. ವಿಜಯನಗರ ಚರಿತ್ರೆಗೆ ಸಂಬಂಧಿಸಿದಂತೆ ರಾಬರ್ಟ್ ಸಿವೆಲ್ 'ಮರೆತು ಹೋದ ವಿಜಯನಗರ ಸಾಮ್ರಾಜ್ಯ', ಅದಕ್ಕೆ ವಿರುದ್ಧ ಎನ್ನುವ ರೀತಿಯಲ್ಲಿ ಸೂರ್ಯನಾರಾಯಣ್‌ರಾವ್ ಅವರ 'ಎಂದೆಂದಿಗೂ ಮರೆಯಲಾಗದ ವಿಜಯನಗರ ಸಾಮ್ರಾಜ್ಯ' ಕೃತಿಯು ರಾಷ್ಟ್ರೀಯವಾದಿ ನೆಲೆಯಲ್ಲಿ ರಚನೆಗೊಂಡಿತು. ರಾಬರ್ಟ್ ಸಿವೆಲ್ ತನ್ನ ಕೃತಿಯ ಮೂಲಕ ವಿಜಯನಗರ ಚರಿತ್ರೆ ಲೇಖನ ಸರಣಿಯನ್ನು ಆರಂಭಿಸುವುದರ ಜೊತೆಗೆ ಅಧ್ಯಯನವನ್ನು ಮತೀಯ ದೃಷ್ಟಿಕೋನದಿಂದ ನೋಡಿದರು. ಸಿವೆಲ್ ನಂತರ ವಿಜಯನಗರ ಚರಿತ್ರೆಯ ಕುರಿತು ಕೆಲಸ ಮಾಡಿದ ಭಾರತೀಯ ವಿದ್ವಾಂಸರಲ್ಲಿ ಕೃಷ್ಣಸ್ವಾಮಿ ಅಯ್ಯಂಗಾರ್ ಪ್ರಮುಖರು. ಅವರ ಪ್ರಕಾರ ವಿಜಯನಗರ ಸ್ಥಾಪನೆ ಮತ್ತು ಅವನತಿ ಇವೆರಡಕ್ಕೂ ಹಿಂದೂ-ಮುಸ್ಲಿಂ ನಡುವಿನ ಸಂಘರ್ಷವೇ ಮೂಲ ಕಾರಣ ಎಂಬ ಅಭಿಪ್ರಾಯ ಹೊಂದಿದ್ದಾರೆ. ಅಯ್ಯಂಗಾರ್ ಅವರು

ತಮ್ಮ ವಾದವನ್ನು ಮುಸ್ಲಿಂ ವಿರೋಧಿ ನೆಲೆಯಲ್ಲಿ ಹಾಗೂ ರಾಷ್ಟ್ರೀಯತೆಯ ನೆಲೆಯಲ್ಲಿ ಮಂಡಿಸಿದನ್ನು ಕಂಡುಬರುತ್ತದೆ. ಗುಲಬರ್ಗಾ ಪ್ರದೇಶದಲ್ಲಿ ಕೇಂದ್ರೀಕೃತಗೊಂಡಿದ್ದ ಬಹಮನಿ ಸಂಸ್ಥಾನದ ಉಪೇಕ್ಷೆಯ ಹಿಂದೆ ಈ ಬಗೆಯ ಸೈದ್ಧಾಂತಿಕತೆಗಳೂ ಕೆಲಸ ಮಾಡಿವೆ ಎನ್ನಬಹುದು.

**ಟಿಪ್ಪಣಿಗಳು**

೧. ಕ್ವಾರ್ಟ್ ಜೈಟ್‌ಕಲ್ಲು, ಉಸುಕುಕಲ್ಲು, ಸುಣ್ಣದಕಲ್ಲು, ಉರುಟು ಕ್ವಾರ್ಟ್‌ಜೈಟ್, ಇವುಗಳನ್ನು ಆದಿ ಹಳೆಶಿಲಾಯುಗ ಮಾನವರು ತಮ್ಮ ಉಪಕರಣಗಳನ್ನು ಮಾಡಲು ಅತ್ಯಂತ ಹೆಚ್ಚಾಗಿ ಉಪಯೋಗಿಸುತ್ತಿದ್ದರು.

೨. ಸುರಪುರ ತಾಲೂಕಿನ ಹುಣಸಗಿ ಸುಮಾರು ೨೫೦ ಚದರ ಕಿ.ಮೀ. ವಿಸ್ತಾರವಾದ ಕೊಳ್ಳವು, ಇದರ ಸುತ್ತಲೂ ಶೇದಿಕಲ್ಲು ಮತ್ತು ಜೇಡಿ ಪದರುಗಳಳ್ಳು ಪ್ರಸ್ಥ ಪ್ರದೇಶವಿದೆ. ಇಲ್ಲಿ ೧೯೬೭ರಿಂದ ನಡೆಸಲಾದ ಅನ್ವೇಷಣೆಯ ಪರಿಣಾಮವಾಗಿ ೪೫ಕ್ಕಿಂತಲೂ ಹೆಚ್ಚು ಅಶ್ಯೂಲ್ ನಿವೇಶನಗಳು ಪತ್ತೆಯಾಗಿವೆ. ಇವುಗಳಲ್ಲಿ ಹೆಚ್ಚಿನವು ವಾಸಸ್ಥಾನ ನಿವೇಶನಗಳು, ಸುಮಾರು ೨೦೦೦ ಮಾನವ ನಿರ್ಮಿತ ಉಪಕರಣಗಳು ದೊರೆತಿವೆ. ಕೈಕೊಡಲಿಗಳು, ಮಚ್ಚುಗಳು, ಸುತ್ತಿಗೆಗಳು, ಬಹುಮುಖ ಆಯುಧಗಳು, ಭರ್ಜಿಮೊನೆಗಳು, ಬಂಡಿಕಲ್ಲುಗಳು, ಹರೆಯುವ ದಪ್ಪ ಚಕ್ಕೆಗಳು, ಕೆ. ಪದ್ದಯ್ಯ ಈ ನಿವೇಶವನ್ನು ಶೋಧಿಸಿ ಉತ್ಖನನ ಮಾಡಿದರು.

೩. ಸುಮಾರು ೧೮೪೦ರ ದಶಕದಿಂದ ೧೯೫೩ರ ತನಕ ಸುಮಾರು ೭೦-೭೫ ನೆಲೆಗಳಲ್ಲಿ ಇಂಥ ಬೂದಿ ದಿನ್ನೆಗಳು ಇಲ್ಲವೆ ಇವುಗಳ ಅವಶೇಷಗಳು ಶೋಧವಾಗಿವೆ. ರಾಬರ್ಟ್ ಬ್ರೂಸ್‌ಫುಟ್‌ರವರು ಕೆಲವು ಬೂದಿ ದಿನ್ನೆಗಳನ್ನು ಮತ್ತು ಸುತ್ತಮುತ್ತಲಿನ ನೂತನ ಶಿಲಾಯುಗ ಸಂಸ್ಕೃತಿಗಳ ಅವಶೇಷಗಳನ್ನು ಪರಿಶೀಲಿಸಿ ಇವು ನೂತನ ಶಿಲಾಯುಗ ಕಾಲವೆಂದು ಅಭಿಪ್ರಾಯಪಟ್ಟರು. ಒಬ್ಬ ರಸಾಯನಶಾಸ್ತ್ರಜ್ಞನ ಸಹಾಯದಿಂದ ಸಗಣಿ ಸುಮಾರು ೧೨೦೦° ಸೆಂಟಿಗ್ರೇಡ್‌ನಲ್ಲಿ ಸುಟ್ಟುಹೋಗಿದ್ದರಿಂದ ಇವು ಇಂಥ ಬೂದಿ ಕಿಟ್ಟ ದಿನ್ನೆಗಳಾಗಿವೆ ಎಂದು ಸಿದ್ಧ ಮಾಡಿದರು. ಅಂದಿನಿಂದ ೧೯೫೫ರ ತನಕವೂ ಇವು ಹುಟ್ಟು ಮತ್ತು ಸಗಣಿಯನ್ನು ದೊಡ್ಡ ಪ್ರಮಾಣದಲ್ಲಿ ಸುಡುವ ಉದ್ದೇಶ ಮತ್ತು ಇವುಗಳ ಕಾರಣಕರ್ತರ ಬಗ್ಗೆ ಅಧ್ಯಯನ ಮಾಡಿದರು. ವೈಜ್ಞಾನಿಕವಾಗಿ ಅಧ್ಯಯನ ಮಾಡಿ ಉತ್ತನೂರುದಲ್ಲಿಯ ಒಂದು ಬೂದಿಗುಡ್ಡೆಯನ್ನು ಉತ್ಖನನ ಮಾಡಿದರು. ಮಜಮದಾರ್ ಮತ್ತು ರಾಜಗುರು ಇವರು ಸಂಗನಕಲ್ಲಿನ ಇಂಥ ಇನ್ನೊಂದು ಗುಡ್ಡೆಯನ್ನೂ ರಾಮರೆಡ್ಡಿ ಪಾಳ್ಯದಲ್ಲಿಯ ಒಂದು ಬೂದಿಗುಡ್ಡೆಯನ್ನು ಇದಕ್ಕೂ ಮುಂಚೆ ಉತ್ಖನನ ಮಾಡಿ ತಮ್ಮ

ಅಧ್ಯಯನ ಆಧಾರಿತ ಅಭಿಪ್ರಾಯ ಮಂಡಿಸಿದ್ದಾರೆ. ೧೯೯೨-೯೫ನೇ ಸಾಲಿನಲ್ಲಿ ಪದ್ದಯ್ಯ ಬೂದಿಹಾಳದಲ್ಲಿ ಬೂದಿ ಗುಡ್ಡೆಯನ್ನು ಉತ್ಖನನ ಮಾಡಿದರು.

೪. ಸಾಮಾನ್ಯವಾಗಿ ವಾಸಸ್ಥಳದ ಹತ್ತಿರ ನದಿ/ನೀರು ಇರಬೇಕು. ದನಕರುಗಳಿಗೆ ಹುಲ್ಲು, ಕೃಷಿ ಮಾಡುವಂತಹ ಭೂಮಿ ಸಮೀಪದಲ್ಲಿದ್ದರಬೇಕು ಮತ್ತು ಸಾಧನಗಳನ್ನು ಮಾಡಿಕೊಳ್ಳಲು ಬೇಕಾದ ಕಲ್ಲುಗಳು ಹತ್ತಿರವಿರಬೇಕು. ಇವೆಲ್ಲ ಅನುಕೂಲತೆಗಳನ್ನು ನೋಡಿಕೊಂಡು ವಾಸದ ನೆಲೆಗಳನ್ನು ಆರಿಸುತ್ತಿದ್ದರು. ಇವರು ಸಾಮಾನ್ಯವಾಗಿ ವಾಸಿಸುತ್ತಿದ್ದ ಮನೆಗಳು, ಗುಡಿಸಲುಗಳು, ದುಂಡಾಗಿರುವ ಅಥವಾ ಚೌಕೋನವಾಗಿರುವ ಒಂದೇ ಕೋಣೆಯುಳ್ಳದ್ದಾಗಿ ರುತಿತ್ತು. ಸ್ವಲ್ಪ ಸ್ವಲ್ಪ ಅಂತರದಲ್ಲಿ ಮರದ ಕಂಬಗಳನ್ನು ಹುಗಿದು ಮಧ್ಯದಲ್ಲಿ ದಬ್ಬೆ ಅಥವಾ ಸೊಪ್ಪುಗಳನ್ನು ಹೆಣೆದು ಮಣ್ಣು ಬೆಳೆಯುತ್ತಿದ್ದರು. ಗೋಡೆಯ ಸುತ್ತಲೂ ಹೊರಬದಿಯಲ್ಲಿ ದೊಡ್ಡ ಕಲ್ಲು ಗುಂಡುಗಳಿರುತ್ತಿದ್ದವು. ಪ್ರಾಯಶಃ ಮೇಲ್ಗಡೆಯಲ್ಲಿ ಇಳಿಜಾರು ಹುಲ್ಲಿನ ಮಾಡುಗಳಿರುತ್ತಿದ್ದವು.

೫. ಇವರು ಸಂಗ್ರಹಿಸುವ ದವಸ ಧಾನ್ಯಗಳೆಂದರೆ ಗೋಧಿ, ಜೋಳ, ಮುಂತಾದವುಗಳು ಶೇಖರಿಸಿಡಲು ವಿವಿಧ ಮಣ್ಣಿನ ಪಾತ್ರೆಗಳನ್ನು ಮಾಡಿಕೊಳ್ಳುತ್ತಿದ್ದರು. ತಟ್ಟೆ, ಅರ್ಧಗೋಲಾಕೃತಿಯ ಪಾತ್ರೆ, ಉಬ್ಬಿದ ಹೊಟ್ಟೆಯುಳ್ಳ ಕೊಡಗಳು, ಬಾನಿಗಳು, ದೊಡ್ಡ ಜಾಡಿಗಳು ಬಳೆಯಾಕೃತಿಯ ಪಾತ್ರೆಗಳು, ವಿವಿಧಾಕೃತಿಯ ಮುಚ್ಚಳಗಳು, ತೂತುಗಳುಳ್ಳ ಪಾತ್ರೆಗಳನ್ನು ಗಟ್ಟಿಮಾಡಲು ಆವಿಗೆ ಸುಡಲಾಗುತ್ತಿತ್ತು. ಈ ಪಾತ್ರೆಗಳ ಮೇಲೆ ನೇರಳೇ ಬಣ್ಣದ ಅಪರೂಪವಾಗಿ ರೇಖಾಚಿತ್ರಗಳು (ಬಿಡಿಸಲಾಗಿದೆ) ರಚಿಸಲಾಗಿದೆ.

೬. ವಿವಿಧ ಜಾತಿಯ ಕಲ್ಲುಗಳಲ್ಲಿ ಕೆಲಸ ಮಾಡುವ ಇಂದಿನ ಕಲ್ಲು ವಡ್ಡರಂತೆ ಇರುವ ಜನರು, ಮಣಿ ಮಾಡುವವರು, ಚಾಪೆ ಹೆಣೆಯುವವರು, ಮಡಕೆ ಪಾತ್ರೆಗಳನ್ನು ಮಾಡುವವರು, ಕಬ್ಬಿಣ ಅದಿರಿನ ನಿಕ್ಷೇಪಗಳ ನೆಲೆಗಳನ್ನು ಶೋಧಿಸಿ ಅದಿರನ್ನು ಸಂಗ್ರಹಿಸಿ ಕರಗಿಸಿ ಕಬ್ಬಿಣ ಲೋಹ ತಯಾರು ಮಾಡುವ ಕುಮ್ಮಾರಿಕೆ ಕಂಡುಬಂದಿವೆ.

೭. ಗುಲಬರ್ಗಾ ಜಿಲ್ಲೆ ಚಿತ್ತಾಪುರ ತಾಲೂಕಿನಲ್ಲಿರುವ ಸನ್ನತಿ ಬೌದ್ಧ ನಿವೇಶನದಲ್ಲಿ ಅಶೋಕನ ಪ್ರತ್ಯೇಕ ಶಿಲಾಶಾಸನಗಳು ದೊರೆತಿರುವ ಹಿನ್ನೆಲೆಯಲ್ಲಿ, ಸನ್ನತಿಯನ್ನೇ ಸುವರ್ಣಗಿರಿಯೆಂದು ಗುರುತಿಸಬಹುದೆಂದು ಅಭಿಪ್ರಾಯವೂ ಇದೆ. ಸನ್ನತಿ ಕನ್ನಡದಲ್ಲಿ 'ಸಣ್ಣಚ್ಚಿ' ಎಂದಾಗಿದೆ; ಸ್ವರ್ಣಗಿರಿ ಅಥವಾ ಸ್ವರ್ಣಾದ್ರಿ ಕಾಲಕ್ರಮೇಣ ಆಡುನುಡಿಯಲ್ಲಿ ಸನ್ನತಿಯಾಗಿರಬಹುದಾದ ಸಂಭವನೀಯತೆ ಹೆಚ್ಚಾಗಿದೆಯಂತಲೂ ಹೇಳಲಾಗಿದೆ. ಹೆಚ್.ಎಸ್. ಥೋಸಾರ್ ಸಮರ್ಥಿಸುವಂತೆ ಧ್ವನಿ ಶಾಸ್ತ್ರದನ್ವಯ ಶಿಷ್ಟರೂಪ ಸನ್ನತಿ ಇದರ ಆಡುರೂಪ 'ಸೊನ್ನತಿ'

ಇದು ಸುವರ್ಣಗಿರಿ ಎಂಬುದರಿಂದಲೇ ನಿಷ್ಪನ್ನಗೊಂಡುದೆಂಬುದು ಸ್ಪಷ್ಟ. ಮೌರ್ಯರ ಅವಧಿಯಲ್ಲಿ ಸುವರ್ಣಗಿರಿ ಎಂದಿದ್ದ ಈ ಸ್ಥಳನಾಮದ ಅಂತ್ಯ ಪ್ರತ್ಯಯ 'ಗಿರಿ' ಎಂಬುದು ಕಾಲಕ್ರಮದಲ್ಲಿ 'ವತಿ' ಎಂದು ಬದಲಾಯಿತು.

೮. ನಾಸಿಕರ ಒಂದು ಶಾಸನದಲ್ಲಿ 'ಕೋಲಿಕ ನಿಕಾಯ' ಅಥವಾ ಶ್ರೇಣಿಯ (ನೇಕಾರರ ಸಂಘ) ಉಲ್ಲೇಖವಿದೆ. ಅದೇ ಸ್ಥಳದ ಇನ್ನೊಂದು ಶೀಲಾ ಲೇಖನದಲ್ಲಿ 'ಕುಲಕಾರಿಕ ಶ್ರೇಣಿ' (ಕುಂಬಾರರ ಸಂಘ) ಎಂಬ ಮಾತಿದೆ. ಜುನ್ನಾರಿನ ಒಂದು ದಾಖಲೆಯಲ್ಲಿ 'ಧನ್ನಿಕ ಶ್ರೇಣಿ' (ಧಾನ್ಯ ವರ್ತಕರ ಸಂಘ)ಯ ಪ್ರಸ್ತಾಪವಿದೆ. ಹಾಗೆಯೇ 'ಕಾಸಕಾರ ಶ್ರೇಣಿ' (ಕಂಚುಕಾರರ ಸಂಘ), ವಸಾಕರ ಶ್ರೇಣಿ (ಬಿದಿರಿನ ಕೆಲಸಗಾರರ ಸಂಘ)ಗಳಲ್ಲಿ ಮತ್ತೊಂದು ದಾಖಲೆಯಲ್ಲಿ ಪ್ರಸ್ತಾಪವಿದೆ.

೯. ಚಾಳುಕ್ಯ ಅಥವಾ ಚಾಲುಕ್ಯ ಎಂಬ ಶಬ್ಧರೂಪಕ್ಕೆ ಸಂಬಂಧಿಸಿದ ಕೆಲವು ಪ್ರಾಚೀನ ಶಾಸನ ಪ್ರಯೋಗಗಳು.

* ಚಲ್ಕ್ಯ:ಬಾದಾಮಿ ಶಾಸನ ಕ್ರಿ.ಶ. ೫೭೮.
* ಚಳಿಕ್ಯ:ಮಹಾಕೂಟ ಸ್ತಂಭ ಶಾಸನ ಕ್ರಿ.ಶ. ೬೦೨.
* ಚಲಿಕ್ಯ:ಮಂಗಳೇಶನ ಶಾಸನ:ಕ್ರಿ.ಶ. ೭ನೇ ಶತಮಾನ
* ಚಲುಕ್ಯ:ಪುಲಕೇಶಿ–II ಐಹೊಳೆಯ ಶಾಸನ ಕ್ರಿ.ಶ. ೬೩೪.
* ಚಳುಕಿ:SIL XVIII. ೨೭ ಅತೇದಿ
* ಸಳುಕಿ:SII, XI-i, ೧೪ ಕ್ರಿ.ಶ. ೮೭೨.



೧೦. ರಾಷ್ಟ್ರಕೂಟರ ಆಡಳಿತದ ಬಗೆಗೆ ಗುಲಬರ್ಗಾ ಜಿಲ್ಲೆಯಲ್ಲಿ ರಾಷ್ಟ್ರಕೂಟ ವಂಶದ ಮುಮ್ಮಡಿ ಕೃಷ್ಣಕಾಲದ ಮೂರು ಶಾಸನಗಳು ಮಾತ್ರ ಕಾಣಸಿಗುತ್ತವೆ. ಶಹಾಪುರ ತಾಲೂಕಿನ ಸಿರಿವಾಳದಲ್ಲಿ ದೊರೆತಿರುವ ೯೩೯ರ ಅಕಾಲ ವರ್ಷ ಮುಮ್ಮಡಿ ಕೃಷ್ಣನ ಶಾಸನದಲ್ಲಿ ಸಗರನಾಡಿನ ಉಲ್ಲೇಖವಿದೆ. ಜೇವರ್ಗಿ ತಾಲೂಕಿನ ಆಂದೋಲಾದಲ್ಲಿರುವ ೯೫೮ರ ಶಾಸನದಲ್ಲಿ ಕನ್ನರದೇವ ಆಕಾಲ ವರ್ಷನು (ಕೃಷ್ಣನು) ನವಖಂಡ ಪೃಥ್ವಿಯನ್ನು ಆಳುತ್ತಿದ್ದನೆಂಬ ಉಲ್ಲೇಖವಿದೆ. ಮುಮ್ಮಡಿಕೃಷ್ಣನು ೯೫೪ ಮೂರನೆಯ ಶಾಸನವು ಚಿಂಚೋಳಿ ತಾಲೂಕಿನ ನಿಡುಗುಂದದಲ್ಲಿ ದೊರೆತಿದ್ದು ಅಸ್ಪಷ್ಟವಾಗಿದೆ.

೧೧. ರಾಷ್ಟ್ರಕೂಟರ ವಿಶಿಷ್ಟ ಸಂಸ್ಕೃತಿ ಕೇಂದ್ರವಾದ ಎಲ್ಲೋರದಲ್ಲಿರುವ ಬೌದ್ಧಗುಹಾ ಚೈತ್ಯಾಲಯಗಳಲ್ಲಿ ಕೊನೆಯವಾದ 'ಲೇನ್‌ತಾಲ್' ಅಥವಾ 'ತ್ರಿಸ್ಥಲ' ಹಾಗೂ 'ವಿಶ್ವಕರ್ಮ' ಎಂಬ ಎರಡು ಚೈತ್ಯಗಳಿವೆ. ಈ ಎರಡು ಗುಹಾಚೈತ್ರಾಲಯಗಳಲ್ಲಿ ಅಜಂತಾ ಮತ್ತು

ಬಾಗ್ ಎಂಬಲ್ಲಿರುವ ಗುಹಾಲಯಗಳಿಗೂ ವಿನ್ಯಾಸ ಹಾಗೂ ರಚನೆಯಲ್ಲಿ ಹೆಚ್ಚಾದ ಹೋಲಿಕೆಯಿದೆ.

೧೨. ಮಹಾದೇವನ ಪ್ರಸಿದ್ಧ ಮಂತ್ರಿಯಾದ ಹೇಮಾದ್ರಿಯ ವತ್ಸಗೋತ್ರದ ಬ್ರಾಹ್ಮಣ, ಹೇಮಾದ್ರಿಯ ಜನಪ್ರಿಯ ಹೆಸರು ಹೇಮಪಂತ, ಇವನು ಹಲವಾರು ದೇವಾಲಯಗಳನ್ನು ವಿಶಿಷ್ಟ ಶೈಲಿಯಲ್ಲಿ ಕಟ್ಟಿಸಿದ್ದನೆಂದು ಹೇಳಲಾಗಿದೆ. ಇವನ ಶಿಲ್ಪದ ರೀತಿಗೆ 'ಹೇಮದ ಪಂಥ' ಎಂದು ಹೆಸರಾಗಿದೆ.

೧೩. ದಖ್ಖನ್ನಿನಲ್ಲಿ

೧) ಇಮದ್ ಶಾಹಿ ವಂಶದ ಆಶ್ರಯದಲ್ಲಿ ಬೇರಾರ್

೨) ನೈಜಾಮ್ ಶಾಹಿ ವಂಶದ ಆಶ್ರಯದಲ್ಲಿ ಅಹಮ್ಮದ್‌ನಗರ

೩) ಆದಿಲ್ ಶಾಹಿ ವಂಶದ ಆಶ್ರಯದಲ್ಲಿ ವಿಜಾಪುರ

೪) ಕುತುಬ್ ಶಾಹಿ ವಂಶದ ಆಶ್ರಯದಲ್ಲಿ ಗೋಲ್ಕೊಂಡ ಮತ್ತು

೫) ಖರೀದ್ ಶಾಹಿ ಆಶ್ರಯದಲ್ಲಿ ಬೀದರ್ ಸ್ವಾತಂತ್ರವಾಗಿ ರಾಜ್ಯಸ್ಥಾಪನೆ ಆದವು.

೧೪. ಒಂದೊಂದು ಗಡ್ಡಿಯ ಭೂ-ವಿಸ್ತಾರವೂ ಎರಡೂ-ಮೂರು ಮೈಲಿನಷ್ಟಿರುವುದು ಈ ಗಡ್ಡೆಗಳ ಹೆಸರುಗಳು, ನೀರದೇವರ ಗಡ್ಡಿ, ದೇವರಗಡ್ಡಿ, ಜಂಗಿನಗಡ್ಡಿ, ಮೇಲಿನಗಡ್ಡಿ, ನೀಲಕಂಠರಾಯನಗಡ್ಡಿ, ಬೆಣಚಿನಗಡ್ಡಿ, ಇವೆಲ್ಲಾ ಗಡ್ಡಿಗಳೂ ಜಕ್ಕಪ್ಪ ದೇಸಾಯಿಯ ಅಧೀನಕ್ಕೊಳಪಟ್ಟಿದ್ದವು.

## ಅಧ್ಯಾಯ ಮೂರು

# ನಿಜಾಮನ ಕಾಲಕ್ಕೆ ಸಂಬಂಧಿಸಿದ ಕೃತಿಗಳು

೩.೧. ನಿಜಾಮ ಕಾಲದ ಚರಿತ್ರೆ

೩.೨. ಗುಲಬರ್ಗಾ ಜಿಲ್ಲೆ ವಿಮೋಚನಾ ಚಳವಳಿ

೩.೨.೧. ರಾಷ್ಟ್ರೀಯ ಮಟ್ಟದ ಹೋರಾಟ

೩.೨.೨. ಸ್ಥಳೀಯ ಮಟ್ಟದ ಹೋರಾಟ

## ಅಧ್ಯಾಯ ೩

# ನಿಜಾಮನ ಕಾಲಕ್ಕೆ ಸಂಬಂಧಿಸಿದ ಕೃತಿಗಳು

ವಸಾಹತುಕಾಲೀನ ಸಂದರ್ಭದಲ್ಲಿ ಭಾರತ ಸ್ಥೂಲವಾಗಿ ಎರಡು ರೀತಿಯ ಆಡಳಿತಕ್ಕೆ ಒಳಪಟ್ಟಿತ್ತು. ಬ್ರಿಟಿಷರ ನೇರ ಆಳ್ವಿಕೆಗೆ ಒಳಪಟ್ಟಿದ್ದರೆ ಇನ್ನುಳಿದ ಭಾಗಗಳು ದೇಶಿ ರಾಜರುಗಳ ಸಂಸ್ಥಾನಗಳ ನಡುವೆ ಹಂಚಿ ಹೋಗಿ ಅರಸೊತ್ತಿಗೆಯಲ್ಲಿತ್ತು. ಈ ದೇಶಿಯ ಸಂಸ್ಥಾನಗಳಲ್ಲಿ ಒಂದಾದ ಹೈದರಾಬಾದ್ ಸಂಸ್ಥಾನವು ವಿಸ್ತೀರ್ಣದಲ್ಲಿ ಎಲ್ಲಾ ಸಂಸ್ಥಾನಗಳಿಗಿಂತಲೂ ದೊಡ್ಡದು. ಈ ಸಂಸ್ಥಾನ ನಿಜಾಮನ ಆಳ್ವಿಕೆಗೆ ಒಳಪಟ್ಟಿದ್ದು. ಕರ್ನಾಟಕದ ಗುಲಬರ್ಗಾ, ಬೀದರ, ರಾಯಚೂರು, ಪ್ರದೇಶಗಳು ಇವನ ಅಧೀನದಲ್ಲಿದ್ದವು. ನಿಜಾಮನ ಆಳ್ವಿಕೆಯ ಸಂದರ್ಭದಲ್ಲಿ ಕರ್ನಾಟಕದ ಇತರ ಪ್ರದೇಶಗಳಾದ ಹಳೆ ಮೈಸೂರು, ಮುಂಬೈ ಪ್ರಾಂತಗಳಿಗೆ ಹೋಲಿಸಿದಾಗ ಐತಿಹಾಸಿಕ ಭಿನ್ನತೆಯನ್ನು ಕಾಣುತ್ತೇವೆ. ಈ ಭಿನ್ನತೆಯನ್ನು ಅವಲೋಕಿಸಲು ನಿಜಾಮನ ಕಾಲದ ಕೃತಿಗಳ ಅವಲೋಕನ ಅಧ್ಯಾಯವನ್ನು ಎರಡು ಹಂತವಾಗಿ ವಿಂಗಡಿಸಲಾಗಿದೆ. ಪ್ರಥಮ ಹಂತದಲ್ಲಿ ನಿಜಾಮ ಕಾಲದ ಚರಿತ್ರೆ, ಇದರಲ್ಲಿ ನಿಜಾಮನ ಆಳ್ವಿಕೆ, ವಿಮೋಚನೆಗಾಗಿ ನಡೆಸಿದಂತಹ ಹೋರಾಟಗಳ ಬಗ್ಗೆ ವಿವರಣೆಯನ್ನು ಕೊಡಲಾಗಿದೆ. ದ್ವಿತೀಯ ಹಂತದಲ್ಲಿ ಸ್ವಾತಂತ್ರ್ಯ ಹೋರಾಟದ ಚರಿತ್ರೆ ಇದರಲ್ಲಿ ಚಳವಳಿಗಳು, ಸತ್ಯಾಗ್ರಹಗಳು ಮುಂತಾದ ಹೋರಾಟಗಳ ಬಗ್ಗೆ ವಿವರಿಸಲಾಗಿದೆ. ಈ ರೀತಿಯಾಗಿ ವಿಂಗಡಿಸಿಕೊಳ್ಳುವುದರ ಮುಖಾಂತರ ಚರಿತ್ರೆ ರಚನೆಯ ಬಗ್ಗೆ ಸೈದ್ಧಾಂತಿಕವಾಗಿ ಅಭ್ಯಾಸಿಸಲಾಗಿದೆ.

ಕರ್ನಾಟಕದ ಇತಿಹಾಸದಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶವು ಸಾಂಸ್ಕೃತಿಕ ಹಾಗೂ ರಾಜಕೀಯ ದೃಷ್ಟಿಯಿಂದ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ಶರಣರ, ದಾಸರ, ಜೈನರ ಹಾಗೂ ಸೂಫಿಗಳ ಪ್ರಭಾವ ಇಲ್ಲಿಯ ಸಂಸ್ಕೃತಿ ಮೇಲಾಗಿರುವುದು ವಿಶೇಷವಾಗಿದೆ. ರಾಜಕೀಯ ದೃಷ್ಟಿಯಿಂದ ಮಧ್ಯಕಾಲದಲ್ಲಿ ಮೊಗಲರು, ಬಹಮನಿ ಸುಲ್ತಾನರು, ಹಾಗೂ ನವಾಬರ

ಆಡಳಿತಕ್ಕೆ ಒಳಗಾಗಿದ್ದು, ಸ್ವಾತಂತ್ರ್ಯ ನಂತರ ಹೈದರಾಬಾದ್ ನವಾಬನು/ನಿಜಾಮರು ಸ್ವತಂತ್ರ ಪಡೆದಿರುವುದು ಗಮನಿಸುವಂತಹ ಐತಿಹಾಸಿಕ ಘಟನೆಯಾಗಿದೆ. ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ, ನಾಡಿನ ಏಕೀಕರಣಕ್ಕಾಗಿ, ಹಾಗೂ ಹೈದರಾಬಾದ್ ನಿಜಾಮನಿಂದ ಬಿಡುಗಡೆ ಹೊಂದುವುದಕ್ಕಾಗಿ ಗುಲಬರ್ಗಾ ಪ್ರದೇಶದಲ್ಲಿ ನಡೆದ ರಾಜಕೀಯ ಚಳವಳಿಗಳು ಇತಿಹಾಸದ ವಿಶಿಷ್ಟ ದಾಖಲೆಗಳೇ ಸರಿ.

ಗುಲಬರ್ಗಾ ಪ್ರದೇಶದಲ್ಲಿ ನಿಜಾಮನ ಕಾಲೀನ ಚರಿತ್ರೆಯನ್ನು ಅರ್ಥೈಸಿಕೊಳ್ಳಲು ಈ ಕೆಳಕಂಡ ಕೃತಿಗಳನ್ನು ಅವಲೋಕಿಸುವುದರ ಮೂಲಕ ಸೈದ್ಧಾಂತಿಕವಾಗಿ ಅಭ್ಯಾಸಿಸಲಾಗಿದೆ. ೧೯೯೨ರಲ್ಲಿ ಕನ್ನಡ ಪೀಠ, ಬನಾರಸ್ ಹಿಂದೂ ವಿಶ್ವವಿದ್ಯಾಲಯದಿಂದ ಪ್ರಕಟವಾದ ಡಿ.ಶಿವಾನಂದ ಅವರ ಹೈದರಾಬಾದ್ ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು ಎಂಬ ಕೃತಿಯು ಬೀದರ, ಗುಲಬರ್ಗಾ, ರಾಯಚೂರು ಜಿಲ್ಲೆಗಳ ಕನ್ನಡ ಶಾಸನಗಳ ಪಾಠಗಳನ್ನು ಒಳಗೊಂಡ ಸಂಕಲನ ಗ್ರಂಥವಾಗಿದೆ. ಸೂರ್ಯನಾಥ ಕಾಮತ್‌ರವರು ಅನುವಾದಿಸಿದ ಸ್ವಾಮಿ ರಮಾನಂದ ತೀರ್ಥ 'ಹೋರಾಟದ ನೆನಪುಗಳು' (೧೯೭೭), ಸೂರ್ಯನಾಥ ಕಾಮತ್‌ರವರು ಸಂಪಾದಿಸಿದ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' ೩ ಸಂಪುಟಗಳು (೧೯೮೦), ಎಂ.ಬಿ.ಪಾಟೀಲ ಅವರು ಸಂಪಾದಿಸಿದ 'ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್' (೧೯೯೭), ಬಿ.ಸಿ. ಮಹಾಬಲೇಶ್ವರಪ್ಪರವರ 'ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳವಳಿಗಳು' (೧೯೯೭), ಎಚ್.ಎಸ್.ಪಾಟೀಲ ಸಂಪಾದಿಸಿದ 'ವಿಮೋಚನೆ' (೧೯೯೯), ಗೋಪಾಲರಾವ್ ಹೇಜೀಬ್‌ರವರ 'ಹೈದರಾಬಾದ್ ಮುಕ್ತಿ ಸಂಘರ್ಷ' (೨೦೦೧), ಬಸವರಾಜ ಪೋಲಿಸ್ ಪಾಟೀಲ ಸಂಪಾದಿಸಿದ 'ಬಿಡುಗಡೆ' (೨೦೦೨), ಅಮರೇಶ ನುಗಡೋಣಿ ಅವರ 'ಹೈದರಾಬಾದ್ ಕರ್ನಾಟಕ ಹಾಡುಪಾಡು' (೨೦೦೩), ರಂಗರಾವ್ ಅವರುಅನುವಾದಿಸಿದ 'ಒಂದು ಯುಗದ ಅಂತ್ಯ' (೨೦೦೭) ಮುಂತಾದ ಕೃತಿಗಳನ್ನು ಅವಲೋಕಿಸುವುದರ ಮುಖಾಂತರ ಸೈದ್ಧಾಂತಿಕವಾಗಿ ಅಧ್ಯಯನ ಮಾಡಲಾಗಿದೆ.

ಗುಲಬರ್ಗಾ ಪ್ರದೇಶಕ್ಕೆ ಸಂಬಂಧಪಟ್ಟಂತೆ ಪಿಎಚ್.ಡಿ ಪ್ರಬಂಧ ಮತ್ತು ಎಂ.ಫಿಲ್ ನಿಬಂಧಗಳಾದ ಎಂ.ರಾಜ ಅವರ 'ಫ್ರೀಡಮ್ ಫೈಟರ್ಸ್ ಗುಲಬರ್ಗಾ ಡಿಸ್ಟ್ರೀಕ್ಟ್' (೨೦೦೬), ಮಂಜುಳಾ ಬಿ. ಚಿಂಚೋಳಿ ಅವರ 'ಡಿಪ್ರೇಸ್ಡ್ ಕ್ಲಾಸೇಸ್ ಇನ್ ಹೈದರಾಬಾದ್ ಕರ್ನಾಟಕ ಏರಿಯಾ ಅಂಡರ್ ದಿ ನಿಜಾಮ್ಸ್ ಡೈಮೇನ್‌ಷನ್' (೧೯೮೯), 'ಫ್ರೀಡಮ್ ಮೂವಮೆಂಟ್ಸ್ ಇನ್ ಹೈದರಾಬಾದ್ ಕರ್ನಾಟಕ ಏರಿಯಾ' (೧೯೯೨), ಹೈದರಾಬಾದ್ ಕರ್ನಾಟಕ ವಿಮೋಚನಾ ಹೋರಾಟದ ಹಿನ್ನೆಲೆಯಲ್ಲಿ (೨೦೦೬), ಜಗದೇವಿ ಎಂ. ಗಾಯಕ್ವಾಡ್ ಅವರ 'ಹೈದ್ರಾಬಾದ್ ಕರ್ನಾಟಕ ವಿಮೋಚನೆ ಮತ್ತು ಕನ್ನಡ ಸಾಹಿತ್ಯ' (೨೦೦೫), ಸುಭಾಷಚಂದ್ರ ದೊಡ್ಡಮನಿ

ಅವರ 'ಹೈದ್ರಬಾದ್ ವಿಮೋಚನೆ ಅಂದೋಲನದಲ್ಲಿ ಕಲಬುರ್ಗಿ ಜಿಲ್ಲೆ ಶಿಬಿರಗಳ ಪಾತ್ರ' (೨೦೦೨), ಶುಭಾ ಅವರ 'ಸುರಪುರ:ವಿಮೋಚನಾ ಹೋರಾಟ' ಮುಂತಾದ ಸಂಶೋಧನೆಗಳನ್ನು ಸಹ ಗಮನಿಸಲಾಗಿದೆ.

ತೃತೀಯ ಅಧ್ಯಾಯಕ್ಕೆ ಸಂಬಂಧಪಟ್ಟಂತೆ ನಿಜಾಮ ಕಾಲದ ಚರಿತ್ರೆಯನ್ನು ಅರ್ಥೈಸಿಕೊಳ್ಳಲು ಹೈದರಾಬಾದ್ ಕರ್ನಾಟಕದಲ್ಲಿ ನಿಜಾಮನ (ಆಡಳಿತ) ಆಳ್ವಿಕೆ, ಇಥೆಹಾದ್ ಮುಸಲ್ಮಾನ್ ಮತ್ತು ಖಾಸಿಂ ರಜವಿ, ದೀನ್‌ದಾರ್ ಅಂಜುಮಾನ, ಚೆನ್ನಬಸವೇಶ್ವರ ಕಿಬಲಿ ಪಂಥ, ಗುಲಬರ್ಗಾ ಜಿಲ್ಲೆಯಲ್ಲಿ ಹೈದರಾಬಾದ್ ವಿಮೋಚನಾ ಚಳವಳಿ, ಆರ್ಯ ಸಮಾಜ ಮತ್ತು ಒಕ್ಕೂಟ ಸೇರಿ ಚಳವಳಿ. ಈ ರೀತಿಯಾಗಿ ವಿಭಾಗಿಸಿಕೊಳ್ಳುವುದರ ಮುಖಾಂತರ ಅಧ್ಯಯನ ಕೈಗೊಳ್ಳಲಾಗಿದೆ.

**ಹೈದರಾಬಾದ್ ಕರ್ನಾಟಕದಲ್ಲಿ ನಿಜಾಮನ (ಆಡಳಿತ) ಆಳ್ವಿಕೆ.**

ವಸಾಹತು ಭಾರತ ಸ್ಥೂಲವಾಗಿ ಎರಡು ರೀತಿಯ ಆಳ್ವಿಕೆ ಅಥವಾ ಆಡಳಿತಕ್ಕೆ ಒಳಪಟ್ಟಿತ್ತು. ಶೇ.೬೦ಕ್ಕೂ ಹೆಚ್ಚಿನ ಪ್ರದೇಶಗಳು ಬ್ರಿಟಿಷರ ನೇರ ಆಡಳಿತಕ್ಕೆ ಒಳಪಟ್ಟಿದ್ದರೆ, ಮಿಕ್ಕ ಭಾಗ ದೇಶಿಯ ರಾಜರುಗಳ ಅಥವಾ ಸಂಸ್ಥಾನಗಳ ನಡುವೆ ಹಂಚಿಹೋಗಿತ್ತು. ಈ ಸಂಸ್ಥಾನಗಳ ಸಂಖ್ಯೆ ೫೬೫ ಅವುಗಳಲ್ಲಿಯೇ ಹೈದರಾಬಾದ್ ಸಂಸ್ಥಾನವು ಅತಿ ದೊಡ್ಡದು ಈ ಪ್ರಾಂತವು ೮೨೦೦೦ ಚದರ್ ಮೈಲಿಗಳ ವಿಸ್ತೀರ್ಣ ಹೊಂದಿದ್ದು ೧ ಕೋಟಿ ೬೦ ಲಕ್ಷ ಜನಸಂಖ್ಯೆಯನ್ನು ಹೊಂದಿದ್ದು ೮೦ರಷ್ಟು ಹಿಂದೂಗಳು ವಾಸಿಸುವ ಸಂಸ್ಥಾನವಾಗಿತ್ತು. ಗುಲಬರ್ಗಾ, ಬೀದರ, ರಾಯಚೂರಿನ ಪ್ರದೇಶವು ನಿಜಾಮನ ಆಳ್ವಿಕೆ ಒಳಪಟ್ಟಿದ್ದು ೨೦ ಲಕ್ಷ ಜನಸಂಖ್ಯೆಯಲ್ಲಿ ಹಿಂದೂಗಳೇ ಹೆಚ್ಚಾಗಿದ್ದು ಕನ್ನಡ ಭಾಷೆಯನ್ನು ಮಾತನಾಡುವ ಜನರು ಬಹಳಷ್ಟಿದ್ದು ಗುಲಬರ್ಗಾ ಜಿಲ್ಲೆಯಲ್ಲಿಯೇ ೬,೦೪,೮೦೯ ಕನ್ನಡಿಗರು ೨,೩೯,೭೬೯ ತೆಲಗರು ಕೂಡಿದ್ದರು ನುಗಡೋಣಿ (೨೦೦೩:೪೭), ಪಾಟೀಲ (೨೦೦೨:೧೦೯), ಭಾಸ್ಕರ (೨೦೦೫-೨೫೬) ಕೃತಿಗಳಲ್ಲಿ ತಿಳಿಸಿದ್ದಾರೆ.

ನಿಜಾಮ ಸಂಸ್ಥಾನದ ಸ್ಥಾಪಕ 'ಮಿರ್ ಕಮುರುದ್ದೀನ್ ಬಿನ್ ಕಿಲೀಚ್‌ಖಾನ' ಈತನ ತಂದೆ ಗಾಜಿಯೋದ್ದೀನ್ ಖಾನ್ ಮೊಗಲ ಚಕ್ರವರ್ತಿ ಔರಂಗಜೇಬನ ಸೇನಾಧಿಪತಿಯಾಗಿದ್ದ, ಗಾಜಿಯೋದ್ದೀನ್‌ನ ವಂಶಾವಳಿಯನ್ನು ಶೋಧಿಸಿದಾಗ ಆತನ ಮೊದಲನೇ ಖಲೀಫ್ ಅಬುಬಕ್ ವಂಶಕ್ಕೆ ಸೇರಿದವನೆಂದು ಔರಂಗಜೇಬನ ಮರಣಾನಂತರ ೬ ವರ್ಷಗಳ ತರುವಾಯ ಅಂದರೆ, ಕ್ರಿ.ಶ.೧೭೧೩ರಲ್ಲಿ ಮೊಗಲ ಸಾಮ್ರಾಟನು ಫಾರೊಕ್‌ಶಯರ್ ಮಿರ್ ಕಮುರುದ್ದೀನನ್ನು ದಕ್ಷಿಣ ಸುಬೇದಾರನನ್ನಾಗಿ ಮಾಡಿದ. ಮಹಮ್ಮದ ಶಾಹ ಈತನಿಗೆ ಅಸಫ್ ಜಹಾ ಎಂಬ ಬಿರುದನ್ನು ಸೇರಿಸಿದ್ದರಿಂದ ನಿಜಾಮ ವಂಶಸ್ಥರು ಇಂದಿಗೂ ಅಸಫ್ ಜಹಾ ಎಂಬ ಬಿರುದಿನಿಂದಲೇ

ಗುರುತಿಸಲ್ಪಡುತ್ತಾರೆ. ಕ್ರಿ.ಶ.೧೭೨೪ರಲ್ಲಿ ಶಿಖಾರ ಖೇಡ್ ಎಂಬ ಯುದ್ಧದಲ್ಲಿ ಮುಖೇಜ್‌ಖಾನನ್ನು ಸೋಲಿಸಿ ನಿಜಾಮನು ಸ್ವತಂತ್ರ ಹೈದರಾಬಾದ್ ಸಂಸ್ಥಾನವನ್ನು ಸ್ಥಾಪಿಸಿದನು ಚಂದ್ರಶೇಖರ್ (೨೦೦೨:೭೧) ತಮ್ಮ ಕೃತಿಯಲ್ಲಿ ಸ್ಥಾಪನೆ ಮೂಲದ ಬಗ್ಗೆ ತಿಳಿಸಿದ್ದಾರೆ. ಇದೇ ಅಭಿಪ್ರಾಯವನ್ನು ಹೇಜೀಬ ಅವರು (೨೦೦೭:೭), ಮಹಾಬಲೇಶ್ವರಪ್ಪ ಅವರು (೨೦೦೮:೧೨), ತಮ್ಮ ಕೃತಿಯಲ್ಲಿ ಇದೇ ರೀತಿಯ ನಿಲುವನ್ನು ವ್ಯಕ್ತಪಡಿಸಿದ್ದಾರೆ.

ಕ್ರಿ.ಶ. ೧೭೪೮ರಲ್ಲಿ ಮಿರ್ ಕಮುರುದ್ದೀನ್ ನಿಜಾಮ್-ಉಲ್-ಮುಲ್ಕನ ತರುವಾಯ ಸಿಂಹಾಸನಕ್ಕಾಗಿ ಆತನ ಮಕ್ಕಳಾದ ನಾಸಿರಜಂಗ್, ಮಗಳ ಮಗ ಮುಜಫರ್ ಜಂಗ್ ನಡುವೆ ಕಲಹ ಪ್ರಾರಂಭವಾಯಿತು. ಅಧಿಕಾರಕ್ಕಾಗಿ ನಡೆದ ಈ ಕಚ್ಚಾಟ ಬ್ರಿಟಿಷರು ಮತ್ತು ಫ್ರೆಂಚರು ಒಂದೊಂದು ಪಕ್ಷವನ್ನು ಸಮರ್ಥಿಸುತ್ತ ತಮ್ಮ ರಾಜಕೀಯ ಪ್ರಭಾವ ವಿಸ್ತರಣೆಗೆ ಹೊಂಚು ಹಾಕುತ್ತಿದ್ದರು. ಕೊನೆಗೆ ಬ್ರಿಟಿಷರ ಪ್ರಭಾವವನ್ನು ಹೊಂದಿದ್ದ ನಿಜಾಮನ ಆಳ್ವಿಕೆಯನ್ನು ಆರಂಭವಾಯಿತ್ತು. ನಿಜಾಮನು ಬ್ರಿಟಿಷರಿಗೆ ಮಹಾಯುದ್ಧಗಳಲ್ಲಿ ಸಹಾಯ ಮಾಡಿದ್ದರಿಂದ ಇದಕ್ಕೆ ಪ್ರತಿಯಾಗಿ ಹೀಟ್ ಎಕ್ಸಾಲ್ಟೆಡ್ ಹೈನಸ್ ಹಾಗೂ ಫೇತ್‌ಫುಲ್ ಆಲೈಆಫ್ ದಿ ಬ್ರಿಟಿಷ್ ಗವರ್ನಮೆಂಟ್ ಎಂಬ ಬಿರುದನ್ನು ನೀಡಿ ಗೌರವಿಸಿತ್ತು. ನಿಜಾಮನಿಗೆ ಅನೇಕ ಸವಲತ್ತು/ಸೌಲಭ್ಯಗಳನ್ನು ನೀಡಿತ್ತು. ಧ್ವಜ, ರಾಷ್ಟ್ರಗೀತೆ, ಸೈನ್ಯ ನಾಣ್ಯ, ಸಾರಿಗೆ, ರೈಲ್ವೆ ಅಂಚೆ, ಆಕಾಶವಾಣಿ, ಶಿಕ್ಷಣ ವ್ಯವಸ್ಥೆಯಲ್ಲಿ ಸ್ವತಂತ್ರ್ಯ ಹೊಂದಿತ್ತು. ಅದಕ್ಕೆ ಪ್ರತಿಯಾಗಿ ನಿಜಾಮರು ಸಹಾಯಕ ಸೈನ್ಯ ಪದ್ಧತಿಯನ್ನು ೧೮೦೦ರಲ್ಲಿ ವೆಲೆಸ್ಲಿಯ ಆದೇಶದ ಮೇಲೆಗೆ ಒಪ್ಪಿಕೊಂಡು. ಇವರ ಅಧೀನರಾಗಿ ಮತ್ತು ಇವರ ಸಲಹೆ ಮೇರೆಗೆ ಆಳ್ವಿಕೆಯನ್ನು ನಡೆಸಿದ್ದನ್ನು ನೋಡಬಹುದಾಗಿದೆ.[೧] ಮಹಾಬಲೇಶ್ವರಪ್ಪ (೨೦೦೮:೧೧), ಹೇಜೀಬ್ (೨೦೦೧:೭) ಕೃತಿಗಳಲ್ಲಿ ಪ್ರಸ್ತಾಪ ಮಾಡಿದ್ದಾರೆ.

ಹೈದರಾಬಾದ್ ಸಂಸ್ಥಾನದಲ್ಲಿ ಏಳು ಜನ ನಿಜಾಮರು ಆಡಳಿತ ನಡೆಸಿದ್ದು. ಅವರ ವಿವರ ಈ ರೀತಿಯಾಗಿದೆ.

೧ ಮಿರ್ ಖಮುರುದ್ದೀನ್ ಚಿನ್ ಖಲಿಜಿಖಾನ್ (೧೭೨೪-೧೭೪೮)

೨. ನವಾಬ್ ನಿಜಾಮ್ ಅಲಿಖಾನ್ (೧೭೬೧-೧೮೦೩)

೩. ನವಾನ್ ಸಿಕಂದರ್ ಬಹಾದ್ದೂರ್ (೧೮೦೪-೧೮೨೮)

೪. ನಸೀರು ದೌಲಾ ಬಹಾದ್ದೂರ್ (೧೮೨೯-೧೮೫೭)

೫. ಅಪಜಾಲುದೌಲಾ ಬಹಾದ್ದೂರ್ (೧೮೫೭-೧೮೬೯)

೬. ಮಿರ್ ಮೆಹಬೂಬ್ ಅಲಿಖಾನ್ ಬಹಾದ್ದೂರ್ (೧೮೬೯-೧೯೧೧)

೭. ನವಾಬ ಮಿರ್ ಉಸ್ಮಾನ್ ಅಲಿಖಾನ್ ಬಹಾದ್ದೂರ್ (೧೯೧೧-೧೯೪೮)

ಈ ನಿಜಾಮರು ಕ್ರಿ.ಶ. ೧೭೨೪ರಿಂದ ೧೯೪೮ ಸೆಪ್ಟಂಬರ್ ೧೩ರವರೆಗೆ ಆಡಳಿತ ನಡೆಸಿ ಸೈನಿಕ ಕಾರ್ಯಚರಣೆ ಮುಖಾಂತರ ಆಡಳಿತವನ್ನು ಕೊನೆಕಾಣಿತು. ನಿಜಾಮರು ಶೂರರಾಗಿರಲಿಲ್ಲ. ಅವರ ಇತಿಹಾಸವು ಪರಾಧೀನತೆಯ ಸೋಲಿನ ಹಾಗೂ ಅವಮಾನಕರ ಒಪ್ಪಂದಗಳ ಸರಮಾಲೆಯಾಗಿದೆ. ನೂರಾರು ಆಡಿಗಳ ಹೆಸರೊಂದು ಬಿಟ್ಟರೆ ಅವರಿಗೆ ಹೇಳಿಕೊಳ್ಳುವಂತಹ ಯಾವುದೇ ಅರ್ಹತೆಗಳಿರಲಿಲ್ಲ. ಅವರ ಹೆಸರಿನ ಕೊನೆಯಲ್ಲಿ ಬರುವ "ಜಂಗ್" ಶಬ್ದ ಕಿವಿಗೆ ಜೋರಾಗಿ ಅಪ್ಪಳಿಸಿದಂತಾಗುತ್ತದೆ. ಸಲಾಬತ್ ಜಂಗ್, ನಾಸಿರ್ ಜಂಗ್, ಬಸಲಾತ ಜಂಗ್ ಮುಜಫರ್ ಜಂಗ್, ಸಾಲಾರ್ ಜಂಗ್, ಈ ಹೆಸರಗಳಲ್ಲಿ ಸ್ಫೋಟಕ ಪದಾರ್ಥಗಳು ಅಡಕವಾಗಿವೆಯೋ ಎಂಬಂತೆ ಭಾಸವಾಗುತ್ತದೆ. ಏಳನೇ ನಿಜಾಮ ಉಸ್ಮಾನ್ ಅಲೀಖಾನನ ವರೆಗೂ ನಾನಾ ರೀತಿಯ ಜಂಗ್‌ಗಳಾಗಿ ಹೋದರು ಎಂದು ಹೇಜೀಬ್ (೨೦೦೧:೧೦) ತಮ್ಮ ಕೃತಿಯಲ್ಲಿ ವ್ಯಂಗ್ಯವಾಗಿ ಹೇಳಿದ್ದಾರೆ.

ನಿಜಾಮ ರಾಜ್ಯದಲ್ಲಿ ಜಹಗೀರು ಹಾಗೂ ಸರಂಜಾಮಿ ಪದ್ಧತಿಗಳು ಜಾರಿಯಲ್ಲಿದ್ದವು. ಅನೇಕ ಜಮೀನ್ದಾರರು ನಗರ ಪ್ರದೇಶಗಳಲ್ಲಿ ವಾಸಿಸುತ್ತಿದ್ದು ವರ್ಷಕ್ಕೊಮ್ಮೆ ಗ್ರಾಮಗಳಿಗೆ ಬಂದು ತಮ್ಮ 'ಲಾವಣಿ' ವಸೂಲು ಮಾಡಿಕೊಂಡು ಹೋಗುತ್ತಿದ್ದರು. ಬರಗಾಲವಿದ್ದರೂ ಬಲತ್ಕಾರವಾಗಿ ವಸೂಲಿ ಮಾಡುತ್ತಿದ್ದರು. ಬಡರೈತನು ಸಹ ಕಟ್ಟಬೇಕಾಗಿತ್ತು ಭೂ ಸುಧಾರಣಾ ಕಾಯ್ದೆಗಳ ಮೂಲಕ ರೈತರ ಸ್ಥಿತಿಗಳನ್ನು ಸುಧಾರಿಸುವುದು ನಿಜಾಮ ಆಡಳಿತದಲ್ಲಿ ಸಾಧ್ಯವೇ ಇರಲಿಲ್ಲ ಎಂದು ಹೇಜೀಬ್ (೨೦೦೧:೧೩) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

## ಇತ್ತೆಹಾದ್ ಮುಸಲ್ಮೀನ್ ಮತ್ತು ಖಾಸಿಂ ರಜವಿ

ಇತ್ತೆಹಾದ್ ಮುಸಲ್ಮೀನ್ ಎಂಬ ಸಂಘಟನೆಯು ಕ್ರಿಶ ೧೯೨೬ರ ಸುಮಾರಿಗೆ ಮಹಮ್ಮದ್ ನವಾಜ್ ಖಾನನೆಂಬ ನಿವೃತ್ತ ಅಧಿಕಾರಿಯಿಂದ ಸ್ಥಾಪಿಸಲಾಯಿತು.[೨] ಇದರ ಮುಖ್ಯ ಉದ್ದೇಶ ಹೈದರಾಬಾದ್ ಸಂಸ್ಥಾನದ ಎಲ್ಲಾ ಮುಸಲ್ಮಾನರ ಸಂಘಟಿಸಿ ನಿಜಾಮನನ ಬೆಂಬಲಿಸುವುದು ಮತ್ತು ದೊಡ್ಡ ಪ್ರಮಾಣದಲ್ಲಿ ಹಿಂದೂಗಳನ್ನು ಮತಾಂತರಿಸಿ ಬಹುಸಂಖ್ಯಾತ ಹಿಂದೂಗಳನ್ನು ಕುಗ್ಗಿಸುವುದಾಗಿತ್ತು ಮುಂದೆ ಬಹದ್ದೂರ ಯಾರ್ ಜಂಗನ ನಾಯಕತ್ವದಲ್ಲಿ ಇತ್ತೆಹಾದ್ ಬಲಿಷ್ಠ ಕೋಮುವಾದಿಯಾಗಿ ರೂಪುಗೊಂಡಿತು. ಮುಂದೆ ೧೯೪೬ರಲ್ಲಿ ಬಹದ್ದೂರ ಯಾರ್ ಜಂಗ್‌ನ ಉತ್ತರಾಧಿಕಾರಿಯಾಗಿ ಖಾಸಿಂ ರಜವಿ ಅಧಿಕಾರ ವಹಿಸಿಕೊಂಡಾಗಿನಿಂದ ಸಂಸ್ಥಾನದ ಅವನತಿ ಆರಂಭವಾಯಿತು. ಕ್ರಿ.ಶ. ೧೯೩೭ರಲ್ಲಿ ಕೇವಲ ೫೮ ಶಾಖೆಗಳು ಹೊಂದಿದ ಇತ್ತೆಹಾದ್

೧೯೪೪ರ ವೇಳೆಗೆ ೪೫೦ ಶಾಖೆಗಳು ಸ್ಥಾಪಿಸುವಲ್ಲಿ ಯಶಸ್ವಿಯಾಗಿತ್ತು ೧೯೪೭ರ ಸುಮಾರಿಗೆ ರಜವಿಯ ನೇತೃತ್ವದಲ್ಲಿ ಇತ್ತೆಹಾದ್ ಕೇಂದ್ರಗಳ ಸಂಖ್ಯೆ ೫೨ ಮೀರಿತ್ತು. ಪ್ರತಿ ಕೇಂದ್ರಕ್ಕೂ ೨೦೦ರಷ್ಟು ಶಸ್ತ್ರಾಸ್ತ್ರ ರಜಾಕಾರರು ಹೊಂದಿತ್ತು. ರಜಾಕರರು ರಜವಿಯ ನೇತೃತ್ವದಲ್ಲಿ ಪ್ರಭಾಶಾಲಿಯಾಗಿ ಬೆಳೆದರು. ಕೆಲವು ತಿಂಗಳಲ್ಲಿ ಅಂದರೆ ೧೯೪೮ ಜನವರಿ ೩೦ ಸಾವಿರ ರಜಾಕಾರರ ಸಂಖ್ಯೆಯು ಅದೇ ವರ್ಷ ೧೯೪೮ ಜುಲೈಯಲ್ಲಿ ೧ ಲಕ್ಷ ಅರೆ ಸೈನಿಕ ಶಕ್ತಿಶಾಲಿಯಾಗಿ ಬೆಳೆಯಿತು. ಮಹಾಬಲೇಶ್ವರಪ್ಪ (೨೦೦೮:೬೭), ಪಾಟೀಲ್ (೨೦೦೨:೭೪) ಪಾಟೀಲ (೧೯೯೯:೧೧೫), ಹೇಜೀಬ್ (೨೦೦೧:೩೪-೩೬) ಇವರೆಲ್ಲರು ಒಂದೇ ನಿಲುವನ್ನು ವ್ಯಕ್ತಪಡಿಸಿದ್ದಾರೆ.

ನಿಜಾಮನ ಸಂಸ್ಥಾನದಲ್ಲಿ ಅತ್ಯಂತ ಪ್ರಭಾವ ಹೊಂದಿದ ರಜಾಕಾರರು ಹಿಂದೂಗಳ ಮೇಲೆ ದಬ್ಬಾಳಿಕೆ ನಡೆಸಿದರು. ಚಿಂಚೋಳಿ, ಯಳಸಾಗಿ, ರಟ್ಕಲ್, ದೋಗಿಬಾನಾ, ಮಳ್ಳಿಗೋರ್ಟಾ ಪ್ರದೇಶದಲ್ಲಿ ರಜಾಕಾರರು ಮಹಿಳೆಯರ ಮಾನಭಂಗ, ಲೂಟಿ, ಕೊಲೆ ಮಾಡುವುದಲ್ಲದೆ ಸ್ವಾತಂತ್ರ್ಯ ಹೋರಾಟಗಾರರನ್ನೂ ಹಿಂಸಿಸಿ ಅವಮಾನಕರ ರೀತಿಯಲ್ಲಿ ಬೀದಿಗಳಲ್ಲಿ ಮೆರವಣಿಗೆ ಮಾಡಿದರು. ಹಿಂದೂಗಳು ಬಳಸುವ ನೀರಿನ ಬಾವಿಗಳಲ್ಲಿ ಸಗಣಿ ಮೂಳೆಗಳನ್ನು ಹಾಕುವುದು, ಬೆಳೆಗಳನ್ನು ಲೂಟಿ ಮಾಡುವುದು, ಸಂಪತನ್ನು ಕೊಳ್ಳೆ ಹೊಡೆಯಲು ಬೆಂಕಿ ಹಚ್ಚುವ ಕಾರ್ಯದಲ್ಲಿ ನಿರತಾಗಿದ್ದರು. ದೇವಾಲಯಗಳನ್ನೆಲ್ಲ ನೆಲಸಮಗೊಳಿಸುವ ಪ್ರಯತ್ನ ಮಾಡಿದರು ಹೋಂ ಧ್ವಜ, ಭಗವಾಧ್ವಜ, ರಾಷ್ಟ್ರಧ್ವಜ ಮತ್ತು ಗಾಂಧಿ ಟೋಪಿಗಳನ್ನು ಸುಟ್ಟು ಹಾಕಿದರು. ಈ ರೀತಿಯಾಗಿ ಹೈದರಾಬಾದ್ ಕರ್ನಾಟಕದಲ್ಲಿ ತಮ್ಮ ಪ್ರಭಾವವನ್ನು ಬೀರಿದರು. ಒಟ್ಟಾರೆಯಾಗಿ ಹೈದರಾಬಾದ್ ಕರ್ನಾಟಕದಲ್ಲಿ ೩೨೫ ಗ್ರಾಮಗಳಲ್ಲಿ ೫.೬ ಕೋಟಿ ಹಣ ೬೭ ಲಕ್ಷ ಬೆಲೆಬಾಳುವ ಸಾಮಾನುಗಳನ್ನು ರಜಾಕಾರರು ದೋಚಿದರು ೧೮೭ ಜನರನ್ನು ಕೊಲೆ ಮಾಡಿದರು ೧೧೨ ರೇಪ್ ಪ್ರಕರಣ ನಡೆದವು ಎಂದು ಮಹಾಬಲೇಶ್ವರಪ್ಪನವರು (೨೦೦೮:೬೭-೬೮), ಇದೇ ವಿಷಯವನ್ನು ಪಾಟೀಲ (೧೯೯೯-೧೧೮) ತಮ್ಮ ಕೃತಿಯಲ್ಲಿ ವ್ಯಕ್ತಪಡಿಸಿದ್ದಾರೆ.

ರಜಾಕಾರರ ನಾಯಕತ್ವ ಹೊಂದಿದ ಖಾಸಿಂ ರಜವಿಯು ಒಬ್ಬ ಉತ್ತಮ ಭಾಷಣಕಾರನಾಗಿದ್ದ. ಜನರಿಗೆ ರಜವಿಯ ಪ್ರಚೋದನಕಾರಿ ಭಾಷಣ ಮಾಡುವುದರ ಮುಖಾಂತರ ಜನರನ್ನು ತನ್ನಡೇಗೆ ಸೆಳೆದುಕೊಳ್ಳುವಂತಹ ಸಾಮರ್ಥ್ಯ ಹೊಂದಿದ್ದನು. ಧರ್ಮಾಂಧನಾದ ಇವನು ಭಾರತ ಒಕ್ಕೂಟದಿಂದ ಮುಸ್ಲಿಮರನ್ನೂ ವಿಮೋಚಿಸಲು ದೇವರಿಂದಲೇ ನಿಯುಕ್ತರಾಗಿರುವ ವ್ಯಕ್ತಿಯೆಂಬ ಪ್ರಬಲ ನಂಬಿಕೆ, ಧರ್ಮ ಯುದ್ಧದಲ್ಲಿ ನಿರಂತರಾಗಿದ್ದ ಮುಸ್ಲಿಮರನ್ನು ದೆಹಲಿಗೆ ಚಲಿಸಿ ಕೆಂಪು ಕೋಟೆಯ ಮೇಲೆ ಅಸಾಫಿಯಾ ಧ್ವಜ ಪುನರ್ ಸ್ಥಾಪಿಸಬೇಕು. ಬಂಗಾಳ ಕೊಲ್ಲಿಯಲ್ಲಿ ನೀರಿನ ಅಲೆಗಳು ಸಾರ್ವಭೌಮರ ಪಾದದ ಮೇಲೆ ಹರಿಯಬೇಕು ಎಂಬ

ನಿಲುವನ್ನು ಹೊಂದಿದನು. ಧರ್ಮ ನಂಬದ ಹಾಗೂ ಕಲ್ಲನ್ನು, ಕೋತಿಯನ್ನು, ಪೂಜಿಸುವ ಹಿಂದೂಗಳನ್ನು ಗುಲಾಮರನ್ನಾಗಿ ಮಾಡಿಕೊಳ್ಳುವ ಹಕ್ಕು ಮುಸ್ಲಿಮರಿಗೆ ಇರಬೇಕೆಂದು ಹೀಗೆ ಹಿಂದೂ ಧರ್ಮದ ಸಂಪ್ರಾದಾಯಗಳನ್ನು ತೆಗಳುತ್ತಾ ತಮ್ಮ ಶ್ರೇಷ್ಠತೆ ಹೇಳುತ್ತಾ ಹಿಂದೂಗಳನ್ನು ಮುಸಲ್ಮಾನರ ಅಡಿಯಾಳಾಗಿ ಮಾಡಿಕೊಳ್ಳುವ ನಿಲುವನ್ನು ಹೊಂದಿದನು. ಚನ್ನಬಸಪ್ಪ (೨೦೦೭:೭೪) ಈ ಕೃತಿಯಲ್ಲಿ ರಜವಿಯ ಬಗ್ಗೆ ವಿವರವಾದ ಮಾಹಿತಿಯನ್ನು ನೀಡಿದ್ದಾರೆ. ಇದೇ ವಿಷಯವನ್ನು ಪಾಟೀಲರು (೧೯೯೯:೧೧೪-೧೧೫), ಪಾಟೀಲ (೨೦೦೨:೮೦-೮೧) ತಮ್ಮ ಕೃತಿಯಲ್ಲಿ ಪುರಸ್ಕರಿಸಿದ್ದಾರೆ.

ಖಾಸಿಂ ರಜವಿಯ ತಮ್ಮ 'ತಯ್ಯಬ' ಬೂತಕೂರದ ಗಡ್ಡದ ಆಮೀನ್, ಸಿಕಂದರಾಬಾದದ ಮಹಮ್ಮದ್ ಹಾಜಿ ಎಂಬುವವರು ನಡುಮಧ್ಯಾಹ್ನದಲ್ಲಿ ಹಾಲು ಇಲ್ಲ ಎಂದು ಊರ ಗೌಡನು ಹೇಳಿದಾಗ ಉನ್ಮಾತ್ತರಾಗಿ 'ಎಮ್ಮೆ ಆಕಳು ಹಾಲು ಕೊಡದಿದ್ದರೆ ಇಲ್ಲ, ತಕ್ಷಣ ನಿಮ್ಮ ಹೆಂಡಂದಿರ ಮೊಲೆ ಹಾಲು ತೆಗೆದುಕೊಂಡು ಬನ್ನಿರಿ ನಮಗೆ ಚಹ ಕುಡಿಯಬೇಕಾಗಿದೆ' ಎಂದು ತುಚ್ಛವಾಗಿ ವರ್ತಿಸುತ್ತಿದ್ದರು ಎಂದು ಬಾಲಚಂದ್ರ ಜಯಶೆಟ್ಟಿ (೨೦೦೬:೫೯) ತಮ್ಮ ಕೃತಿಯಲ್ಲಿ ನಮೂದಿಸಿದ್ದಾರೆ. ಸುರಪುರ ರಜಾಕಾರರ ಚಟುವಟಿಕೆಗಳು ಕೇಂದ್ರವಾಗಿತ್ತು. ೧೯೪೭ರಲ್ಲಿಯೇ ಸುರಪುರದಲ್ಲಿ 'ಇಥ್ಥೆಹಾದ್ ಮುಸಲ್ಮಿನ್' ಸಂಸ್ಥೆಯ ಶಾಖೆ ಸ್ಥಾಪನೆಗೊಂಡಿತ್ತು. ಅದಕ್ಕೆ ಅನೇಕ ಜನ ಮುಸ್ಲಿಮ ಯುವಕರು ಮತ್ತು ಪ್ರಮುಖರು ಸದಸ್ಯರಾಗಿದ್ದರು. ಆಳಂದ ಆರ್ಯ ಸಮಾಜ ಯುವಕರನ್ನು ೧೯೪೮ರ ಆಗಸ್ಟ್ ೧೭ ರಂದು ೯ ಜನರನ್ನು ಹಗ್ಗದಿಂದ ಬಂದಿಸಿ ಕೊಲೆಮಾಡಿದರು. ೧೯೪೭ರಲ್ಲಿ ಯಾದಗಿರಿಯ ದಸರಾ ಮೆರವಣಿಗೆ ಮೇಲೆ ಹಲ್ಲೆ ಮಾಡಿ ಆರ್ಯ ಸಮಾಜದ ನಾಯಕ ಈಶ್ವರಲಾಲ್ ಭಟ್ಟದ ಮೇಲೆ ದಾಳಿ ಮಾಡುವ ಉದ್ಧೇಶ ಹೊಂದಿದ್ದರು. ಹಾಗೆಯೇ ಗುಲಬರ್ಗಾದ ಶರಣಬಸವೇಶ್ವರ ದೇವಾಲಯದ ಮೇಲೆ ದಾಳಿ ಮಾಡಿದರು. ಇದರಿಂದ ದೇವಾಲಯವು ಹಾನಿಗೆ ಒಳಗಾಯಿತು ಇದರಿಂದಾಗಿ ಕೋಮುವಾದ ಬೆಳೆಯಿತು. ಮಹಿಳೆಯರ ಮೇಲೆ ದೌರ್ಜನ್ಯ ನಡೆದವು.[೩] ಬಾಲಚಂದ್ರ ಜಯಶೆಟ್ಟಿ (೨೦೦೬:೬೫-೬೬), ಹೇಜೀಬ್ (೨೦೦೧:೭೧) ತಮ್ಮ ಕೃತಿಯಲ್ಲಿ ನಮೂದಿಸಿದ್ದಾರೆ.

## ದೀನ್‌ದಾರ ಅಂಜುಮಾನ ಚೆನ್ನಬಸವೇಶ್ವರ ಕಿಬಲಿ ಪಂಥ

ದೀನ್‌ದಾರ್ ಅಂಜುಮಾನ ಚೆನ್ನಬಸವೇಶ್ವರ ಕಿಬಲಿ ಈ ಪಂಥವನ್ನು ಹಜರತ್ ಮೌಲನಾ ಸಿದ್ದೀಕ್ ಎಂಬುವನು ಕ್ರಿ.ಶ ೧೯೨೪ರಲ್ಲಿ ಗುಲಬರ್ಗಾ ಜಿಲ್ಲೆಯ ಬೆಲ್ಲಂಪೇಟ್ ಎಂಬಲ್ಲಿ ಪ್ರಾರಂಭಿಸಿದ. ಹಜರತ್ ಮೌಲಾನಾ ಸಿದ್ದೀಕ್ ತನ್ನನ್ನು ವೀರಶೈವ ಲಿಂಗಾಯಿತ ಧರ್ಮದ ಮಹಾಪುರುಷ ಚನ್ನಬಸವೇಶ್ವರನ ಅವತಾರವೆಂದು ಹೇಳಿಕೊಂಡನು. ಹಜರತ್

ಮೌಲಾನ ಸಿದ್ದಿಕ್ ಹಿಂದೂಧರ್ಮ ಅದರಲ್ಲಿ ಲಿಂಗಾಯತ ಧರ್ಮ ಚೆನ್ನಾಗಿ ತಿಳಿದುಕೊಂಡಿದ್ದ, ಎಲ್ಲಾ ಧರ್ಮಗಳ ಸಾರ ಒಂದೇ ಎಂದು ಹೇಳುತ್ತಾ ಲಿಂಗಾಯತ ಧರ್ಮವು ಇಸ್ಲಾಮ್ ಧರ್ಮದ ಒಂದು ಭಾಗವೇ ಆಗಿದೆ ಹೊರತು ಬೇರೆಯೇನಲ್ಲ, 'ದೀನ್‌ದಾರ್' ಅಂಜುಮಾನ ಪಂಥದವರು ಶ್ಲೋಕಗಳನ್ನು ಉದ್ಧರಿಸುತ್ತಾರೆ. ಹಿಂದೂ ಧರ್ಮದಲ್ಲಿ ನಮಗೆ ಆಳವಾದ ಶ್ರದ್ಧೆಯಿದೆ. ಎಂದು ನಂಬಿಸಿದರು.[೪] ಸಿದ್ದೀಕ್‌ನಿಗೆ ನಾಲ್ಕು ಜನ ಶಿಷ್ಯಂದಿರಿದ್ದು ತಮ್ಮನ್ನು ವ್ಯಾಸ, ಶ್ರೀಕೃಷ್ಣ, ನರಸಿಂಹ, ವೀರಭದ್ರ ಅವತಾರವೆಂದು ಹೇಳಿಕೊಳ್ಳುತ್ತಿದ್ದರು. ಇದರ ಮುಖಾಂತರ ಬಡ ಹಿಂದೂಗಳನ್ನೂ ಮುಸಲ್ಮಾನರಾಗಿಸಲು ನಿಜಾಮ್ 'ದೀನ್‌ದಾರ್' ಸಂಘಟನೆಗೆ ನೈತಿಕ ಬೆಂಬಲ ಹಾಗೂ ಆರ್ಥಿಕ ಬೆಂಬಲ ಕೊಡುತ್ತಿದ್ದರು. ಇವರು 'ಅವಾನುಲ್ ನಾಸ್' ಎಂಬ ಗ್ರಂಥದ ಮೂಲಕ ತನ್ನ ಅನುಯಾಯಿಗಳಿಗೆ ಉದ್ರೇಕದ ಭೋಧನೆಯನ್ನು ಮಾಡುತ್ತಿದ್ದರು.[೫] ಸಿದ್ದೀಕ್ ಮತಾಂತರ ಚಟುವಟಿಕೆಗಳನ್ನು ಅತ್ಯಂತ ಬಿರುಸಾಗಿ ನಡೆಸಹತ್ತಿದ. ಅವನು ಹಿಂದೂ ದೇವಾಲಯಗಳ ವಿರುದ್ಧ ಜಿಹಾದ್ ಸಾರಿದ ಅದಕ್ಕಾಗಿ ೫ ಲಕ್ಷ ರೂಪಾಯಿಗಳ ನಿಧಿಯನ್ನು ಸಂಗ್ರಹಿಸಿ ಲಕ್ಷಾಂತರ ಸ್ವಯಂ ಸೇವಕ ಪಡೆಯನ್ನು ರಚಿಸುವುದು ಆತನ ಉದ್ದೇಶವಾಗಿತ್ತು ಎಂದು ಹೇಜೀಬ್ (೨೦೦೧:೪೨–೪೩) ತಮ್ಮ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ, ರಂಗರಾವ ಅನುವಾದಿತ ಕೃತಿ ಒಂದು ಯುಗದ ಅಂತ್ಯದಲ್ಲಿ (೨೦೦೭:೮೧–೮೨) ಸವಿವರವಾಗಿ ತಿಳಿಸುತ್ತಾ ಮೇಲಿನ ವಿಷಯಕ್ಕೆ ಪ್ರೋತ್ಸಾಹಿಸಿದ್ದಾರೆ.

ಈ ರೀತಿಯಾಗಿ 'ದೀನ್‌ದಾರ್' ಅಂಜುಮಾನನು ಹಿಂದೂ ಧರ್ಮವನ್ನು ಮುಸ್ಲಿಮ ಧರ್ಮದ ಅಡಿಯಾಗಿ ಮಾರ್ಪಡಿಸುವುದರ ಮುಖಾಂತರ ಮುಸ್ಲಿಮ ಧರ್ಮದ ಶ್ರೇಷ್ಠತೆಯನ್ನು ನಿರೂಪಿಸಿ ಮತಾಂತರಿಸುವ ಕಾರ್ಯವನ್ನು ಈ ಪಂಥ ಕೈಗೊಂಡಿತ್ತು.

**ಗುಲಬರ್ಗಾ ಜಿಲ್ಲೆಯಲ್ಲಿ ವಿಮೋಚನಾ ಚಳವಳಿ**

ಹೈದರಾಬಾದ್ ವಿಮೋಚನೆಗಾಗಿ ಗುಲಬರ್ಗಾ ಜಿಲ್ಲೆಯ ಪಾತ್ರ ಅಘಾದವಾಗಿದೆ. ಅನೇಕ ವೀರರು ತಮ್ಮ ಮನೆ ಮಠಗಳನ್ನು ಬಿಟ್ಟು ಹೋರಾಡಿದರು. ಕೊನೆಗೆ ಕೆಲವರು ತಮ್ಮ ಪ್ರಾಣವನ್ನು ಬಿಟ್ಟರು. ನಿಜಾಮನ ಆಡಳಿತವು ಜನಪರವಾಗಿರದೆ ನಿರಕುಂಶವಾಗಿದ್ದು ಯಾವುದೇ ಸೌಲಭ್ಯ ಸೌಕರ್ಯ ಇಲ್ಲದಿರುವುದರಿಂದ ಅನೇಕ ಜನರು ಬದುಕು ನಡೆಸಬೇಕಾಗಿತ್ತು. ಇಲ್ಲಿನ ಜನತೆ ಕೇವಲ ನಿಜಾಮನ ಜೊತೆಗೆ ಹೋರಾಡಿದರಲ್ಲದೆ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲ್ಗೊಂಡರು. ಇದರ ಮುಖಾಂತರ ಈ ಕಡೆ ಬ್ರಿಟಿಷರ ಜೊತೆ ಹಾಗೆಯೇ ನಿಜಾಮನ ವಿರುದ್ಧವು ಪ್ರತಿರೋಧನವನ್ನು ಮಾಡಿದರು ಹಾಗೂ 'ಭಾರತದ ಸ್ವಾತಂತ್ರ್ಯ ಸಂಗ್ರಾಮವು ನಿರಂತರವಾಗಿ ಹೈದರಾಬಾದ್ ವಿಮೋಚನೆ ಚಳವಳಿಯ ಮೇಲೆ ಪ್ರಭಾವವನ್ನು ಬೀರುತ್ತಾ ಹೋರಾಟಗಾರರಿಗೆ ನವಚೈತನ್ಯ ನೀಡಿತ್ತು.

ಗುಲಬರ್ಗಾ ಪ್ರದೇಶ ಒಳಗೊಂಡಂತೆ ಕೆಲವು ಹೋರಾಟಗಳು ಮತ್ತು ಘಟನೆಗಳು ಸಂಭವಿಸಿದರು ಆ ವಿಷಯದ ಕುರಿತು ಸಮಗ್ರವಾದಂತಹ ಕೃತಿಗಳ ರಚನೆಗಳು ಅತ್ಯಲ್ಪವಾಗಿವೆ. ಗುಲಬರ್ಗಾ ಪ್ರದೇಶದ ವಿಮೋಚನಾ ಚಳವಳಿ ಸಂಬಂಧಿಸಿದ ಸಹಾಯಕ ಕೃತಿಗಳೆಂದರೆ 'ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್' (೧೯೯೭), ಆರ್.ಆರ್. ದಿವಾಕರ್‌ರವರ 'ಕರ್ನಾಟಕದ ಪರಂಪರೆ' ಸಂಪುಟ–೨ (೨೦೦೬), ಬಿ. ಷೇಕ್ ಅಲಿ ಅವರು ಸಂಪಾದಿಸಿದ 'ಕರ್ನಾಟಕ ಚರಿತ್ರೆ ಸಂಪುಟಗಳು' (೧೯೯೭), ಬಿ.ಸಿ. ಮಹಾಬಲೇಶ್ವರಪ್ಪ ಅವರ 'ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳವಳಿಗಳು' (೧೯೯೭), ಟಿ.ಎಂ. ಭಾಸ್ಕರ್ ಅವರು ಸಂಪಾದಿಸಿದ 'ಕುಲಬುರ್ಗಿ ಜಿಲ್ಲಾ ದರ್ಶನ' (೨೦೦೫) ಎಸ್.ಚಂದ್ರಶೇಖರ ಅವರ 'ವಸಾಹತು ಕಾಲೀನ ಕರ್ನಾಟಕ' (೨೦೦೬), ವ್ಹಿ.ಜಿ.ಪೂಜಾರ ಅವರು ಸಂಪಾದಿಸಿರುವ 'ಸಂಶೋಧನಾ ಲೇಖನಗಳು' (೨೦೦೫), ಬಸವರಾಜ ಪೋಲಿಸ ಪಾಟೀಲ ಸಂಪಾದಿಸಿದ 'ಬಿಡುಗಡೆ' (೨೦೦೨), ಸೂರ್ಯನಾಥ ಕಾಮತ್ ಅವರು ಅನುವಾದಿಸಿದ 'ಹೋರಾಟದ ನೆನಪುಗಳು' (೧೯೭೭), ಸ್ಟೀವನ್ ಕ್ವಾಡ್ರಸ್ ಮತ್ತು ಸಂತೋಷ ಸಲ್ಡಾನ್ಹರವರ 'ಆಧುನಿಕ ಕರ್ನಾಟಕ' (೨೦೦೫), ಸೂರ್ಯನಾಥ ಕಾಮತ್‌ರ 'ಸ್ವತಂತ್ರ ಸಂಗ್ರಾಮದ ಸ್ಮೃತಿಗಳು' ಸಂಪುಟಗಳು (೧೯೮೦) ಗ.ಪ್ರ, ಪ್ರಧಾನ ಸರಸ್ವತೀ ರಿಸಬೂಟ ಅವರು ಅನುವಾದಿಸಿದ 'ಸ್ವಾತಂತ್ರ್ಯ ಸಂಗ್ರಾಮದ ಮಹಾಭಾರತ' (೧೯೯೪), ಎಸ್.ಆರ್. ರಾಮಸ್ವಾಮಿ ಅವರು ಸಂಪಾದಿಸಿದ 'ಸ್ವಾತಂತ್ರ್ಯೋದಯದ ಮೈಲುಗಲ್ಲುಗಳು' (೧೯೯೮), ಸೂರ್ಯನಾಥ್ ಕಾಮತ್ ಅವರು 'ಸ್ವಾತಂತ್ರ್ಯ ಸೂರ್ಯೋದಯ' (೨೦೦೨), ಮುಂತಾದ ಕೃತಿಗಳು ಗುಲಬರ್ಗಾ ಜಿಲ್ಲೆಯ ವಿಮೋಚನಾ ಚಳವಳಿ ಚರಿತ್ರೆಯ ಕುರಿತಾಗಿ ಅಧ್ಯಯನ ಮಾಡಲು ಸಹಾಯಕವಾಗಿವೆ.

ಆದಿವೇಶ ತಿಮ್ಮಪ್ಪಾ ಅವರ ದಿ. ಸ್ವದೇಶಿ ಮೂವಮೆಂಟ್ ಇನ್ ಕರ್ನಾಟಕ (೨೦೦೪), ವುಮನ್ಸ್ ರೋಲ್ ಇನ್ ಕರ್ನಾಟಕ ಫ್ರೀಡಮ್ ಸ್ಟ್ರಗಲ್ (೨೦೦೨), ರಾಘವೇಂದ್ರ ಸಂಗಪ್ಪನವರ 'ಸ್ವಾತಂತ್ರ್ಯ ಮತ್ತು ಏಕೀಕರಣ ಚಳವಳಿಯಲ್ಲಿ ಹುಮನಬಾದ ತಾಲ್ಲೂಕಿನ ಪಾತ್ರ', ಬಸವರಾಜ 'ಶರಣಪ್ಪ ಅವರ ಸ್ವಾತಂತ್ರ್ಯ ಮತ್ತು ಏಕೀಕರಣ ಚಳವಳಿಯಲ್ಲಿ ಬೀದರ್ ತಾಲೂಕಿನ ಪಾತ್ರ', ಸುಭಾಷಚಂದ್ರ ದೊಡ್ಡಮನಿ ಅವರ 'ಹೈದ್ರಾಬಾದ್ ವಿಮೋಚನಾ ಆಂದೋಲನದಲ್ಲಿ ಕಲಬುರ್ಗಿ ಜಿಲ್ಲೆಯ ಶಿಬಿರಗಳ ಪಾತ್ರ' (೨೦೦೨), ರಾಜ ಎಂ. ಅವರು 'ಫ್ರೀಡಮ್ ಪೈಟರ್ಸ್ ಆಫ್ ಗುಲಬರ್ಗಾ ಡಿಸ್ಟ್ರೀಕ್' (೨೦೦೬), ಶುಭಾ ಅವರ ಸುರಪುರ ವಿಮೋಚನಾ ಹೋರಾಟ (೨೦೦೬) ಮುಂತಾದ ಅಪ್ರಕಟಿತ ನಿಬಂಧ ಮತ್ತು ಪ್ರಬಂಧ ಸಹ ಗಮನಿಸಲಾಗಿದೆ.

ಹೈದರಾಬಾದನ ನಿಜಾಮರ ಆಳ್ವಿಕೆಯ ಧೋರಣೆಯ ಪರಿಣಾಮವಾಗಿ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಅಥವಾ ಸಿಪಾಯಿ ದಂಗೆ ಸಂದರ್ಭದಲ್ಲಿ ಹೈದರಾಬಾದ್

ಸರಕಾರದ ಪ್ರತಿನಿಧಿಯಾದ ಸಾಲಾರಜಂಗನು ಇಂಗ್ಲಿಷರಿಗೆ ಸಹಾಯ ಮಾಡಿದನು. ಆದರೂ ಸಹ ಸಂಸ್ಥಾನದಲ್ಲಿ ಬ್ರಿಟಿಷರ ವಿರುದ್ಧ ಹೋರಾಟಗಳು ಸಂಭವಿಸಿದವು ಇದರಿಂದಾಗಿ ಜನರಲ್ಲಿ ರಾಷ್ಟ್ರೀಯ ಭಾವನೆ/ಪ್ರಜ್ಞೆಯನ್ನು ಬೆಳೆಸಿಕೊಳ್ಳಲು ಸಹಾಯಕವಾಯಿತು ಎಂಬುದನ್ನು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ನಿಜಾಮನ ಪ್ರಭಾವ ಬೀರುವ ಇನ್ನೊಂದು ಉದಾಹರಣೆ ಎಂದರೆ ಗಾಂಧೀಜಿಯವರ ನೇತೃತ್ವದಲ್ಲಿ ನಡೆದ ಖಿಲಾಫತ್ ಚಳವಳಿ ಸಂದರ್ಭದಲ್ಲಿ ಹೈದರಾಬಾದ್ ಸಂಸ್ಥಾನದ ಕೆಲವು ಪ್ರತಿಷ್ಠಿತ ಮುಸ್ಲಿಮರು ಈ ಚಳವಳಿಯಲ್ಲಿ ಪಾಲ್ಗೊಂಡರು ಬ್ರಿಟಿಷರು ನಿಜಾಮನಿಗೆ ಎಚ್ಚರಿಕೆಕೊಟ್ಟರು. ಆಗ ನಿಜಾಮನು ಈ ಚಳವಳಿಯನ್ನು ನಿಯಂತ್ರಿಸುವ ಆಜ್ಞೆಯನ್ನು ನೀಡಿ ಖಿಲಾಫತ್ ಚಳುವಳಿಯು ಇಸ್ಲಾಮ್ ಧರ್ಮದ ವಿರುದ್ಧವಾದ ಚಳವಳಿಯಾಗಿದೆ ಎಂದು ಪ್ರಕಟಿಸಿ ಚಳವಳಿಯಲ್ಲಿ ಭಾಗವಹಿಸಿದ ಕೆಲವು ಮುಸ್ಲಿಮ ಯುವಕರನ್ನು ಕಾರಗೃಹಕ್ಕೆ ತಳ್ಳಿದನು. ಬ್ರಿಟಿಷರ ಬಗ್ಗೆ ನಿಜಾಮನ ನಿಷ್ಠತೆ ಅಥವಾ ಗುಲಾಮದ ಮಟ್ಟ ಅರ್ಥವಾಗುತ್ತದೆ. ಈ ರೀತಿಯಾಗಿ ಗುಲಬರ್ಗಾ ಪ್ರದೇಶದಲ್ಲಿ ಬ್ರಿಟಿಷರಿಗಿಂತಲೂ ನಿಜಾಮನೇ ಹೋರಾಟಕ್ಕೆ ಮಟ್ಟ ಹಾಕಲು ಪ್ರಯತ್ನಿಸುತ್ತಿದ್ದನು. ಈ ವಿಷಯಗಳನ್ನು ಪ್ರಧಾನ (೧೯೯೪:೨೩೯), ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೮೩) ಕೃತಿಯಲ್ಲಿ ಉಲ್ಲೇಖಿಸಲಾಗಿದೆ.

ಗುಲಬರ್ಗಾ ಜಿಲ್ಲೆ ವಿಮೋಚನಾ ಚಳವಳಿಯಲ್ಲಿ ಎರಡು ಭಾಗಗಳಾಗಿ ವಿಂಗಡಿಸಲಾಗಿದ್ದು, ಮೊದಲನೆಯ ಭಾಗದಲ್ಲಿ ರಾಷ್ಟ್ರೀಯ ಮಟ್ಟದ ಹೋರಾಟ ಮತ್ತು ಎರಡನೆಯ ಭಾಗದಲ್ಲಿ ಸ್ಥಳೀಯವಾಗಿ ನಡೆದ ಹೋರಾಟಗಳು ಎಂದು ವಿಭಾಗಿಸಿಕೊಳ್ಳುವುದರ ಮೂಲಕ ಅಧ್ಯಯನವನ್ನು ಕೈಗೊಳ್ಳಲಾಗಿದೆ.

### ೨. ರಾಷ್ಟ್ರಮಟ್ಟದ ಹೋರಾಟ

ಬ್ರಿಟಿಷರು ಭಾರತಕ್ಕೆ ವ್ಯಾಪಾರಕ್ಕಾಗಿ ಬಂದು ಇಸ್ಟ್ ಇಂಡಿಯಾ ಕಂಪನಿ ಸ್ಥಾಪಿಸುವುದರ ಮೂಲಕ ಭಾರತದಲ್ಲಿ ತಮ್ಮ ಅಸ್ತಿತ್ವವನ್ನು ಕಂಡುಕೊಂಡರು. ಕಾಲಕ್ರಮೇಣ ಭಾರತದಲ್ಲಿರುವಂತಹ ಸಂಸ್ಥಾನಗಳು ರಾಜಪ್ರಭುತ್ವ ಮೇಲೆ ಸುಧಾರಣೆಯ ನೆಪದಲ್ಲಿ ದಮನಕಾರಕ ಕಾನೂನುಗಳನ್ನು ಪಾಸು ಮಾಡುವುದರ ಮುಖಾಂತರ ಹಿಡಿತದಲ್ಲಿ ಇಟ್ಟುಕೊಂಡರು. ಅಂತಹ ಸಂಸ್ಥಾನಗಳಲ್ಲಿ ನಿಜಾಮನು ಒಬ್ಬನಾಗಿದ್ದನು. ನಿಜಾಮ ಬ್ರಿಟಿಷರ ಗುಲಾಮ ಅವನ ಪ್ರಜೆಗಳು ಗುಲಾಮನ ಗುಲಾಮರು ತಲೆಮಾರುಗಳಿಂದ ಹಿಂಸೆ, ಶೋಷಣೆ, ಅಪಮಾನ, ಅತ್ಯಾಚಾರ ದಬ್ಬಾಳಿಕೆಗೊಳಗಾದ ಈ ಜನತೆ ನಿಜಾಮನ ಮತ್ತು ಬ್ರಿಟಿಷರ ಬಂಧನದ ಬೇಡಿ ಕಿತ್ತೊಗೆದು ಸ್ವಾತಂತ್ರ್ಯ ಮುಕ್ತಿಗಾಗಿ ಹಾತೊರೆಯುತ್ತಿತ್ತು. ಇದಕ್ಕಾಗಿ ತೀವ್ರ ಹೋರಾಟಗಳು ಮಾಡಬೇಕಾಯಿತು. ಸಂಸ್ಥಾನದ ಹೊರಗೆ ಬ್ರಿಟಿಷ ಭಾರತದಲ್ಲಿ ಸ್ವಾತಂತ್ರ್ಯದ ಚಳವಳಿ ಬಿರುಸಿನಲ್ಲಿದ್ದಾಗ ಅನೇಕ ನಾಯಕರ, ಸಂಘಟನೆಯ

ಬೆಂಬಲದೊಂದಿಗೆ ಮತ್ತು ಪ್ರೇರಣೆಯಿಂದ ಈ ಜನರಲ್ಲಿಯೂ ಹೋರಾಟದ ಹುಮಸ್ಸು ಉಕ್ಕೇರತೊಡಗಿತ್ತು. ಸತ್ಯಾಗ್ರಹ, ಚಳವಳಿ, ಬಹಿಷ್ಕಾರ ಮುಖಾಂತರ ಹೋರಾಟಕ್ಕೆ ಇಳಿದರು.

ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಅಥವಾ ಸಿಪಾಯಿ ದಂಗೆಯಲ್ಲಿ ಹೈದರಾಬಾದ್ ಸರಕಾರದ ಪ್ರತಿನಿಧಿ ಸಾಲಾರಜಂಗನು ಇಂಗ್ಲಿಷರಿಗೆ ಸಹಾಯ ಮಾಡುವುದರ ಮುಖಾಂತರ ಈ ಪ್ರದೇಶದ ಮೇಲೆ ಅಷ್ಟೇನು ಪರಿಣಾಮಕರ ಹೋರಾಟಗಳು ಸಂಭವಿಸದೆ ಹೋದರು ಸುರಪುರದಂಗೆ, ವಂದೇಮಾತರಂ ಚಳವಳಿ, ಕ್ವಿಟ್ ಇಂಡಿಯಾ ಚಳವಳಿ ಸ್ವಲ್ಪ ಮಟ್ಟಿಗೆ ಗುಲಬರ್ಗಾ ಪ್ರದೇಶದ ಮೇಲೆ ಪ್ರಭಾವ ಬೀರಿ ಇಲ್ಲಿನ ಜನತೆಯು ಪಾಲ್ಗೊಂಡಿದ್ದನು ಕಾಣಬಹುದು. ಅಸಹಾಕಾರ ಚಳವಳಿ, ಕಾನೂನುಭಂಗ ಚಳವಳಿಗೂ ಈ ಪ್ರದೇಶದ ಮೇಲೆ ನಡೆಯದೆ ಹೋದರು ಇಲ್ಲಿನ ಜನತೆಯಲ್ಲಿ ಮುಂದಿನ ಹೋರಾಟಕ್ಕೆ ಪ್ರೇರಣೆ ನೀಡಿದವು. ರಾಷ್ಟ್ರೀಯ ಮಟ್ಟದ ಹೋರಾಟದಲ್ಲಿ ಎರಡು ಭಾಗಗಳಾಗಿ ವಿಭಾಗಿಸಿದ್ದು, ಮೊದಲನೆಯ ಭಾಗ ಕಾಂಗ್ರೆಸ್ ನೇತೃತ್ವದಲ್ಲಿ ನಡೆದ ಹೋರಾಟಗಳು, ಎರಡನೆಯ ಭಾಗದಲ್ಲಿ ಆರ್ಯ ಸಮಾಜ ನೇತೃತ್ವದಲ್ಲಿ ನಡೆದ ಹೋರಾಟಗಳು ಎಂದು ವಿಭಾಗಿಸಿಕೊಳ್ಳುವುದರ ಮೂಲಕ ಅಭ್ಯಾಸಿಸಲಾಗಿದೆ.

**೩. ಕಾಂಗ್ರೆಸ್ ನೇತೃತ್ವದ ಹೋರಾಟ**

ಭಾರತ ಸ್ವಾತಂತ್ರ್ಯಕ್ಕಿಂತ ಪೂರ್ವದಲ್ಲಿ ನಿಜಾಮನ ಮತ್ತು ಬ್ರಿಟಿಷರ ವಿರುದ್ಧ ಅನೇಕ ಹೋರಾಟಗಳು ಸಂಭವಿಸಿದವು. ೧೮೮೫ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪನೆಗೊಂಡ ನಂತರ ಇದರ ನೇತೃತ್ವದಲ್ಲಿ ಅನೇಕ ಹೋರಾಟಗಳು ಸಂಭವಿಸಿದವು. ೧೯೩೮ ಅವಧಿಯಲ್ಲಿ ಬ್ರಿಟಿಷ್ ಸರಕಾರವೇ ಭಾರತದ ಅನೇಕ ಪ್ರಾಂತಗಳಲ್ಲಿ ಕಾಂಗ್ರೆಸ್ ಮಂತ್ರಿಮಂಡಲ ರಚನೆಗೆ ಮುಂದಾಯಿತು. ೧೯೩೮ರ ಜೂನ್ ೨೯ರಂದು ಹೈದರಾಬಾದ್ ಸ್ಟೇಟ್ ಕಾಂಗ್ರೆಸ್ ಸ್ಥಾಪನೆಯಾಯಿತು. ೧೯೩೮ರ ಆರಂಭದಲ್ಲಿ ಕರ್ನಾಟಕ ಪರಿಷತ್ತು, ಮಹಾರಾಷ್ಟ್ರ ಪರಿಷತ್ತು ಮತ್ತು ಆಂಧ್ರ ಮಹಾಸಭಾಗಳು ಜಂಟಿಯಾಗಿ ಜನಜಾಗೃತಿ ಕಾರ್ಯಕ್ಕೆ ಮುಂದಾದವು. ಹೈದರಾಬಾದ್ ಸ್ಟೇಟ್ ಕಾಂಗ್ರೆಸ್ ನಾಯಕತ್ವವನ್ನು ಸ್ವಾಮಿ ರಮಾನಂದರು ವಹಿಸಿಕೊಳ್ಳುವುದ ರೊಂದಿಗೆ ಸತ್ಯಾಗ್ರಹ ಚಳವಳಿಗಳು ಪ್ರಾರಂಭಿಸಿದವು. ೧೯೩೮ರ ಅಕ್ಟೋಬರ್ ೨೪ ರಂದು ಹೈದರಾಬಾದನ ಸುಲ್ತಾನ ಬಜಾರಿನಲ್ಲಿ ಸತ್ಯಾಗ್ರಹ ಆರಂಭವಾಯಿತು. ಹೈದರಾಬಾದ್ ಸಂಸ್ಥಾನದ ವಿರುದ್ಧ ಹೋರಾಟಕ್ಕೆ ಸ್ವಾತಂತ್ರ್ಯ ಚಳವಳಿಯೇ ಮೂಲ ಪ್ರೇರಣೆಯಾಯಿತು. ಪಾಟೀಲರು (೨೦೦೨:೧೧೦) ಪಾಟೀಲರು (೧೯೯೯:೧೯೧-೧೯೨), ಭಾಸ್ಕರ್ (೨೦೦೫:೨೫೭) ಇವರ ಕೃತಿಗಳಲ್ಲಿ ತಿಳಿಸಿದ್ದಾರೆ.

ಮಹಾತ್ಮ ಗಾಂಧೀಜಿಯವರು ೧೯೨೪ರಲ್ಲಿ ಬೆಳಗಾವಿ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾಗಿದ್ದ ಪರಿಣಾಮವಾಗಿ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಆಸಕ್ತಿ

ವಹಿಸಲು ಪ್ರಚೋದನೆ ಸಿಕ್ಕಿತು.[೬] ಇದಕ್ಕಿಂತ ಪೂರ್ವದಲ್ಲಿ ೧೯೨೧-೨೨ ರಲ್ಲಿ ಗುಲಬರ್ಗಾದಲ್ಲಿ ಕರಾಳ ಸ್ವರೂಪದ ಹಿಂದೂ-ಮುಂಸ್ಲಿಂ ದಂಗೆ ನಡೆಯಿತು. ಜನಾರ್ದನ್ ರಾವ್ ದೇಸಾಯಿಯವರು ತಿಳಿಸಿರುವಂತೆ ನಗರದಲ್ಲಿರುವ ಗುಡಿಗಳನ್ನು ಹಾಗೂ ಶರಣಬಸವೇಶ್ವರ ದೇವಸ್ಥಾನ ಕೆಡುವಲು ಪ್ರಯತ್ನಗಳು ನಡೆದವು. ಈ ಸಂದರ್ಭದಲ್ಲಿ ಸಿ.ಐ.ಡಿ. ಮತ್ತು ಡಿ.ಎಸ್.ಪಿ ಮರಣವಾಯಿತು. ನಂತರ ಗಾಂಧೀಜಿಯವರು ಹರಿಜನ (ಯಂಗ ಇಂಡಿಯಾ) ಪತ್ರಿಕೆಯಲ್ಲಿ 'ಗುಲಬರ್ಗಾ ಗಾನ್ ಮ್ಯಾಡ್' ಎಂಬ ಲೇಖನ ಬರೆದು ಪ್ರಕಟಿಸುವುದರ ಮೂಖಾಂತರ ವಿರೋಧ ಭಾವನೆಯನ್ನು ವ್ಯಕ್ತಪಡಿಸಿದರು. ೧೯೨೭ರಲ್ಲಿ ಗಾಂಧೀಜಿಯವರು ಗುಲಬರ್ಗಾಕ್ಕೆ ಇದೇ ಸಂಧರ್ಭದಲ್ಲಿ ಭೇಟಿನೀಡಿ ಶರಣಬಸವೇಶ್ವರ ದೇವಾಲಯವನ್ನು ಸಂದರ್ಶಿಸಿದರು. ಇವರ ಭೇಟಿಯು ಇಲ್ಲಿನ ಜನರ ಮೇಲೆ ಮತ್ತು ಸ್ವಾತಂತ್ರ್ಯ ಚಳವಳಿಗಾರರ ಮನಸ್ಸಿನ ಮೇಲೆ ಆಗಾಧವಾದ ಪರಿಣಾಮವನ್ನು ಬೀರಿತು ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೮೩) ತಮ್ಮ ಕೃತಿಯಲ್ಲಿ ಉಲ್ಲೇಖಿಸಲಾಗಿದೆ.

ಕಾಂಗ್ರೆಸ್ ನೇತೃತ್ವದಲ್ಲಿ ಅನೇಕ ಸಮ್ಮೇಳನಗಳು ಜರುಗಿದ್ದು, ಮೇಲಿನ ಅಂಶಗಳಿಂದ ತಿಳಿದುಬರುತ್ತದೆ. ಕಾಂಗ್ರೆಸ್ ಮತ್ತು ರಾಷ್ಟ್ರೀಯ ನಾಯಕರ ಸಮ್ಮೇಳನಗಳಲ್ಲಿ ಭಾಗವಹಿಸಿ ಬ್ರಿಟಿಷರ ವಿರುದ್ಧ ಕಾಂಗ್ರೆಸ್ ನೇತೃತ್ವದಲ್ಲಿ ಅಸಹಕಾರ, ಕಾನೂನು ಭಂಗ, ಕ್ವಿಟ್ ಇಂಡಿಯಾ ಚಳವಳಿಗಳು ನಡೆದಿದ್ದು, ಅದಕ್ಕೆ ಸಂಬಂಧಿಸಿದಂತೆ ವಿವರಣೆಯನ್ನು ಕೆಳಗೆ ತಿಳಿಸಲಾಗಿದೆ.

### ಅಸಹಕಾರ ಚಳವಳಿ

ಗಾಂಧೀಜಿಯವರು ಅಸಹಕಾರ ಚಳವಳಿಯನ್ನು ಘೋಷಿಸಿದಾಗ ಹೈದರಾಬಾದ್ ಕರ್ನಾಟಕದಲ್ಲಿ ಅನೇಕ ಯುವಕರು ಪ್ರಭಾವಿತರಾದರು. ೧೯೨೦ರಲ್ಲಿ ನಾಗಪುರ ಕಾಂಗ್ರೆಸ್‌ಗೆ ನಮ್ಮಲ್ಲಿಂದ ೮೦೦ ರಷ್ಟು ಪ್ರತಿನಿಧಿಗಳು ಉಪಸ್ಥಿತರಿದ್ದರು ಗಾಂಧೀಜಿಯವರ ನೇತೃತ್ವದಲ್ಲಿ ರಾಷ್ಟ್ರ ಮಟ್ಟದಲ್ಲಿ ಅರಂಭಗೊಂಡ ಈ ಚಳವಳಿ ಕರ್ನಾಟಕದ ಮೇಲೆ ಪರಿಣಾಮವನ್ನು ಬೀರಿತ್ತು. ಏಳು ಜಿಲ್ಲೆಗಳಲ್ಲಿ ಮಾತ್ರ ಚಳವಳಿ ಆಯಿತು. ಗಾಂಧೀಜಿ ೧೯೨೦ ಮತ್ತು ೧೯೨೧ರಲ್ಲಿ ಕರ್ನಾಟಕದಲ್ಲಿ ಪ್ರವಾಸ ಮಾಡಿದರು ಇದರ ಮುಖಾಂತರ ಕರ್ನಾಟಕದಲ್ಲಿ ಸ್ವಾತಂತ್ರ್ಯ ಬೇಡಿಕೆಯು ಹರಡಿತ್ತು. ಈ ಚಳವಳಿಯು ಮೂಲಕ ಸ್ವಾತಂತ್ರ್ಯದ ಇಚ್ಚೆಯನ್ನೇ ಈಡೇರಿಸಿಕೊಳ್ಳಲು ಅಸಹಾಕಾರ ಚಳವಳಿಯು ಒಂದು ಮೆಟ್ಟಿಲಾಗಿ ಪರಿಣಮಿಸಿತು. ಗಾಂಧೀಜಿಯವರು ಶಾಲಾ ಕಾಲೇಜು, ಕಚೇರಿಗಳನ್ನು ತ್ಯಜಿಸಲು ಕರೆ ನೀಡಿದರು. ನೂರು ವಕೀಲರು ತಮ್ಮ (ಅಧಿಕಾರವನ್ನು) ಹುದ್ದೆಯನ್ನು ತ್ಯಜಿಸಿ ಚಳವಳಿಗೆ ಭಾಗವಹಿಸಿದರು. ವಿದೇಶಿ ಬಟ್ಟೆ, ಸೆರೆ ಸೇಂದಿ, ಅಸ್ಪೃಶ್ಯತಾ ನಿವಾರಣೆ, ಖಾದಿ ಪ್ರಚಾರ, ಕರ್ನಾಟಕವು ಒಳ್ಳೆಯ ಪ್ರತಿಕ್ರಿಯೆ ನೀಡಿತು.[೭] ೪೮ ರಾಷ್ಟ್ರೀಯ ಶಾಲೆಗಳು ಅಸ್ಥಿತ್ವಕ್ಕೆ ಬಂದವು. ೧೯೨೧ರಲ್ಲಿ ಅಸ್ತಿತ್ವಕ್ಕೆ ಬಂದ

ಕರ್ನಾಟಕ ಪ್ರಾಂತದ ಕಾಂಗ್ರೆಸ್ ಕಮೀಟಿ ಮಾರ್ಗದರ್ಶನದಲ್ಲಿ ನಡೆದ ಚಳವಳಿಯು ಪ್ರಾಂತದ ಎಲ್ಲಾ ಭಾಗಗಳಲ್ಲಿ ವ್ಯಾಪಿಸಿತು. ಕರ್ಮವೀರ, ನವಶಕ್ತಿ, ಕರ್ನಾಟಕ ವೈಭವ, ಕರ್ನಾಟಕ ವೃತ್ತ, ರಾಷ್ಟ್ರಬಂಧೂ, ವಿಶ್ವಕರ್ನಾಟಕ, ಸತ್ಯಾಗ್ರಹಿ, ಶರಣಸಂದೇಶ, ಹಲವಾರು ಪತ್ರಿಕೆಗಳೂ ಆಂದೋಲನದ ಪ್ರಸಾರಕ್ಕೆ ಅಮೋಘ ಸೇವೆ ಸಲ್ಲಿಸಿದವು.

ಮೇಲಿನ ವಿಷಯಗಳಲ್ಲಿ ಪ್ರಧಾನ (೧೯೯೪:೨೪೦), ಸ್ಟೀಮ್ ಕ್ವಾಡ್ರಸ್ (೨೦೦೫:೧೮೬), ಸೂರ್ಯನಾಥ ಕಾಮತ್ (೨೦೦೨:೬೫), ದಿವಾಕರ್ (೨೦೦೬: ೫೧೭–೫೧೮), ಮೋಹನ ನಾಗಮ್ಮ (೨೦೦೩:೬೭–೬೮) ಕೃತಿಕಾರರು ತಮ್ಮ ಕೃತಿಗಳಲ್ಲಿ ಮೇಲಿನ ಅಂಶಗಳನ್ನು ತಿಳಿಸಿದ್ದಾರೆ.

ಅಸಹಕಾರ ಚಳವಳಿಯಲ್ಲಿ ಅನೇಕ ನಾಯಕರು ಪಾಲ್ಗೊಳ್ಳುವುದರ ಮುಖಾಂತರ ಸೆರೆಮನೆಯ ವಾಸವನ್ನು ಅನುಭವಿಸಬೇಕಾಯಿತು. ಅದರಲ್ಲಿ ಗಂಗಾಧರರಾವ್ ದೇಶ ಪಾಂಡೆಯವರಿಗೆ ೬ ತಿಂಗಳು ಶಿಕ್ಷೆಯನ್ನೇ ವಿಧಿಸಲಾಯಿತು, ದಿವಾಕರ, ಹಣಮಂತರಾವ್ ಮೋಹರೆ, ಹನುಮಂತರಾವ ಕೌಜಲಗಿ ಇನ್ನಿತರರಿಗೆ ೧ ವರ್ಷ ಶಿಕ್ಷೆಯನ್ನು ವಿಧಿಸಿದರು. ಪಿಕ್‌ಟಿಂಗ್ ನಡೆಸುವ ಜನತ್ಸೋಮದ ಮೇಲೆ ಗುಂಡು ಹಾರಿಸಿದರು. ಇದರಲ್ಲಿ ಮೂರು ಜನ ಮೃತಪಟ್ಟರು ದಿವಾಕರ್ (೨೦೦೬:೫೧೮), ಮೋಹನ ನಾಗಮ್ಮ (೨೦೦೩:೬೭) ಇದೇ ವಿಷಯವನ್ನು ಪ್ರಸ್ತಾಪಿಸಿದ್ದಾರೆ.

ಗುಲಬರ್ಗಾ ಜಿಲ್ಲೆಯು ಹೈದರಾಬಾದ್ ರಾಜ್ಯದ ಭಾಗವಾಗಿದ್ದರಿಂದ ಮತ್ತು ನಿಜಾಮನು ಬ್ರಿಟಿಷರಿಗೆ ಓಲೈಸಬೇಕಾಗಿದ್ದುದರಿಂದ ಕರ್ನಾಟಕದ ಬೇರೆ ಕಡೆಗೆ ಸಂಭವಿಸಿದ ಅಸಹಕಾರ ಚಳವಳಿ ಇಲ್ಲಿ ಸಂಭವಿಸಲಿಲ್ಲ ಆದರೂ ಸಹ ಪರೋಕ್ಷವಾಗಿ ಇಲ್ಲಿನ ಜನರ ಮೇಲೆ ಪ್ರಭಾವ ಬೀರಿ ಮುಂದಿನ ಹೋರಾಟಕ್ಕೆ ಪ್ರೇರಣೆ ನೀಡಿತ್ತು.

**ಕಾನೂನು ಭಂಗ ಚಳವಳಿ**

ಬ್ರಿಟಿಷ್ ಸರಕಾರವು ಉಪ್ಪನ್ನು ತಯಾರಿಸುವ ಮತ್ತು ಮಾರಾಟದ ಮೇಲೆ ಕೆಲವು ನಿರ್ಬಂಧಗಳನ್ನು ಜಾರಿಗೆಗೊಳಿಸಿದ್ದರಿಂದ ರಾಷ್ಟ್ರೀಯ ನಾಯಕರು ತೀವ್ರ ಅಸಮಧಾನವನ್ನು ವ್ಯಕ್ತಪಡಿಸಿದರು. ೧೯೩೦ರಲ್ಲಿ ಗಾಂಧೀಜಿಯವರು ಉಪ್ಪಿನ ಕರದ ವಿರುದ್ಧ ಸತ್ಯಾಗ್ರಹ ಆರಂಭಿಸಲು ತೀರ್ಮಾನಿಸಿ ದಂಡಿಯಾತ್ರೆ ಕೈಗೊಂಡರು, ಹಾಗೆಯೇ ಗಾಂಧೀಜಿಯ ಕರೆಯನ್ನು ಸ್ವೀಕರಿಸಿ ಗಂಗಾಧರರಾವ್ ದೇಶಪಾಂಡೆ ತಮ್ಮ ಕಾರ್ಯವನ್ನು ಆರಂಭಿಸಿದರು. ಇದರ ಅಡಿಯಲ್ಲಿ ರಾಜ್ಯದ ಅಂಕೋಲಾದಲ್ಲಿ ಉಪ್ಪನ್ನು ತಯಾರಿಸಿ ಕಾನೂನು ಭಂಗಗೊಳಿಸುವ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆ. ಹುಬ್ಬಳ್ಳಿ, ಬೆಳಗಾಂಗಳಲ್ಲಿ ಪ್ರತ್ಯೇಕ ತಂಡಗಳು ಎಪ್ರೀಲ್ ೧೩, ೧೯೩೦ರಂದು ೧೦ ಸಾವಿರ ಜನ ಜಮಾಯಿಸಿದರು. ಎಂ.ಪಿ.ನಾಡಕರ್ಣಿ ನೇತೃತ್ವ ವಹಿಸಿದರು. ಸತ್ಯಾಗ್ರಹವು

ಸುಮಾರು ೩೦ ಕಡೆಗಳಲ್ಲಿ ಸಂಭವಿಸಿತು ರಾಮಸ್ವಾಮಿ (೧೯೯೮:೨೦೮), ಸೂರ್ಯನಾಥ ಕಾಮತ್ (೨೦೦೨:೬೬), ಇದೇ ವಿಷಯವನ್ನು ಸ್ಟೀವನ್ ಕ್ವಾಡ್ರಸ್ (೨೦೦೫:೧೮೭), ಮೋಹನ ನಾಗಮ್ಮ (೨೦೦೩:೭೦) ಇದೇ ಅಂಶಗಳನ್ನು ತಮ್ಮ ಕೃತಿಗಳಲ್ಲಿ ವ್ಯಕ್ತಪಡಿಸಿದ್ದಾರೆ.

ಅರಣ್ಯ ಸತ್ಯಾಗ್ರಹದಲ್ಲಿ ಸೇಂದಿ ಉತ್ಪಾದನೆ, ಮತ್ತು ಮಾರಾಟಗಳ ವಿರುದ್ಧ ಚಳವಳಿ ಆರಂಭವಾದವು. ಕಾಯ್ದಿಟ್ಟ ಅರಣ್ಯದಲ್ಲಿ ಕಾನೂನನ್ನು ಜನರು ಮುರಿದು ಉರುವಲು ಕಟ್ಟಿಗೆ, ಹಾಗೂ ಹುಲ್ಲನ್ನು ತಂದು ಬಂಧಿತರಾದರು. ಈಚಲು ಮರಗಳನ್ನು ಕಡಿದು ಹಾಕಿದರು. ಸಿರ್ಸಿ, ಸಿದ್ದಾಪೂರ, ತಾಲ್ಲೂಕುಗಳು ಅರಣ್ಯ ಸತ್ಯಾಗ್ರಹದ ಮುಖ್ಯಕೇಂದ್ರಗಳಾದವು. ಕರನಿರಾಕರಣೆ ಪ್ರಭಾವಕ್ಕೆ ಒಳಗಾಗಿ ಹಿರೇಕೇರೂರು, ಸಿರ್ಸಿ, ಅಂಕೋಲಾ, ಸಿದ್ದಾಪುರಗಳಲ್ಲಿ ಚಳವಳಿ ಆರಂಭವಾಯಿತು. ರೈತಾಪಿ ವರ್ಗದ ಮೇಲೆ ಘೋರ ಪರಿಣಾಮ ಬೀರಿದವು. ಈ ಹೋರಾಟದಲ್ಲಿ ರೈತರು ಆಸ್ತಿ, ಪಾಸ್ತಿ, ಮನೆ, ದನಕರುಗಳನ್ನು ಕಳೆದುಕೊಂಡು ಕಷ್ಟ ನಷ್ಟಗಳನ್ನು ಅನುಭವಿಸಿದರು. ಇದೇ ಸಂದರ್ಭದಲ್ಲಿ ಸ್ವಾತಂತ್ರ್ಯ ಹೋರಾಟದ ಪ್ರಸಿದ್ದ ನಾಯಕರಾಗಿದ್ದ ಹರ್ಡೇಕರ್ ಮಂಜಪ್ಪನವರು ಈ ಸಂಸ್ಥಾನದಲ್ಲೂ ೧೯೩೫ರಲ್ಲಿ ಸಂಚರಿಸಿ ಪ್ರಚೋದಿತ ಭಾಷಣಗಳ ಮೂಲಕ ಜನಜಾಗೃತಿಯನ್ನು ಮೂಡಿಸಿದರು ವಿದೇಶಿ ಬಟ್ಟೆಗಳನ್ನು ತ್ಯಜಿಸುವುದು, ಖಾದಿ ಧರಿಸುವುದು. ಪಾನ ನಿರೋಧ ಹಾಗೂ ಅಸ್ಪೃಶ್ಯತೆಯ ಜನಪ್ರಿಯ ಗೊಳಿಸಲಾಯಿತು. ೧೯೩೭ರಲ್ಲಿ ಗುಲಬರ್ಗಾದಲ್ಲಿ ಪ್ರಥಮ ಬಾರಿಗೆ ಖಾದಿ ಭಂಡಾರವನ್ನು ಮಂತಾಳ ಅವರು ಪ್ರಾರಂಭಿಸಿದರು. ೧೯೩೮ರಲ್ಲಿ ಹೈದರಾಬಾದ್ ಸ್ಟೇಟ್ ಕಾಂಗ್ರೆಸ್ ಅಧ್ಯಕ್ಷರಾಗಿ ಗೋವಿಂದರಾವ ನಾನಲ್ ಮತ್ತು ರಮಾನಂದ ತೀರ್ಥರು, ಜನಗಳೂ ರಾಷ್ಟ್ರೀಯ ಜಾಗೃತಿ ಮೂಡಿಸಿದರು. ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೬:೮೫), ಮೋಹನ ನಾಗಮ್ಮ (೨೦೦೩:೭೦), ಸೂರ್ಯನಾಥ ಕಾಮತ್ (೨೦೦೨:೬೭) ತಮ್ಮ ಕೃತಿಗಳಲ್ಲಿ ವಿವರಿಸಿದ್ದಾರೆ.

**ವಂದೇಮಾತರಂ ಚಳವಳಿ**

ಉಸ್ಮಾನಿಯಾ ವಿಶ್ವವಿದ್ಯಾಲಯ ಮುಸ್ಲಿಮ ವಿದ್ಯಾರ್ಥಿಗಳು ಹಾಸ್ಟಲಿನ ಸಭಾಂಗಣದಲ್ಲಿ ನಮಾಜು ಮಾಡುತ್ತಿದ್ದರು. ತರಗತಿಗಳು ಪ್ರಾರಂಭವಾಗುವ ಮುಂಚೆ 'ತಾಬರ್ ಖಾಲಿಕೇರ್ಘಾಲಂ ಮರಿಯಾ ಸತ್ರಾತೇ' ಎಂದರೆ 'ನಿಜಾಮನು ಚಿರಕಾಲ ಬಾಳಲಿ' ಆತನ ಸಾಮ್ರಾಜ್ಯ ಸೂರ್ಯ ಚಂದ್ರರಿರುವರೆಗೂ ಮುಂದುವರೆಯಲಿ ಎಂಬ ಪ್ರಾರ್ಥನೆ ಹಿಂದೂ ಮುಸಲ್ಮಾನ ವಿದ್ಯಾರ್ಥಿಗಳು ಕೂಡಿಯೇ ಪ್ರಾರ್ಥನೆ ಸಲ್ಲಿಸಬೇಕಾಗುತ್ತಿತ್ತು. ಆದರೆ ಸ್ವಾಭಿಮಾನ ಹಿಂದೂ ವಿದ್ಯಾರ್ಥಿಗಳು ವಿದ್ಯಾರ್ಥಿ ನಿಲಯದ ಸಭಾಗೃಹದಲ್ಲಿ ವಂದೇಮಾತರಂ ಗೀತೆಯನ್ನು ಸಾಮೂಹಿಕವಾಗಿ ಹಾಡುತ್ತಿದ್ದರು. ಆದರೆ ಸರ್ಕಾರವು ೧೯೩೮ ನವೆಂಬರ್ ೧೮ರಂದು ಒಂದು ಆದೇಶ ಹೊರಡಿಸಿ ಹಿಂದೂ ವಿದ್ಯಾರ್ಥಿಗಳು ವಂದೇಮಾತರಂ ಹಾಡುವುದನ್ನು ನಿಷೇಧಿಸಲಾಯಿತು.

ಆದರೆ ನಿಜಾಮ ಸರಕಾರದ ನಿಯಮ ಪಾಲಿಸದ ವಿದ್ಯಾರ್ಥಿಗಳನ್ನು ನಿಲಯದಿಂದ ಹೊರಹಾಕಲಾಯಿತು.[೮] ಇದರಿಂದಾಗಿ ೩೦ನೇ ನವೆಂಬರ್ ೧೯೩೮ರಲ್ಲಿ ಸರ್ಕಾರದ ವಿರುದ್ಧ ಮುಷ್ಕರ ಪ್ರಾರಂಭಿಸಿದರು. ಈ ವಂದೇಮಾತರಂ ಚಳವಳಿಯಿಂದಾಗಿ ನಿಜಾಮ ಸರಕಾರ ವಿದ್ಯಾರ್ಥಿಗಳನ್ನು ಬಂಧಿಸಿತು. ಸುಮಾರು ೧೨೦೦ವಿದ್ಯಾರ್ಥಿಗಳಲ್ಲಿ, ಗುಲಬರ್ಗಾ ಇಂಟರ್ ಮೀಡಿಯಟ್ ಕಾಲೇಜಿನ ೩೧೦ ವಿದ್ಯಾರ್ಥಿಗಳು ಸೇರಿದ್ದರು. ಇದರಲ್ಲಿ ಸರ್ದಾರ ಶರಣಗೌಡ ಇನಾಮದಾರ್, ವಿಶ್ವನಾಥರಡ್ಡಿ ಮುದ್ನಾಳ, ಜಗನಾಥರಾವ್ ಚಂದ್ರಕಿ, ಆರ್.ವಿ. ಬಿಡಪ, ಚನ್ನಬಸಪ್ಪ ಕುಳಗೇರಿ, ಜಯತೀರ್ಥರಾಜ ಪುರೋಹಿತ, ನಾರಾಯಣ ಕನಿಹಾಳ್, ಆರ್.ಎಂ. ಗಂಗಾವತಿ ಮೊದಲಾದವರು ಚಳವಳಿಯಲ್ಲಿದ್ದರು ಪಾಟೀಲ (೨೦೦೨:೧೦೫), ಮಹಾಬಲೇಶ್ವರಪ್ಪ (೨೦೦೮:೬೦-೬೧)), ಹೇಜೀಬ್ (೨೦೦೧:೧೪೬-೧೭೦), ಭಾಸ್ಕರ್ (೨೦೦೫:೨೫೮) ಮುಂತಾದ ಕೃತಿಕಾರರು ತಮ್ಮ ಕೃತಿಯಲ್ಲಿ ಒಮ್ಮತ ಅಭಿಪ್ರಾಯ ಹೊಂದಿದ್ದಾರೆ.

ಈ ರೀತಿಯದಾಗಿ ವಿದ್ಯಾರ್ಥಿಗಳನ್ನು ಶಾಲೆಗೆ ಬದಲು ಸೆರೆಮನೆಗೆ ತಳ್ಳಿ ಉಗ್ರಶಿಕ್ಷೆಯನ್ನು ನೀಡಿತು. ಆಗ ಅನೇಕ ಸಂಘಟನೆಗಳು ರಕ್ಷಣೆಗೆ ಬಂದವು.[೯]

ಹಾಗೆಯೇ ಶಿಕ್ಷಣ ಸಂಸ್ಥೆಗಳಾದ ನೂತನ ವಿದ್ಯಾಲಯ, ಕುಕನೂರಿನ ವಿದ್ಯಾನಂದ ಗುರುಕುಲ್, ರಾಯಚೂರಿನ ಹಮದರ್ದ್ ಶಿಕ್ಷಣಸಂಸ್ಥೆ, ಮತ್ತು ರಾಷ್ಟ್ರ ಗ್ರಂಥಾಲಯ ಸಂಘಗಳು, ಸಹ ಪ್ರೋತ್ಸಾಹ ನೀಡಿದವು ಅದರಲ್ಲಿ ಶರಣಬಸವೇಶ್ವರ ವಾಚನಾಲಯ, ಭಾರತ ವಾಚನಾಲಯ, ಹುತಾತ್ಮ ದಾಸಪ್ಪ ವಾಚನಾಲಯ, ಹಾಗೂ ಪತ್ರಿಕೆಗಳು ಕರ್ನಾಟಕ ಹರಿಜನ, ಲೋಕಮತ, ಕೇಸರಿ, ಮರಾಠ, ನಾಗರಿಕ, ಸಂಜೀವಿನಿ, ಶರಣಸಂದೇಶ, ಲೋಕಮಲ್, ನಿಜಾಮ ಸರಕಾರದ ನೀತಿಗೆ ವಿರೋಧಿಸಿ ವಂದೇಮಾತರಂ ಚಳವಳಿಗೆ ಬೆಂಬಲ ನೀಡಿದವು. ಕೂಡಲೇ ನಿಜಾಮನು ಸಂಘಸಂಸ್ಥೆಗಳಿಗೆ ಪತ್ರಿಕೆಗಳಿಗೆ, ವ್ಯಕ್ತಿಗಳ ಮೇಲೆ ನಿರ್ಬಂಧ ಹೇರಿದನು ಎಂದು ಪಾಟೀಲ್‌ರ (೧೯೯೯:೧೫೭) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

ದೇಶದ ತುಂಬಾ 'ವಂದೇಮಾತರಂ' 'ಜೈಹಿಂದ್' ಎಂಬ ವಾಕ್ಯಗಳೂ ಮುಗಿಲು ಮುಟ್ಟಿದರೆ ಹೈದರಾಬಾದ್ ಸಂಸ್ಥಾನದ ಆಡಳಿತದ ಕಪಿಮುಷ್ಠಿಯಲ್ಲಿದ್ದ ಗುಲಬರ್ಗಾ, ರಾಯಚೂರು, ಬೀದರ್ ಜಿಲ್ಲೆ ಲಕ್ಷಾಂತರ ಜನರು ಗುಲಾಮಗಿರಿಯಿಂದ ಹೊರಬಂದಿರಲಿಲ್ಲ. ಇದರಿಂದ ಹೆಣ್ಣು ಗಂಡು ಕೂಡಿಕೊಂಡೆ ನಿಜಾಮ ಸರಕಾರದ ವಿರುದ್ಧ ಚಳವಳಿಯನ್ನ ಆರಂಬಿಸಿದರು. ಹಿಂದೂಗಳ ಮೇಲೆ ಅತ್ಯಾಚಾರ ಆಸ್ತಿಪಾಸ್ತಿ ಲೂಟಿ ಮಾಡಬೇಕೆಂದೇ ಹುಟ್ಟಿಕೊಂಡ ಇತ್ತೆಹಾದ್‌ದ ರಜಾಕಾರರು ವಿರುದ್ಧ ಗುಲಬರ್ಗಾದಲ್ಲಿ ಸ್ವಾಮಿ ರಮಾನಂದ ತೀರ್ಥರು, ಪೂಜ್ಯದೊಡ್ಡಪ್ಪ ಅಪ್ಪ, ಸರ್ದಾರ್ ಶರಣಗೌಡ ಇನಾಮದಾರ್, ಬಾಹುಸಾಹೇಬ್ ದೇವಾಳಗಾಂವಕರ್, ಚಂದ್ರಶೇಖರ ಪಾಟೀಲ

ಮಹಾಗಾಂವ, ವೀರಣ್ಣ ತಿಮ್ಮಾಜೀ, ಡಿ.ಬಿ.ಕಲ್ಮಣಕರ್, ಪೇಂಟರ್ ಪರೂತೆ, ದತ್ತಾತ್ರೇಯ ಅವರಾದಿ, ಗಿರಿಯಪ್ಪಗೌಡ ಪಾಟೀಲ, ಚನ್ನಬಸಪ್ಪ ಕುಳಗೇರಿ ಮುಂದಾದ ಸಾವಿರಾರು ಜನರು ನಿಜಾಮನ ಕಪಿಮುಷ್ಠಿಯಿಂದ ಮುಕ್ತಿ ಹೊಂದಲು ಹೋರಾಟ ಕೈಗೊಂಡರು ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೭೭:೮೬), ಕಲುಬುರ್ಗಿ ಜಿಲ್ಲಾ ದರ್ಶನ (೨೦೦೮:೨೬೦), ಕೃತಿಯಲ್ಲಿ ಮೇಲಿನ ಹೋರಾಟಗಾರರ ಪರಿಶ್ರಮದ ಬಗ್ಗೆ ವಿವರಿಸಿದ್ದಾರೆ. ಈ ಎಲ್ಲಾ ಚಳವಳಿಯ ಕೇಂದ್ರಸ್ಥಳ ಶರಣಬಸವೇಶ್ವರ ಸಂಸ್ಥಾನವು ಆಗಿತ್ತು ಎಂದು ಪಾಟೀಲ (೨೦೦೨:೧೦೬) ತಮ್ಮ ಕೃತಿಯಲ್ಲಿ ನಮೂದಿಸಿದ್ದಾರೆ.

ವಂದೇಮಾತರಂ ಹೋರಾಟದ ನಾಯಕ ರಾಮಚಂದ್ರರಾವ್ ಇವರ ಸ್ಫೂರ್ತಿಯೇ ಗುಲಬರ್ಗಾದಲ್ಲಿ ವಂದೇಮಾತರಂ ಚಳವಳಿ ಪುಷ್ಠಿ ನೀಡಿತು. ಅಲ್ಪಕಾಲದಲ್ಲಿ ವಂದೇಮಾತರಂ ಹಾಡುವುದು ಒಂದು ಬೃಹತ್ತ ಚಳವಳಿಯ ರೂಪದಲ್ಲಿ ಎಲ್ಲೆಡೆ ಹರಡಿತು. ಗುಲಬರ್ಗಾದಲ್ಲಿ ಸಭೆಸೇರಿ ಹೈದರಾಬಾದ್ ಕಾಂಗ್ರೆಸ್ ಸಂಸ್ಥೆಯನ್ನ ಪ್ರತಿಬಂಧಗೊಳಿಸಿದ್ದರಿಂದ ಕರ್ನಾಟಕ ಪರಿಷತ್ತು ಎಂದು ಹೆಸರು ಬದಲಾಯಿಸಿ ಜನಾರ್ಧನ್‌ರಾವ್ ದೇಸಾಯಿ ಅವರ ನೇತೃತ್ವದಲ್ಲಿ ತಮ್ಮ ಚಟುವಟಿಕೆಗಳನ್ನು ಮುಂದುವರಿಸಿದರು. ವಂದೇಮಾತರಂ ಎಷ್ಟು ಪ್ರಭಾವ ಬೀರಿತು ಎಂದರೆ ಪ್ರಾತಃ ಕಾಲದಲ್ಲಿ ಪರಸ್ಪರ ಭೇಟಿಯಾದಾಗ 'ವಂದೇಮಾತರಂ' ಎಂದು ಒಬ್ಬರನೊಬ್ಬರು ವಂದಿಸುತ್ತಿದ್ದರು. ಈ ರೀತಿಯಾಗಿ ವಂದೇಮಾತರಂ ಚಳವಳಿಯು ಬೃಹತ್ ಚಳವಳಿಯಾಗಿ ಹೊಂದಿ ನಿಜಾಮನ ಸರಕಾರದ ಬುಡವನ್ನೇ ಆಲುಗಾಡಿಸಿತು. ಜೊತೆಗೆ ಹೈದರಾಬಾದ್ ಜನತೆಗೆ ಹೋರಾಡಲು ಪ್ರೇರಣೆಯನ್ನ ನೀಡಿತು. ಎರಡು ವರ್ಷಗಳ ನಂತರ ವಿದ್ಯಾರ್ಥಿಗಳ ಚಳವಳಿಗೆ ಮಣಿದು ನಿಜಾಮ ಸರಕಾರ ವಂದೇಮಾತರಂ ನಿಷೇಧವನ್ನ ಹಿಂದಕ್ಕೆ ಪಡೆಯಿತು. ಇದರಿಂದ ಚಳವಳಿಗಾರರಲ್ಲಿ ಆತ್ಮವಿಶ್ವಾಸ ಮೂಡಿತು ಎಂದು ಪಾಟೀಲ (೨೦೦೨:೧೧೨), ಮಹಾಬಲೇಶ್ವರಪ್ಪ (೨೦೦೮:೬೨), ರಾಘವೇಂದ್ರ ಪ್ರಭು (೧೯೯೯:೨೯೬-೩೦೧), ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೭೭:೮೬) ತಮ್ಮ ಕೃತಿಗಳಲ್ಲಿ ತಿಳಿಸಿದ್ದಾರೆ.

**ಕ್ವಿಟ್ ಇಂಡಿಯಾ ಚಳವಳಿ**

ಬ್ರಿಟಿಷ ರೆಸಿಡೆಂಟನು ಪರೋಕ್ಷವಾಗಿ ನಿಜಾಮನ ಮುಖೇನ ಸಂಸ್ಥಾನದ ಆಡಳಿತ ಮೇಲೆ ಹತೋಟಿಯನ್ನು ಹೊಂದಿದ್ದರು. ಹೈದರಾಬಾದ್ ರಾಜ್ಯದಲ್ಲಿ ಸಾಮಾನ್ಯ ಜನತೆ ಯಾವುದೇ ಬಹಿರಂಗ ವಿರೋಧ ಮಾಡುವುದು ದುಸ್ಸಾಧ್ಯವಾಗಿತ್ತು. ಇದಲ್ಲದೇ ನಿಜಾಮನ ಸರಕಾರವೋ ಇನ್ನೂ ಹೈದರಾಬಾದ್ ಕಾಂಗ್ರೆಸ್ ಮೇಲಿನ ನಿಷೇಧವನ್ನು ಮುಂದುವರೆಸಿತ್ತು. ಆದರೆ ಈ ವೇಳೆಗಾಗಲೇ ರಾಷ್ಟ್ರೀಯ ಭಾವನೆ ಜಿಲ್ಲೆಯಾದ್ಯಂತ ವ್ಯಾಪಕವಾಗಿ ಪ್ರಸರಿಸಿತು. ರಾಜ್ಯ ಶಿಕ್ಷಣ ಕ್ಷೇತ್ರದಲ್ಲೂ ರಾಷ್ಟ್ರೀಯ ಧ್ಯೇಯೋದ್ದೇಶಗಳನ್ನು ಗುರಿಯಾಗಿ ಹೊಂದಿದ್ದ ಕೆಲವು

ದೇಶಿಯ ವಿದ್ಯಾ ಸಂಸ್ಥೆಗಳು ಹಿಂದೆಯೇ ಅಸ್ತಿತ್ವಕ್ಕೆ ಬಂದಿದ್ದವು. ಗುಲಬರ್ಗಾದಲ್ಲಿಯೇ ವಿಠಲರಾವ್ ದೇವುಳಗಾಂವಕರ ನೂತನ ವಿದ್ಯಾಲಯವು ೧೯೦೭ರಲ್ಲಿ ಸ್ಥಾಪಿತವಾಯಿತು. ಸಾರ್ವಜನಿಕ ಗ್ರಂಥಾಲಯ ಚಳವಳಿಯೂ ಆರಂಭವಾಗುವುದರ ಮುಖಾಂತರ ಗುಲಬರ್ಗಾದಲ್ಲಿ ಸಾರ್ವಜನಿಕ ಗ್ರಂಥಾಲಯವು ಇವರ ಪ್ರಯತ್ನದಿಂದಲೇ ಪ್ರಾರಂಭವಾಯಿತು. ಗುಲಬರ್ಗಾದಲ್ಲಿ ಶರಣಬಸವೇಶ್ವರ ಸಂಸ್ಥಾನದಲ್ಲಿ ಶರಣಬಸವೇಶ್ವರ ವಾಚನಾಲಯವನ್ನು ೧೯೧೮ರಲ್ಲಿ ಆರಂಭಿಸಲಾಯಿತು. ಮತ್ತು ಚಿಂಚೋಳಿಯಲ್ಲಿ ರಾಷ್ಟ್ರೀಯ ಶಾಲೆಯ ಆರಂಭವಾಯಿತು ಸೂರ್ಯನಾಥ ಕಾಮತ್‌ರು (೨೦೦೫:೨೫೦–೨೫೫) ತಮ್ಮ ಕೃತಿಯಲ್ಲಿ ಮೇಲಿನ ವಿಷಯದ ಬಗ್ಗೆ ಸವಿಸ್ತಾರವಾಗಿ ತಿಳಿಸಿದ್ದಾರೆ. ಹಾಗೆಯೇ ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ಸಂಪುಟ–೨ (೧೯೭೭:೮೭೫) ಕೃತಿಯಲ್ಲಿ ಮೇಲಿನ ಹೇಳಿಕೆಯನ್ನು ಪುರಸ್ಕರಿಸಿದ್ದಾರೆ.

ಗಾಂಧೀಜಿಯವರು ಆರಂಭಿಸಿದ ಭಾರತ ಬಿಟ್ಟು ತೋಲಗಿ ಚಳವಳಿ ಹಿಂದೂಸ್ಥಾನದಲ್ಲಿ ಬ್ರಿಟಿಷರ ಆಡಳಿತದ ತಳಹದಿಯನ್ನು ಅಲುಗಾಡಿಸಿತು. ಗಾಂಧೀಜಿಯವರು 'ಮಾಡು ಇಲ್ಲವೇ ಮಡಿ' ಎಂಬ ಘೋಷಣೆ ಜನರನ್ನು ಬಡಿದೆಬ್ಬಿಸಿತು. ೧೯೪೨ ಆಗಸ್ಟ್ ೯ರಂದು ಪ್ರಾರಂಭವಾದ ಕ್ವಿಟ್ ಇಂಡಿಯಾ ಹೋರಾಟ ದೇಶ ಬೇರೆ ಬೇರೆ ಭಾಗಗಳಲ್ಲಿ ವಿವಿಧ ರೂಪ ತಳೆಯಿತು.[೧೦] ಹೈದರಾಬಾದ್ ಸಂಸ್ಥಾನವು ಸಹ ಈ ಚಳಿವಳಿಯಿಂದ ಪ್ರಭಾವ ಉಂಟುಮಾಡಿತು. ಈ ಚಳವಳಿಯಿಂದ ಹೈದರಾಬಾದ್ ಸಂಸ್ಥಾನ ತಪ್ಪಿಸಿಕೊಳ್ಳುವಂತಿರಲಿಲ್ಲ. ರಾಜ್ಯ ಕಾಂಗ್ರೆಸ್ ಮೇಲೆ ನಿಷೇಧವಿದ್ದುದರಿಂದ ಮತ್ತು 'ಮೊಗಲಾಯಿ' ಅಧಿಕಾರಿಗಳು ಧಮನಕಾರಕ ಕಾನೂನುಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರಿಂದ ಮತ್ತು ರಜಾಕಾರರ ಕ್ರೂರ ಕೃತ್ಯಗಳಿಂದಾಗಿ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಈ ಚಳವಳಿ ಗುಲಬರ್ಗಾ ಜಿಲ್ಲೆಯ ಭೊಗತ ಚಟುವಟಿಕೆಗಳಿಂದ ಮೀಸಲಾಗಿಬಿಟ್ಟಿತು. ಗುಲಬರ್ಗಾದ ಡಿ. ಆರ್. ಅವರಾದಿ, ಮಹಾಗಾಂವನ ಚಂದ್ರಶೇಖರ ಪಾಟೀಲ, ಜಗನ್ನಾಥರಾವ್ ಚಂದ್ರಿಕೆ, ಚಟ್ನಹಳ್ಳಿ ವೀರಣ್ಣ, ಕಲ್ಲೂರು ಮಲ್ಲಪ್ಪ, ಯಾದಗಿರಿಯ ವಿಶ್ವನಾಥರಡ್ಡಿ ಮುದ್ನಾಳ ಮುಂತಾದವರು ನಿಜಾಮ ಸರಕಾರದ ವಿರುದ್ಧ ಪ್ರತಿಭಟನೆ ಮಾಡಿ ಬಂಧಿತರಾದರು.[೧೧] ಪ್ರತಿಯೊಬ್ಬ ಬಂಧಿತ ಅಪರಾಧಿಗೂ ೨೦೦ ರೂಪಾಯಿ ದಂಡಹಾಕಿ ಗುಲಬರ್ಗಾ, ಬೀದರ, ರಾಯಚೂರು, ಹೈದರಾಬಾದ್ ಮತ್ತು ಔರಂಗಬಾದ್ ಕೇಂದ್ರ ಕಾರಾಗೃಹದಲ್ಲಿ ಬಂಧಿಸಿದರು. ಧಾರ್ಮಿಕ ಸ್ವಾತಂತ್ರ್ಯಕ್ಕಾಗಿ ಹಾಗೂ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಹೋರಾಡಲು ಜನರನ್ನು ಪ್ರಚೋದಿಸುವ ಸಲುವಾಗಿ ರಾಷ್ಟ್ರೀಯವಾದಿಗಳು ಭೋಗತರಾಗಿ ಗಣೇಶ ಹಾಗೂ ದಸರಾ ಹಬ್ಬಗಳನ್ನು ಒಳಸಿಕೊಂಡರು ಪಾಟೀಲ (೧೯೯೭:೮೮–೮೯), ಷೇಕ್ ಅಲಿ (೧೯೯೭:೨೦೭–೨೧೧), ಪಾಟೀಲ (೧೯೯೯:೧೫೮), ಭಾಸ್ಕರ್ (೨೦೦೫:೨೩೯), ಮಹಾಬಲೇಶ್ವರಪ್ಪ (೨೦೦೮:೬೩) ಕೃತಿಗಳಲ್ಲಿ ಒಂದೇ ನಿಲುವನ್ನು ವ್ಯಕ್ತಪಡಿಸಿದ್ದಾರೆ.

ದೇಶಭಕ್ತ ಹೋರಾಟಗಾರರು ಭಾರತ ಬಿಟ್ಟು ತೊಲಗಿ ಚಳವಳಿಯ ಕಾಲದಲ್ಲಿ ಬ್ರಿಟಿಷ್ ಸರ್ಕಾರದ ಹಾಗೂ ನಿಜಾಮನ ವಿರುದ್ಧ ಇದ್ದ ಜನರ ಆಕ್ರೋಶವನ್ನು ಪೋಸ್ಟರುಗಳ ಮೂಲಕ ಕರಪತ್ರಗಳನ್ನು ರಾತ್ರಿ ವೇಳೆ ಹಂಚುವುದರ ಮೂಲಕ ವ್ಯಕ್ತಪಡಿಸುತ್ತಿದ್ದರು. ಇದಲ್ಲದೆ ಅಂಚೆಕಛೇರಿ ಹಾಗೂ ರೈಲ್ವೆ ನಿಲ್ದಾಣ, ಸೇಂದಿ ಅಂಗಡಿಗಳನ್ನು ಲೂಟಿ ಮಾಡಿ ಈಚಲು ಮರಗಳನ್ನು ಕಡಿಯುತ್ತಿದ್ದರು. ಪೊಲೀಸ್ ಕಾವಲಿನ ಹದ್ದಿನ ಕಣ್ಣನ್ನು ತಪ್ಪಿಸಿ ಸೂರ್ಯಾಸ್ತದ ನಂತರ ಶಿಕ್ಷಣ ಸಂಸ್ಥೆಗಳ ಮೇಲೆ ಹಾಗೂ ಸರಕಾರದ ಕಟ್ಟಡಗಳ ಮೇಲೆ ರಾಷ್ಟ್ರಧ್ವಜ, ಓಂ ಧ್ವಜ ಹಾಗೂ ಭಗವಾಧ್ವಜಗಳನ್ನು ಹಾರಿಸುವುದರ ಮುಖಾಂತರ ಸತ್ಯಾಗ್ರಹಿಗಳು ಜನರ ಮನಸ್ಸಿನಲ್ಲಿ ರಾಜಕೀಯ, ಧಾರ್ಮಿಕ ಪ್ರಜ್ಞೆ ಮೂಡುವಂತೆ ಮಾಡುತ್ತಿದ್ದರು ಎಂದು ಮಹಾಬಲೇಶ್ವರಪ್ಪ (೨೦೦೮:೬೩-೬೪), ಸೂರ್ಯನಾಥ ಕಾಮತ್ (೧೯೮೪:೨೯೦-೨೯೨) ತಮ್ಮ ಕೃತಿಗಳಲ್ಲಿ ತಿಳಿಸಿದ್ದಾರೆ.

ಹೀಗೆ ಗುಲಬರ್ಗಾ ಪ್ರದೇಶದ ಮೇಲೆ ಕ್ವಿಟ್ ಇಂಡಿಯಾ ಚಳವಳಿಯೂ ಪ್ರಭಾವವನ್ನು ಬೀರಿದನ್ನು ಕೆಲ ಕೃತಿಗಳಲ್ಲಿ ನಮೂದಿಸಿರುವುದನ್ನು ನೋಡಬಹುದು. ಈ ರೀತಿಯಾಗಿ ಗುಲಬರ್ಗಾ ಪ್ರದೇಶದ ಮೇಲೆ ಸ್ವಾತಂತ್ರ್ಯ ಹೋರಾಟದ ಪ್ರಭಾವ ಬೀರಿತು. ಹಾಗೇಯೇ ಆರ್ಯಸಮಾಜವು ಸಹಗಣನೀಯವಾದ ಹೋರಾಟ ಮಾಡಿದ್ದು, ಅದರ ಪಾತ್ರ ಹೀಗಿದೆ.

## ಆರ್ಯ ಸಮಾಜ

ಆರ್ಯ ಸಮಾಜದ ಪಾತ್ರವು ಸಹ ಹೈದರಾಬಾದ್ ಸಂಸ್ಥಾನದ ವಿಮೋಚನೆಯಲ್ಲಿ ಪ್ರಮುಖ ಪಾತ್ರ ವಹಿಸಿತು. ೧೮೫೭ರಲ್ಲಿ ದಯಾನಂದ ಸರಸ್ವತಿಯವರಿಂದ ಪ್ರಾರಂಭಿಸಲ್ಪಟ್ಟ ಆರ್ಯಸಮಾಜವು ಸಮಾಜಿಕ, ರಾಜಕೀಯ, ಪುನರುತ್ಥಾನವನ್ನು, ಸಂಘಟನೆ, ರಾಷ್ಟ್ರೀಯ ಭಾವನೆ ಮತ್ತು ಚಳವಳಿಯ ಚಾಲನ ಶಕ್ತಿಯಾಗಿ ಕಾರ್ಯನಿರ್ವಹಿಸಿತು. ರಜಾಕಾರರ ಮತಾಂತರದಿಂದಾಗಿ ಹಿಂದೂ ಧರ್ಮ ಅವನತಿ ಹಾದಿ ಹಿಡಿಯಿತು. ಮತಾಂತರ ವಿರುದ್ಧ ನಡೆದ ಹೋರಾಟದಲ್ಲಿ ಆರ್ಯ ಸಮಾಜದ ಪಾತ್ರ ಅವಿಸ್ಮರಣೀಯ, ಅಲ್ಲದೆ ಅಸ್ಪೃಶ್ಯತೆಯ ವಿರುದ್ಧ ಚಳವಳಿ, ವಿಧವಾ ವಿವಾಹಕ್ಕೆ ಪ್ರೋತ್ಸಾಹ ನೀಡಿತ್ತು. ೧೯೨೬-೨೭ರ ವೇಳೆಗೆ ಆರ್ಯ ಸಮಾಜದ ಕಾರ್ಯಕರ್ತರು ಗುಲಬರ್ಗಾ, ಮಹಾಗಾಂವ್, ಚಿಂಚೋಳಿ, ಯಾದಗಿರಿ, ಆಳಂದ, ಮುಂತಾದ ಕಡೆ ಆರ್ಯ ಸಮಾಜದ ಮಂದಿರಗಳು ಸ್ಥಾಪನೆಯಾದವು.[೨] ಗುಲಬರ್ಗಾದಲ್ಲಿ ಚಂದ್ರಶೇಖರ್ ಪಾಟೀಲ್ ಅಮರಸಿಂಹ ರಾಥೋಡ್, ವೈಜನಾಥ ಇರ್ವಿ, ದತ್ತಾತ್ರೇಯರಾವ್ ಅವರಾದಿ, ಚಿಂಚೋಳಿಯ ಅನಂತಶರ್ಮ, ವೀರ ಪ್ರಕಾಶ ಗುಂಜೋಡಿ ಮತ್ತು ಆರ್. ವಿ. ಬಿಡಪ ಮುಂತಾದವರು ಆರ್ಯ ಸಮಾಜದ ಚಳವಳಿಯಲ್ಲಿ ಧುಮುಕಿದರು.

ಗುಲಬರ್ಗಾದಲ್ಲಿ ಆರ್ಯ ಸಮಾಜದ ಚಟುವಟಿಕೆಗಳೂ ಭರದಿಂದ ಸಾಗಿದ್ದವು. ೧೯೩೮ರ ಹೋಳಿ ಹಬ್ಬದ ಸಂದರ್ಭದಲ್ಲಿ ಮುಸ್ಲಿಮರ ದಂಗೆಯಾಯಿತು ಒಬ್ಬ ಮುಸ್ಲಿಮ್ ಹತನಾದನು.

ವಿಜಯಪಾಲ, ಹಣಮಂತರಾವ, ಭೈರವಲಾಲ ಮತ್ತು ಶರಣಪ್ಪ ಗುಲಬರ್ಗಾ ನ್ಯಾಯಾಲಯ ಅವರಿಗೆ ಹತ್ತು ವರ್ಷಗಳ ಜೈಲು ಶಿಕ್ಷೆ ವಿಧಿಸಿತು. ಈ ಸಂದರ್ಭದಲ್ಲಿ ಗುಲಬರ್ಗಾ ಕೇಂದ್ರ ಕಾರಾಗೃಹವು ಆರ್ಯ ಸಮಾಜದ ಸತ್ಯಾಗ್ರಹಿಗಳಿಂದ ತುಂಬಿ ಹೋಗಿತ್ತು. ರಾಮಸ್ವಾಮಿ (೧೯೯೮:೨೦೪), ಹೇಜೀಬ್ (೨೦೦೧:೧೫೩-೫೭), ಮಹಾಬಲೇಶ್ವರಪ್ಪ (೨೦೦೮:೩೮) ಇವರ ಕೃತಿಗಳಲ್ಲಿ ತಿಳಿಸಿದ್ದಾರೆ.

ಈ ರೀತಿಯಾಗಿ ಆರ್ಯ ಸಮಾಜವು ಅನೇಕ ನಾಯಕರು ಹೊಂದಿದ್ದು ನಿಜಾಮನ ವಿರುದ್ಧ ಹೋರಾಡುವುದರ ಮುಖಾಂತರ ಜನರಲ್ಲಿ ರಾಷ್ಟ್ರೀಯ ಜಾಗೃತಿಯನ್ನು ಮೂಡಿಸಿದರು ಹಾಗೂ ಕೆಲವರು ತಮ್ಮ ಪ್ರಾಣವನ್ನೆ ಸಮರ್ಪಣೆಯನ್ನು ಮಾಡಿದರು.

೩. ಸುರಪುರದ ಬಂಡಾಯ

ಗುಲಬರ್ಗಾ ಜಿಲ್ಲೆಯ ಸುರಪುರ ಕೂಡಾ ಬೇಡರ ಸಂಸ್ಥಾನವಾಗಿತ್ತು. ವಿಜಯನಗರೋತ್ತರ ಕಾಲದಲ್ಲಿ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯಲ್ಲಿ ತನ್ನದೆ ಆದ ಸ್ಥಾನ ಪಡೆದುಕೊಂಡಿತ್ತು. ಸುರಪುರದ ನಾಯಕರು, ಕಂಪನಿ ಸರಕಾರದ ಹತೋಟಿಗೆ ಒಳಪಡುವುದಕ್ಕೆ ತಮ್ಮ ವಿರೋಧವನ್ನು ವ್ಯಕ್ತಪಡಿಸಿದರು. ನಾಲ್ವಡಿ ವೆಂಕಟಪ್ಪ ನಾಯಕನು ೧೮೪೧ರಲ್ಲಿ ಸುರಪುರ ಸಂಸ್ಥಾನದ ನಾಯಕನಾಗಿ ಅಧಿಕಾರಕ್ಕೆ ಬಂದನು. ಆತನು ಅಪ್ರಾಪ್ತ ವಯಸ್ಕನಾದ ಕಾರಣ ಬ್ರಿಟಿಷರು ಈ ಸಂಸ್ಥಾನಕ್ಕೆ ಮೇಡೋಸ್ ಟೇಲರ್‌ನನ್ನು ರಾಜಕೀಯ ಪ್ರತಿನಿಧಿಯಾಗಿ ನೇಮಿಸಿದರು. ಮೇಡೋಸ್ ಟೇಲರ್‌ನು ವೆಂಕಟಪ್ಪನಾಯಕನಿಗೆ ಶಿಕ್ಷಣ ಹಾಗೂ ರಾಜ್ಯಾಡಳಿತದಲ್ಲಿ ಸೂಕ್ತ ತರಬೇತಿ ನೀಡುವುದು ಈ ರಾಜ್ಯದ ರಾಜಕೀಯ ಪ್ರತಿನಿಧಿಯ ಜವಾಬ್ದಾರಿಯಾಗಿತ್ತು. ವಯಸ್ಸಿಗೆ ಬಂದ ನಂತರ ವೆಂಕಟಪ್ಪನಾಯಕನು ಕ್ರಿ.ಶ ೧೮೫೩ರಲ್ಲಿ ಆಡಳಿತ ಸೂತ್ರವನ್ನು ವಹಿಸಿಕೊಂಡನು. ನಂತರ ಗೋಪ್ಯ ಸೈನ್ಯ ಬಲವರ್ಧನೆಯ ಬಗೆಗೆ ಮಾಹಿತಿ ಇತ್ತೆಂದು ತಿಳಿದು ತಮ್ಮ ವಿರುದ್ಧ ದಂಗೆ ಎಬ್ಬಿಸಲು ಹವಣಿಸುತ್ತಿರುವ ಹಾಗೂ ದುರಾಡಳಿತ ಆರೋಪದ ಮೇಲೆ ಬ್ರಿಟಿಷರ ದಾಳಿಯನ್ನೇ ಮಾಡಿದರು" ಎಂದು ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರನಲ್ಲಿ (೧೯೯೭:೮೧) ಪೂಜಾರ (೨೦೦೫:೬೧) ಕೃತಿಯಲ್ಲಿ ಹಣದ ಭಿನ್ನಾಭಿಪ್ರಾಯದಿಂದ ದಂಗೆ ಹುಟ್ಟಿತ್ತು ಎಂಬ ಅಭಿಪ್ರಾಯಪಟ್ಟಿದ್ದಾರೆ. ಹೇಜೀಬ್ ಅವರು ರಾಷ್ಟ್ರಪ್ರೇಮ, ಸ್ವಾಭಿಮಾನದ ಬಗ್ಗೆ (೨೦೦೧:೬೯-೭೦) ತಮ್ಮ ಕೃತಿಯಲ್ಲಿ ಪ್ರಸ್ತಾಪವನ್ನು ಮಾಡಿದ್ದಾರೆ.

ಸುರಪುರ ಸಂಸ್ಥಾನದಲ್ಲಿ ೨೦೦೦೦ಕ್ಕೂ ಅಧಿಕ ಸಂಖ್ಯೆ ಆಸ್ತಿ ಪಾಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳಲು ಡಾಲಹೌಸಿಯು ನಿರ್ದೇಶಿಸಿದ. ಸುರಪುರ ಸಂಸ್ಥಾನವು ಈ ಆರ್ಥಿಕ ನಿಬಂಧವನ್ನು ಒಪ್ಪಿಕೊಳ್ಳಲು ನಿರಾಕರಿಸಿ ಅಷ್ಟೆ ಅಲ್ಲದೆ ತನ್ನ ಸಂಸ್ಥಾನದ ಆಂತರಿಕ ವ್ಯವಹಾರದಲ್ಲಿ ಬ್ರಿಟಿಷರ

ಹಸ್ತಕ್ಷೇಪ ಮಾಡುವುದು ವೆಂಕಟಪ್ಪ ನಾಯಕನು ಪ್ರಬಲವಾಗಿ ವಿರೋಧಿಸಿದನು. ೧೮೫೭ರ ದಂಗೆಯಲ್ಲಿ ಸುರಪುರ ನಾಯಕ, ಆನೆಗುಂದಿಯ ರಾಜ, ಡಂಬಳ, ಸೂರಟೂರು, ಗೋವಾ, ಕೊಪ್ಪಳ, ನವಾಬ ಜೊತೆ ಸಂಚು ನಡೆಸಿ ಬಂಡಾಯ ಸಿದ್ಧತೆ ನಡೆಸಿದರು. ಸಂಸ್ಥಾನದಲ್ಲಿ ಪ್ರಬಲ ದಂಗೆಯಾಗಬಹುದು ಎಂಬ ಆಲೋಚನೆಯಿಂದ ಬ್ರಿಟಿಷ ಸರಕಾರ ಕ್ಯಾಪ್ಟನ್ ಬ್ಯಾರಿ ನೇತೃತ್ವದಲ್ಲಿ ಸೈನಿಕ ತುಕಡಿಯನ್ನು ಸುರಪುರಕ್ಕೆ ಕಳಿಸಿತು. ಈ ದಾಳಿಯನ್ನ ಧೈರ್ಯವಾಗಿ ಎದುರಿಸಿ ಕ್ಯಾಪ್ಟನ್ ಬ್ಯಾರಿಯನ್ನು ಕೊಲ್ಲಲಾಯಿತು. ಇನ್ನೊಬ್ಬ ಪ್ರಬಲ ಸೈನ್ಯದಿಂದ ದಾಳಿ ನಡೆಸಿ ಸುರಪುರ ಕೋಟೆಯನ್ನು ಮುತ್ತಿಗೆ ಹಾಕಿದರು. ಸುರಪುರ ಬೇಡರು, ನರಗುಂದದ ಬಾಬಸಾಹೇಬ್ ಮತ್ತು ಮುಂಡರಗಿ ಭೀಮರಾಯ ಜೊತೆ ಪ್ರಬಲ ವಿರೋಧ ಒಡಿದ್ದರು. ಕೊನೆಗೆ ಸುರಪುರ ಸಂಸ್ಥಾನವು ಸೋಲಬೇಕಾಯಿತು. ಕೊನೆಗೆ ಹೈದರಾಬಾದಗೆ ಹೋದ ವೆಂಕಟಪ್ಪನಾಯಕನನ್ನು ಅಲ್ಲಿಯೇ ಬಂಧಿಸಲಾಯಿತು. ಈತನ ಮೇಲೆ ಹಲವಾರು ಆರೋಪಗಳು ಹೊರಿಸಿ ೪ವರ್ಷ ಶಿಕ್ಷೆಯನ್ನು ವಿಧಿಸಿತ್ತು. ಇದರಿಂದ ಅವಮಾನ ಸಹಿಸಲಾರದೆ ರಿವಾಲ್ವಾರ್ ನಿಂದ ಗುಂಡು ಹಾರಿಸಿಕೊಂಡು ಆತ್ಮ ಹತ್ಯೆ ಮಾಡಿಕೊಂಡನು" ಎಂದು ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೮೧) ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ಇದೆ ಅಭಿಪ್ರಾಯವನ್ನು ಮಹಾಬಲೇಶ್ವರಪ್ಪ (೨೦೦೮:೧೪) ತಮ್ಮ ಕೃತಿಯಲ್ಲಿ ವ್ಯಕ್ತಪಡಿಸಿದ್ದಾರೆ. ಆದರೆ ೧೮೫೮ ಫೆಬ್ರವರಿ ೧೨ರಂದು ವೆಂಕಟಪ್ಪನಾಯಕನನ್ನು ಬಂದಿಸಿ ೭–೫–೧೮೫೮ರಲ್ಲಿ ಜೀವಾವಧಿ ಶಿಕ್ಷೆ ವಿಧಿಸಿತ್ತು. ಚಂಗಲ್ಪೇಟೆ ಸೆರೆಮನೆಗೆ ಒಯ್ಯುವಾಗ ಬ್ರಿಟಿಷರೆ ಇವನನ್ನು ಕೊಲೆಮಾಡಿದರು ಎಂದು ಪೂಜಾರ (೨೦೦೫:೬೩–೬೪) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ. ಇದೆ ಅಭಿಪ್ರಾಯ ಗೋಪಾಲರಾವ್ (೨೦೦೭:೬೪), ಸೂರ್ಯನಾಥ ಕಾಮತ್ (೨೦೦೫:೨೫೦), ಯೋಗೀಶ್ವರ (೨೦೧೦:೫೨) ತಮ್ಮ ಕೃತಿಯಲ್ಲಿ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

## ಸ್ಥಳೀಯ ಮಟ್ಟದ ಹೋರಾಟ

ಹೈದರಾಬಾದ್ ಕರ್ನಾಟಕ ಭಾಗದ ಜನರು ನಿಜಾಮನ ಪಾರತಂತ್ರ್ಯದಲ್ಲಿ ವಿಲಿವಿಲಿ ಒದ್ದಾಡುತ್ತಿತ್ತು. ಕ್ರಿಶ ೧೯೪೭ ಜೂನ ೧೬, ೧೭, ೧೮ ರಂದು ಏರ್ಪಡಿಸಿದ ಸಮಾವೇಶದಲ್ಲಿ ಸ್ವಾಮಿ ರಮಾನಂದತೀರ್ಥರು 'ರಾಜ್ಯದ ಸಾರ್ವಭೌಮ ಅಧಿಕಾರ ಜನರ ಕೈಯಲ್ಲಿದೆಯೇ ಹೊರತಾಗಿ ನವಾಬರಲಿಲ್ಲ' ಎಂಬ ಸಂಗತಿ ಪಾಟೀಲ್ (೨೦೦೨:೧೧೪) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ ಮಹಾಬಲೇಶ್ವರಪ್ಪ (೨೦೦೮:೭೮) ತಮ್ಮ ಕೃತಿಯಲ್ಲಿ ಪುರಸ್ಕರಿಸಿದ್ದಾರೆ.

ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳು ಆರಂಭಿಸುವ ಮೂಲಕ ರಾಜಕೀಯ, ಶೈಕ್ಷಣಿಕ ಹಾಗೂ ಮಾತೃಭಾಷೆಗಳು ಬೆಳವಣಿಗೆ ತರುವುದು ಹೋರಾಟದ ಒಂದು ಭಾಗವೇ ಆಗಿತ್ತು. ಗುಲಬರ್ಗಾದಲ್ಲಿ ನೂತನ ವಿದ್ಯಾಲಯ (೧೯೦೭)ಚಂಚೋಳಿಯಲ್ಲಿ ಉಸ್ಮಾನಿಯಾ ಮಾದ್ಯಮಿಕ ಶಾಲೆ (೧೯೧೦)

ಪ್ರಾರಂಭಿಸುವುದರ ಮುಖಾಂತರ ಧಾರ್ಮಿಕ, ರಾಜಕೀಯ, ಸಮಾಜಿಕ, ಪ್ರಜ್ಞೆಯನ್ನು ಮೂಡಿಸುವುದರ ಜೊತೆಗೆ ದೇಶಭಕ್ತಿ ಬೆಳೆಸುವುದಾಗಿತ್ತು. ಶ್ರೀಶರಣಬಸವೇಶ್ವರ ಸಂಸ್ಥಾನದ ಪೀಠಾಧಿಪತಿಗಳಾದ ಪೂಜ್ಯದೊಡ್ಡಪ್ಪಾ ಅಪ್ಪಾ ಅವರು ಮಹಾದೇವಿ ಕನ್ಯಾಶಾಲೆಯನ್ನು ಆರಂಭಿಸುವುದರ ಮುಖಾಂತರ ಮಹಿಳಾ ಶಿಕ್ಷಣದೊಂದಿಗೆ ಮಹಿಳೆಯರಲ್ಲೂ ಸ್ವಾತಂತ್ರ್ಯ ಹೋರಾಟದ ಭಾವನೆ ಬಿತ್ತುವಲ್ಲಿ ಪರಿಶ್ರಮಿಸಿದರು. ಕರ್ನಾಟಕ ಪರಿಷತ್ತಿನ ಐದನೇ ಸಮಾವೇಶವು ೧೯೪೬ ರಲ್ಲಿ ಯಾದಗಿರಿಯಲ್ಲಿ ನಡೆಯಿತು ಇದರ ಅಧ್ಯಕ್ಷತೆಯನ್ನು ಹನುಮಂತರಾವ್ ಕಕ್ಕೇರಿ ವಹಿಸಿದರು. ಸ್ವಾಗತ ಸಮೀತಿಯ ಅಧ್ಯಕ್ಷರು ಜಗನಾಥರಾವ್ ಚಂದ್ರಕಿಯವರಾಗಿದ್ದರು. ಸಮಾವೇಶದಲ್ಲಿ ಸರಕಾರಿ ನೌಕರರು ತಮ್ಮ ಹುದ್ದೆಗೆ ರಾಜನಾಮೆಯನ್ನು ನೀಡಿ ನಿಜಾಮನ ಅಧಿಕಾರ ಪ್ರವೃತ್ತಿಯನ್ನು ವಿರೋಧಿಸುವ ನಿರ್ಣಯ ಸ್ವೀಕರಿಸಲಾಯಿತು. ಈ ನಿರ್ಣಯದಂತೆ ಭಾವುಸಾಹೇಬ ದೇವುಳಗಾಂವಕರ, ನಾರಾಯಣರಾವ್ ಕಾನಿಹಾಳ, ಎಸ್. ಅನಂತರಾವ್, ಸೀತರಾಮ ಜೋಶಿ, ತುಕರಾಮ, ವೆಂಕಟೇಶ ಮುಂತಾದವರು ನೌಕರಿಯನ್ನು ತ್ಯಜಿಸಿದರು.

ಮೇಲಿನ ವಿಷಯುವನ್ನು ಪಾಟೀಲ (೨೦೦೨:೧೧೧-೧೧೩), ಪಾಟೀಲರು (೧೯೯೯:೧೯೧-೧೯೨), ಮಹಾಬಲೇಶ್ವರಪ್ಪ (೨೦೦೮:೪), ಭಾಸ್ಕರ (೨೦೦೫:೨೫೮) ಶಿಕ್ಷಣದ ಮಹತ್ವದ ಬಗ್ಗೆ ಪ್ರಸ್ತಾಪಿಸಿದ್ದಾರೆ.

ಹೈದರಾಬಾದ್ ಕರ್ನಾಟಕ ಪ್ರದೇಶದ ಉತ್ಸಾಹಿ ಯುವಕರದ ಮೇಲೆ ತಿಲಕರ ಪ್ರಭಾವ ಬೀರಿತು. ಸ್ವರಾಜ್ಯವು ನನ್ನ ಜನ್ಮ ಸಿದ್ದ ಹಕ್ಕು! ಅದನ್ನು ನಾನು ಪಡದೇ ತೀರುತ್ತೇನೆ ಎಂದು ಘೋಷಣೆ ಗುಲಬರ್ಗಾ, ಸುರಪುರ, ಆಳಂದ ಮುಂತಾದ ಕಡೆ ೧೯೩೫ ರಿಂದ ೧೯೪೫ರವರೆಗೆ ನಡೆದ ಹಿಂದೂ ಮುಸ್ಲಿಮ ಗಲಭೆ ಕಾಲದಲ್ಲಿ ಬಹಳಷ್ಟು ಪ್ರಭಾವ ಬೀರಿತು. ಹಿಂದೂಗಳಲ್ಲಿ ಹೋರಾಟದ ಮನೋಭಾವವನ್ನು ಬೆಳೆಸುವ ಸಲುವಾಗಿ ಗಣಪತಿ, ಶಿವಾಜಿ, ದಸರಾ, ಮುಂತಾದ ಹಬ್ಬಗಳು ಆಚರಣೆಗೆ ತಂದರು.[೧೫]

ತಿಲಕರು ಭೋದಿಸಿದ ನಾಲ್ಕು ಕಾರ್ಯಕ್ರಮಗಳು ಸ್ವದೇಶಿ, ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣ ಮತ್ತು ಸ್ವರಾಜ್ಯಗಳು ಒಪ್ಪಿಕೊಂಡು ಕಾರ್ಯಗತ ಗೊಳಿಸತೊಡಗಿದರು. ಮರಾಠಿ ಮತ್ತು ಕೇಸರಿ ಪತ್ರಿಕೆಗಳಲ್ಲಿ ಉದ್ರೇಕಕಾರಿ ಬರಹಗಳಿಂದ ಪ್ರಭಾವಿತರಾಗಿ. ಗುಲಬರ್ಗಾದ ಸರದಾರ ಶರಣಗೌಡ ಇನಾಮದಾರ, ಶಿವಮೂರ್ತಿಸ್ವಾಮಿ ಅಳವಂಡಿ, ಮಹಾಗಾಂವನ ಚಂದ್ರಶೇಖರ ಪಾಟೀಲ, ಆಳಂದ ನವಿ. ವಿ ಪಾಟೀಲ್ ಸುರಪುರದ ರಾಜವೆಂಕಟಪ್ಪನಾಯಕ ಮುಂತಾದವರು ಅತ್ಯಂತ ಪ್ರಭಾವಿತರಾಗಿ ಅನೂಯಾಯಿಗಳಾದರು. ಕರ್ನಾಟಕಗಾಂಧಿ ಎಂದೇ ಹೆಸರಾಗಿದ್ದ ಹರ್ಡೇಕರ್ ಮಂಜಪ್ಪನವರ ವಿಚಾರಗಳಿಂದ ಈ ಭಾಗದ ಜನರ ರಾಜಕೀಯ, ಸಮಾಜಿಕ, ಧಾರ್ಮಿಕ ಭಾವನೆಗಳನ್ನು ತೀವ್ರ ರೀತಿಯಲ್ಲಿ ಪ್ರಭಾವಿತಗೊಂಡವು. ಬಸವ ಜಯಂತಿ,

ದಸರಾ, ಗಣೇಶ ಉತ್ಸವಗಳು ಗುಲಬರ್ಗಾದಲ್ಲಿ ಏರ್ಪಡಿಸುವುದರ ಮುಖಾಂತರ ಹೋರಾಟದ ಮನೋಭಾವನೆಯನ್ನು ಬಳಸಲಾಗುತ್ತಿತ್ತು. ಸ್ವಾಮಿ ರಮಾನಂದತೀರ್ಥರು ಹೋರಾಟದ ನಾಯಕತ್ವ ವಹಿಸಿದ್ದಲ್ಲದೆ ರಾಜ್ಯ ಕಾಂಗ್ರೆಸ್ ಅಧ್ಯಕ್ಷರಾಗಿ ಅನೇಕ ಹೋರಾಟಗಳಲ್ಲಿ ಭಾಗವಹಿಸುವುದರ ಮುಖಾಂತರ ಇಲ್ಲಿನ ಜನತೆಗೆ ಮಾರ್ಗದರ್ಶಕರಾಗಿ ಮುಂದಾಳತ್ವವನ್ನು ವಹಿಸಿದರು. ಈ ರೀತಿಯಾಗಿ ಮೂರು ಜನ ನಾಯಕರು ಹೈದರಾಬಾದ್ ಕರ್ನಾಟಕದಲ್ಲಿ ಸ್ವಾತಂತ್ರ ಚಳವಳಿಗೆ ತಮ್ಮದೆ ಆದ ಪ್ರಭಾವವನ್ನು ಬೀರಿದ್ದಾರೆ.

ಹೈದರಾಬಾದ್ ಸಂಘರ್ಷದ ಮಹಾತ್ಮಗಾಂಧಿ ಎಂದು ಪ್ರಸಿದ್ಧಿಯಾಗಿರುವ ಸ್ವಾಮಿ ರಮಾನಂದ ತೀರ್ಥರು ಗುಲಬರ್ಗಾ ಜಿಲ್ಲೆಯ ಚಿಂಚೋಳಿಯಲ್ಲಿ ಜನಿಸಿದರು ಎಂದು ಬಿ.ಸಿ. ಮಹಾಬಲೇಶ್ವರಪ್ಪರವರು ತಮ್ಮ ಕೃತಿಯಲ್ಲಿ (೨೦೦೮:೫೧) ತಿಳಿಸಿದ್ದಾರೆ. ಆದರೆ ಬಿಜಾಪುರ ಜಿಲ್ಲೆಯ ಸಿಂದಗಿ ಊರಿನವರು ಎಂದು ಪಾಟೀಲ್ ಸಂಪಾದಿಸಿದ ಕೃತಿಯಲ್ಲಿ (೧೯೯೯:೬೪) ಉಲ್ಲೇಖಿಸಿದ್ದಾರೆ. ಸೂರ್ಯನಾಥ ಕಾಮತ್‌ರು ಅನುವಾದಿಸಿರುವ 'ಸ್ವಾಮಿರಮಾನಂದ ತೀರ್ಥ ಹೋರಾಟದ ನೆನಪುಗಳು' ಇದರಲ್ಲಿ ಗುಲಬರ್ಗಾ ಜಿಲ್ಲೆಯ ಚಿನ್ಮಲಿಯಲ್ಲಿ ಜನಿಸಿದರು ಎಂದು ತಿಳಿಸಿದ್ದಾರೆ. ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೭೭:೮೪) ಕೃತಿಯಲ್ಲಿ ಎರಡು ಹೇಳಿಕೆಯನ್ನು ಉಲ್ಲೇಖಿಸಿದ್ದಾರೆ. ರೀತಿಯಾಗಿ ಭಿನ್ನಾಭಿಪ್ರಾಯ ಹೊಂದಿರುವುದನ್ನು ನೋಡಬಹುದಾಗಿದೆ.

ಗುಲಬರ್ಗಾ ಜಿಲ್ಲೆಗಳಲ್ಲಿ ವಿವಿಧ ಸ್ಥಳಗಳಲ್ಲಿ ತಂಡ ತಂಡವಾಗಿ ಅಸಂಖ್ಯಾತ ಜನರು ಸತ್ಯಾಗ್ರಹ ನಡೆಸಿ ಹೈದರಾಬಾದ್ ರಕ್ಷಣೆ ಕಾಯಿದೆ ಕಲಂ–೧೯ರ ಪ್ರಕಾರ ಬಂಧನಕ್ಕೆ ಒಳಗಾದರು. ಗುಲಬರ್ಗಾ ವಕೀಲ ಅಶ್ವತ್ಥರಾವ, ಸುರಪುರದ ವಿ.ಬಿ. ಪದಕಿ, ಚಿತ್ತಾಪುರದ ಬಸಪ್ಪ ಸಜ್ಜನಶೆಟ್ಟಿ, ರೇವಣಸಿದ್ದಪ್ಪ ಕಾಂತ, ಚಿಂಚೋಳಿಯ ವೀರೇಂದ್ರ ಪಾಟೀಲ್, ಯಾದಗಿರಿಯಲ್ಲಿ ವಿಶ್ವನಾಥ ರೆಡ್ಡಿ ಮುದ್ನಾಳ, ವಿರೂಪಾಕ್ಷಪ್ಪ ಯಕ್ಕೆಳ್ಳಿ, ಯಾದಗಿರಿಯ ವಿದ್ಯಾರ್ಥಿಗಳು, ಸತ್ಯಾಗ್ರಹ ನಡೆಸಿ ನಿಜಾಮ ಸರ್ಕಾರದ ನಾಗರಿಕ ನಿಯಮಗಳ ಉಲ್ಲಂಘಿಸಿ ಬಂಧನಕ್ಕೊಳಗಾದರು. ೧೯೪೭ ಅಗಸ್ಟ ೭ ರಂದು ಹೈದರಾಬಾದ್ ರಾಜ್ಯ ಕಾಂಗ್ರೆಸ್ ಪ್ರಾರಂಭಿಸಿದ ಭಾರತ ಒಕ್ಕೂಟ ಸೇರಿ ಚಳವಳಿ ಸಹಾನುಭೂತಿ ವ್ಯಕ್ತಪಡಿಸಲೂ ಹಾಗೂ ಬೆಂಬಲಾರ್ಥವಾಗಿ ಸುಮಾರು ೧೨,೦೦೦ ಕಾರ್ಮಿಕರು ಕಾರ್ಖಾನೆ ಗೈರುಹಾಜರಾಗಿದ್ದರು. ಮುಂಬಾಯಿಯ ನಾಲ್ಕು ಹತ್ತಿ ಗಿರಣಿಗಳು ಸ್ತಬ್ಧಗೊಂಡವು. ಅಗಸ್ಟ್ ೧೩ರಂದು ನಿಜಾಮನ ಆದೇಶದ ಮೇರೆಗೆ ಭಾರತ ಒಕ್ಕೂಟದ ಧ್ವಜವನ್ನು ಆರೋಹಿಸುವ ಸಮಾರಂಭ ನಿಷೇಧಿಸಿದನು. ಆದರೆ ರಮಾನಂದ ತೀರ್ಥರು ೧೫ನೇ ಆಗಸ್ಟ್ ೧೯೪೭ ರಂದು ಪ್ರತಿಯೊಬ್ಬ ದೇಶಭಕ್ತರೂ ಹೆಂಗಸರಾಗಲಿ, ಗಂಡಸರಾಗಲಿ ಎಲ್ಲರೂ ರಾಷ್ಟ್ರಧ್ವಜವನ್ನು ಹಾರಿಸಿ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸಬೇಕೆಂದು ಹೇಳಿದರು. ೧೯೪೭ ಆಗಸ್ಟ್ ೧೫ ರಂದು ಸುರಪುರದ ಅನೇಕ ಭಾಗಗಳಲ್ಲಿ ರಾಷ್ಟ್ರಧ್ವಜವನ್ನು ಏರಿಸಿ

ಸ್ವಾತಂತ್ರ್ಯೋತ್ಸವ ಆಚರಣೆ ಮಾಡಿದರು ಇದಕ್ಕೆ ಬಸಪ್ಪ ಎನ್ನುವ ದರ್ಜಿ ಒಂದೇ ದಿನದಲ್ಲಿ ೧೧೧೫ ಧ್ವಜಗಳನ್ನು ಹೊಲಿದುಕೊಟ್ಟು ಯುವಕರಲ್ಲಿ ರಾಷ್ಟ್ರಾಭಿಮಾನ ಮೂಡಿಸಿದನು. ಯಾದಗಿರಿಯಲ್ಲಿ ಕೊಲ್ಲೂರು ಮಲ್ಲಪ್ಪ ಆಳಂದದಲ್ಲಿ ಎ.ವಿ. ಪಾಟೀಲ ರಾಷ್ಟ್ರಧ್ವಜವನ್ನು ಹಾರಿಸಿದರು. ಮಹಿಳೆಯರಲ್ಲಿ ಉಪ್ಪಾಲ ದಿನ್ನಿಯ ಕಮಲವ್ವ, ಬೆಳಗೇರಿಯ ಈರವ್ವ ಮತ್ತು ಮಹಾಗಾಂವನ ಸಂಗವ್ವ ಧ್ವಜವನ್ನು ಹಾರಿಸುವುದರ ಮುಖಾಂತರ ಧೀರ ಮಹಿಳೆಯರು ಎನಿಸಿಕೊಂಡರು.

ಮೇಲಿನ ವಿಷಯವನ್ನು ಚಂದ್ರಶೇಖರ (೨೦೦೨:೭೭), ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೯೩), ದಿವಾಕರ್ (೨೦೦೬:೫೧೧-೫೧೪), ಹೇಜೀಬ್ (೨೦೦೧:೭೩) ಮತ್ತು ಮಹಾಬಲೇಶ್ವರಪ್ಪ (೨೦೦೮:೭೯-೮೧) ಮುಂತಾದ ಕೃತಿಕಾರರು ತಮ್ಮ ಕೃತಿಗಳಲ್ಲಿ ವಿವರಿಸಿದ್ದಾರೆ.

ಕಾರಟಗಿಯಲ್ಲಿ ರಾಷ್ಟ್ರಧ್ವಜ ಹಾರಿಸಿ ಸತ್ಯಾಗ್ರಹದಲ್ಲಿ ಭಾಗವಹಿಸಿದ ಭೀಮಸೇನ ರಾವ್ ಬೆಣಕಲ್ ಅವರು ಗುಲಬರ್ಗಾ ಕೇಂದ್ರ ಕಾರಾಗೃಹದಲ್ಲಿ ಮುಸ್ಲಿಮ ಗೊಂಡಾಗಳ ದೌರ್ಜನ್ಯ ಸಹಿಸಲಾರದೆ ೨೫ ಆಗಸ್ಟ್ ೧೯೪೭ ರಂದು ಹುತಾತ್ಮರಾದರು. ಗುಲಬರ್ಗಾದಲ್ಲಿ ಡಿ.ಸಿ.ಸಿ.ಯ ಅಧ್ಯಕ್ಷರಾಗಿದ್ದ ಹನುಮಂತರಾವ್ ಕಕ್ಕೇರಿಯವರು ನೂರಾರು ಕಾಂಗ್ರೆಸ್ ಕಾರ್ಯಕರ್ತರ ಜೊತೆಯಲ್ಲಿ ಜಗತ್‌ನಲ್ಲಿ ಧ್ವಜಾರೋಹಣ ಮಾಡಿದರು. ಮಲ್ಲಪ್ಪ ಸೋಡಿಯಾವರ ತಮ್ಮ ಮನೆಯ ಮೇಲೆ ರಾಷ್ಟ್ರಧ್ವಜವನ್ನು ಹಾರಿಸಿದ್ದಕ್ಕಾಗಿ ಆಮೀನನು ಅವರನ್ನು ಪೊಲೀಸ್ ವಶಕ್ಕೆ ಒಪ್ಪಿಸಿದನು. ೧೯೪೭ ಆಗಸ್ಟ್ ೧೪ರಂದು ಬೊಂಬಾಯಿ, ಮದರಾಸು ಎಕ್ಸ್‌ಪ್ರೆಸ್ ರೈಲು ಗುಲಬರ್ಗಾ ನಿಲ್ದಾಣವನ್ನು ರಾಷ್ಟ್ರಧ್ವಜವನ್ನು ಹೊತ್ತುಕೊಂಡು ಪ್ರವೇಶಿಸಿದಾಗ ರಜಾಕಾರರು ಹಾಗೂ ನಿಜಾಮನ ಪೊಲೀಸ್‌ರು ರೈಲನ್ನು ನಿಲ್ಲಿಸಿ, ಪ್ರತಿಯೊಂದು ಧ್ವಜವನ್ನು ಕಿತ್ತು ಹಾಕಿದರು.[೧೬] ಗುಲಬರ್ಗಾ ಜಿಲ್ಲೆಯ ಮಹಾಗಾಂವ, ಕಮಲಾಪುರ, ಹೆಬ್ಬಾಳ, ಚಿಂಚೋಳಿ, ಕುರಿಕೋಟ, ಸರಸಂಬಾ, ಯಳಸಂಗಿ, ಕಾಳಗಿ, ಗಾಣಾಗಾಪೂರ, ರಟಕಲ್ಲು, ನಿಂಬರ್ಗಾ, ದೋಗಿಬಾನ, ಮಳ್ಳಿ, ಜೇವರ್ಗಿ, ಆಳಂದ ಮುಂತಾದ ಕಡೆ ರಜಾಕಾರರ ಹಾವಳಿ ವಿಪರೀತವಾಗಿತ್ತು. ಆಗಸ್ಟ್ ೧೫, ೧೯೪೭ ರಿಂದ ೧೯೪೮ ಆಗಸ್ಟ್‌ವರೆಗೆ ರಜಾಕಾರರ ಹಾವಳಿ ವಿಪರೀತವಾಗಿತ್ತು. ಸುರಪುರವು ರಜಾಕಾರರ ಚಟುವಟಿಕೆಯ ಕೇಂದ್ರವಾಗಿತ್ತು. ರಜಾಕಾರರು ಆಳಂದ ತಾಲೂಕಿನ ದೋಗಿ ಬನದಲ್ಲಿ ೯ ರಾಷ್ಟ್ರೀಯವಾದಿಗಳನ್ನು ಕೊಂದರು. ಶಹಾಪುರ ತಾಲೂಕಿನಲ್ಲಿ ೫೦ ಜನರ ಬಲಿ, ಯಳಸಂಗಿಯಲ್ಲಿ ೨೧ ರಾಷ್ಟ್ರಭಕ್ತರನ್ನು ಕೊಲ್ಲಲಾಯಿತು. ಈ ರೀತಿ ರಜಾಕಾರರ ದೌರ್ಜನ್ಯಕ್ಕೆ ಜನರು ಬಲಿಯಾದರು. ಈ ದೌರ್ಜನ್ಯ ತಡೆಯಲು ಅನೇಕ ಶಿಬಿರ ಸ್ಥಾಪನೆಗೊಂಡವು.

ಮೇಲಿನ ವಿಷಯದ ಬಗ್ಗೆ ಪಾಟೀಲ (೨೦೦೨:೧೧೩-೧೧೯), ಮಹಾಬಲೇಶ್ವರಪ್ಪ (೨೦೦೮:೮೧-೮೩), ಸೂರ್ಯನಾಥ ಕಾಮತ್ (೧೯೯೭:೯೦೧), ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೯೧) ತಮ್ಮ ಕೃತಿಗಳಲ್ಲಿ ತಿಳಿಸಿದ್ದಾರೆ.

ಯಳಸಂಗಿಯಲ್ಲಿ ೨೬–೧–೧೯೪೮ ರಂದು ರಜಾಕಾರರ ಬೃಹತ್ ಮೇಳವನ್ನು ಉದ್ದೇಶಿಸಿ ಖಾಸಿಮ್ ರಜವಿ ಮಾತನಾಡುತ್ತಾ 'ಹಿಂದೂಗಳಿಗೆ ಸ್ವಾತಂತ್ರ್ಯ ನೀಡುವುದು ಅಲ್ಲಾಹಜರತ್ ಅಭಿಲಾಷೆಗೆ ವಿರುದ್ಧವಾದುದು ಮತ್ತು ಒಂದು ವೇಳೆ ಭಾರತ ಸರಕಾರವೇನಾದರೂ ಹೈದರಾಬಾದ್‌ನ್ನು ಪ್ರವೇಶಿಸುವ ಧೈರ್ಯ ಮಾಡಿದರೆ ಅವರಿಗೆ ಇಲ್ಲಿ ಒಂದುವರೆ ಕೋಟಿ ಹಿಂದೂಗಳ ಮೂಳೆ ಹಾಗೂ ಬೂದಿ ಸಿಗುತ್ತದೆ' ಎಂದು ಎಚ್ಚರಿಸಿದನು.

ಕೊನೆಗೆ ಯಥಾಸ್ಥಿತಿ ಒಪ್ಪಂದ ಉಲ್ಲಂಘನೆಯಿಂದ ೧೯೪೮ ಸೆಪ್ಟಂಬರ್ ೧೩ರಂದು ಬೆಳಗಿನ ಜಾವ 'ಆಪರೇಷನ್ ಪೋಲೋ' ಹೆಸರಿನಲ್ಲಿ ಸೈನಿಕ ಕಾರ್ಯಾಚರಣೆ ಆರಂಭವಾಯಿತು. ಸೇನೆಯ ಪ್ರಥಮ ಸಶಸ್ತ್ರಪಡೆ ಹಾಗೂ ಇತರ ಪಡೆಗಳ ಲೆಫ್ಟಿನೆಂಟ್ ಜನರಲ್ ರಾಜೇಂದ್ರ ಸಿಂಗ್ ಮತ್ತು ಮೇಜರ್ ಜನರಲ್ ಜೆ.ಎನ್.ಚೌಧರಿ ಇವರ ನೇತೃತ್ವದಲ್ಲಿ ಸೈನಿಕ ಕಾರ್ಯಾಚರಣೆಯನ್ನು ನಡೆಸಿದರು. ೧೮ ಸೆಪ್ಟೆಂಬರ್ ೧೯೪೮ ರಂದು ಸಂಜೆ ೫ ಗಂಟೆಯಲ್ಲಿ ನಿಜಾಮನು ಶರಣಾದನು. ವಿಲೀನಗೊಳಿಸುವ ಒಡಂಬಡಿಕೆಗೆ ಸಹಿ ಹಾಕಿದನು. ೧೯ರಂದು ಕಾಸಿಮ್ ರಜವಿಯನ್ನು ಬಂಧಿಸಲಾಯಿತು.

ಮೇಲ್ಕಾಣಿಸಿದ ವಿಷಯವನ್ನು ಇನ್ನೂ ಹೆಚ್ಚಿನ ವಿವರಣೆಯನ್ನು ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭:೯೬), ಮಹಾಬಲೇಶ್ವರಪ್ಪ (೨೦೦೮:೧೨೦), ಪಾಟೀಲರ (೨೦೦೨:೧೧೭), ಭಾಸ್ಕರ್ (೨೦೦೫:೨೬೨–೨೬೩) ತಮ್ಮ ಕೃತಿಗಳಲ್ಲಿ ಮೇಲಿನ ಅಂಶಗಳನ್ನು ತಿಳಿಸಿದ್ದಾರೆ.

ಕರ್ನಾಟಕದ ಸ್ವಾತಂತ್ರ್ಯ ಚಳವಳಿಯ ಇತಿಹಾಸವನ್ನು ಕುರಿತಂತೆ ಸೈದ್ಧಾಂತಿಕ ತಳಹದಿಯನ್ನು ಅಧ್ಯಯನ ಮಾಡಲು ಇಲ್ಲಿ ಪ್ರಯತ್ನಿಸಲಾಗಿದೆ. ಈ ಬರವಣಿಗೆಗಳು ಓದಿದ ಮೇಲೆ ಒಂದು ವಿಷಯ ಸ್ಪಷ್ಟವಾಗುತ್ತದೆ. ಸ್ವಾತಂತ್ರ್ಯ ಹೋರಾಟದ ಬಗ್ಗೆ ಬರೆದ ಚರಿತ್ರೆಕಾರರು ಮತ್ತು ಲೇಖಕರು ಸಮಕಾಲೀನ ಐತಿಹಾಸಿಕ ತಿಳುವಳಿಕೆಯಲ್ಲಿ ಮೂಡಿಬಂದಿರುವ ಹೊಸ ಧೋರಣೆಗಳಿಂದ ಸ್ವಲ್ಪವೂ ವಿಚಲಿತವಾಗಿಲ್ಲದಿರುವುದನ್ನು ಕಂಡುಬರುತ್ತವೆ. ಆಧುನಿಕ ಕರ್ನಾಟಕದ ಇತಿಹಾಸಕಾರರನ್ನು ಹತ್ತೊಂಬತ್ತನೆಯ ಶತಮಾನ ರಾಷ್ಟ್ರೀಯವಾದಿ ವಸಾಹತುಶಾಹಿ ಚರಿತ್ರೆ ಲೇಖನಶಾಸ್ತ್ರ ಪ್ರಭಾವ ಈಗಲೂ ಕೃತಿಗಳು ಕಂಡುಬರುತ್ತವೆ. ವಸಾಹತುಶಾಹಿ ಹಿನ್ನೆಲೆಯಲ್ಲಿ ರಚನೆಗೊಂಡ ಕೃತಿಗಳನ್ನು ಸಮರ್ಥವಾಗಿ ಎದುರಿಸಲು ವಸಾಹತು ವಿರೋಧಿ ಹೋರಾಟಗಳೆ ಕಂಡುಬರುತ್ತವೆ. ಅವುಗಳನ್ನು ರಾಷ್ಟ್ರೀಯ ಹೋರಾಟವೆಂದೂ, ರಾಷ್ಟ್ರೀಯತೆಯ ಪ್ರತೀಕಗಳಾದವು. ರಾಷ್ಟ್ರೀಯತೆ ಉಗಮ ಹತ್ತೊಂಬತ್ತನೆಯ ಶತಮಾನದ ಹಿಂದೂ ಪುನರುಜ್ಜೀವನಕ್ಕೆ ತಳಕು ಹಾಕಿಕೊಳ್ಳುತ್ತವೆ. ತಿಲಕ್, ಆಲೂರು ವೆಂಕಟರಾಯರು, ಗಂಗಾಧರರಾವ್ ದೇಶಪಾಂಡೆ, ವೆಂಕಟಕೃಷ್ಣಯ್ಯ, ವಿ.ಡಿ.ಸಾವರ್‌ಕರ್ ಮೊದಲಾದ ಪ್ರಾರಂಭ ಕಾಲದ ರಾಷ್ಟ್ರೀಯವಾದಿಗಳು ಪ್ರಾದೇಶಿಕ, ಧಾರ್ಮಿಕ ಮತ್ತು ಜಾತೀಯ,

ಹಾಡಿಹೊಗಳುವುದರ ಮೂಲಕ ಜನರಲ್ಲಿ ರಾಷ್ಟ್ರೀಯ ಪ್ರಜ್ಞೆಯನ್ನು ಮೂಡಿಸಲಾಗುತ್ತಿತ್ತು. ಗತವೈಭವೀಕರಣದ ಉಲ್ಲೇಖ ಮಾಡುವುದರ ಮುಖಾಂತರ ಪ್ರಚೋದನೆಯನ್ನು ನೀಡುತ್ತಿದ್ದರು. ಆದರೆ ಚಳವಳಿಯ ಮೇಲೆ ಬೀರಿದ ಕೆಟ್ಟ ಹಾಗೂ ಋಣಾತ್ಮಕ ಪರಿಣಾಮದ ಬಗ್ಗೆ ಮಾತನಾಡುವುದಿಲ್ಲ.

ಕಾಂಗ್ರೆಸ್ ನೇತೃತ್ವದಲ್ಲಿ ನಡೆದ ಚಳವಳಿಯಲ್ಲಿ ಸಕ್ರೀಯವಾಗಿ ಪಾಲ್ಗೊಂಡ ಜನಸಾಮಾನ್ಯರ ಕಷ್ಟಕಾರ್ಪಣ್ಯಗಳನ್ನು ಅನುಭವಿಸಿದರು. ಆದರೆ ಚಳವಳಿಯಲ್ಲಿ ಸಾಮಾನ್ಯ ಜನರ ಬಗ್ಗೆ ಚಕಾರವೆತ್ತದಿರುವುದು ಕಂಡುಬರುತ್ತದೆ. ಕೆಲವು ನಾಯಕರು, ಘಟನೆಗಳು ಮಾತ್ರ ವಿಜೃಂಭಣೆಗೊಂಡಿವೆ. ಸ್ವಾತಂತ್ರ್ಯ ಚಳಿವಳಿಯಲ್ಲಿ ಕರ್ನಾಟಕವು ವಹಿಸಿದ ಪಾತ್ರವನ್ನು ಯಾವುದಕ್ಕೆ ಕಡಿಮೆಯಿಲ್ಲ ಎಂಬ ಧೋರಣೆ ಹೊಂದಿದವು. ೧೯೨೦ ದಶಕದಲ್ಲಿ ಕೊನೆಯವರೆಗೆ ದಕ್ಷಿಣ ಭಾರತದಲ್ಲಿ ಸ್ವಾತಂತ್ರ್ಯ ಚಳವಳಿ ಮಂದಗತಿಯಲ್ಲಿ ನಡೆಯಿತು ಆದರೆ ಈ ಅಂಶಗಳನ್ನು ಬಹುತೇಕ ಚರಿತ್ರೆಕಾರರು ಮುಚ್ಚಿಡಲು ಪ್ರಯತ್ನಿಸಿದ್ದಾರೆ.

ರಾಷ್ಟ್ರೀಯ ಚಳವಳಿಗೆ ಬಹುಜನ ಸಮುದಾಯದ ಪಾತ್ರ ಬಹುಮುಖ್ಯವಾದದ್ದು. ಇವರಿಗೆ ಯಾವ ಮನ್ನಣೆ ದೊರೆತಿಲ್ಲ. ಅಸಹಕಾರ, ಕರನಿರಾಕರಣ, ಭಾರತ ಬಿಟ್ಟು ತೊಲಗಿ, ಅರಣ್ಯ ಸತ್ಯಾಗ್ರಹ, ಮುಂತಾದ ಕಾಂಗ್ರೆಸ್ ನಾಯಕ ವಿಜಯಗಳೆಂದು ವಿಶ್ವಾಸಿಸಲಾಗಿದೆ. ಸ್ವಾತಂತ್ರ್ಯ ಚಳವಳಿಯ ಸಾರ್ವತ್ರಿಕವಾಗಿತ್ತೆಂದು, ವಿಕಸನ ರಹಿತವಾಗಿತ್ತೆಂದು ಚಿತ್ರಿಸಲಾಗಿದೆ. ವಿದ್ವಾಂಸರು ಸಾಮಗ್ರಿಗಳನ್ನು ಪರಿಶೀಲಿಸಿದಾಗ ರೈತರು, ಕಾರ್ಮಿಕರು, ಮಹಿಳೆಯರು ಈ ಬೆಳವಣಿಗೆಯಿಂದ ದೂರ ಉಳಿದಿದ್ದವು ಎಂದು ತಿಳಿದುಬರುತ್ತದೆ.

ಸ್ವಾತಂತ್ರ್ಯ ಚಳವಳಿಗೆ ಸಂಬಂಧಿಸಿದಂತೆ ಹೆಚ್ಚಾಗಿ ಕೃತಿಗಳು, ದೇಶಕ್ಕೆ ಸಂಬಂಧಿಸಿದ ವಿಷಯಗಳ ಕೃತಿಗಳು ರಚನೆಗೊಂಡವು.

ಸೂರ್ಯನಾಥ ಕಾಮತ್ ಅವರ 'ಸ್ವಾತಂತ್ರ್ಯ ಸೂರ್ಯೋದಯ' (೨೦೦೨), ಎಸ್.ಆರ್.ರಾಮಸ್ವಾಮಿ ಅವರ ಸ್ವಾತಂತ್ರ್ಯೋದಯದ ಮೈಲುಗಲ್ಲುಗಳು' (೧೯೯೮) ವಿ.ಎಚ್.ದೇಸಾಯಿ ಅವರು ಬರೆದ 'ವಂದೇ ಮಾತರಂ ದಿಂದ ಜನಗಣಮನದವರೆಗೆ' ಎಂಬ ಕೃತಿಯು ವೈಯಕ್ತಿಕವಾದಂಥದ್ದಾಗಿದ್ದರೂ ಕೂಡ ಕೆಲವು ಐತಿಹಾಸಿಕ ಅಂಶಗಳ ಮೇಲೆ ಬೆಳಕು ಚೆಲ್ಲುತ್ತದೆ.

ಸ್ಥಳೀಯವಾಗಿ ಹೋರಾಟ ಕಂಡುಬರುವಂತಹವು ಬಹಳಷ್ಟು ಕಡಿಮೆ. ಆದರೆ ಇತ್ತೀಚೆಗೆ ಕೆಲವು ಎಂ.ಫಿಲ್. ಮತ್ತು ಪಿಎಚ್.ಡಿ. ಸಂಶೋಧನೆಗಳು ಈ ಕೊರತೆಯನ್ನು ನೀಗಿಸಲು ಪ್ರಯತ್ನಿಸಿವೆ. ಆದಿವೇಷ ತಿಮ್ಮಪ್ಪ ಅವರ ಸ್ವದೇಶಿ ಮುವಮೆಂಟ್ ಇನ್ ಕರ್ನಾಟಕ, ಗುಲಬರ್ಗಾ

ವಿಶ್ವವಿದ್ಯಾಲಯ, ಗುಲಬರ್ಗಾ (೨೦೦೪), ಬ್ರಿಟಿಷ್ ರಿಲೇಷನ್ಸ್ ವಿತ್ ದಿ ಪ್ರಿನ್ಸ್‌ಪಾಲಿಟಿ ಆಫ್ ಸುರಪುರ (೧೯೭೨) ಮುಂತಾದ ಕೃತಿಗಳು ಸ್ಥಳೀಯತೆಗೆ ಮಹತ್ವವನ್ನು ನೀಡಿದ್ದನ್ನು ಕಂಡುಬರುತ್ತದೆ. ಸುಮಿತ್ರಾಬಾಯಿ ಎಸ್. ನಿರ್ಣಿ ಅವರ ವುಮನ್ಸ್ ರೋಲ್ ಇನ್ ಕರ್ನಾಟಕ ಫ್ರೀಡಮ್ ಸ್ಟ್ರಗಲ್, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ (೨೦೦೨), ಸ್ವಾತಂತ್ರ್ಯ ಹೋರಾಟದ ಸ್ತ್ರೀಯರ ಪಾತ್ರ ಹೀಗೆ ಅನೇಕ ಪ್ರಬಂಧಗಳು ಸ್ವಾತಂತ್ರ್ಯ ಹೋರಾಟದ ಬಗ್ಗೆ ಹೆಚ್ಚಿನ ಬೆಳಕನ್ನು ಚೆಲ್ಲಲು ಸಹಾಯಕವಾಗಿವೆ.

ನಿಜಾಮನ ಕಾಲದ ಚರಿತ್ರೆ ಲೇಖನಶಾಸ್ತ್ರಕ್ಕೆ ಸಂಬಂಧಿಸಿದಂತೆ ನಿಜಾಮನು ಒಬ್ಬ ಮುಸ್ಲಿಮ್‌ನಾಗಿದ್ದು, ಹೈದರಾಬಾದ್ ಕರ್ನಾಟಕ ಇವರ ಆಳ್ವಿಕೆಗೆ ಒಳಪಟ್ಟಿತ್ತು. ಈ ಸಂದರ್ಭದಲ್ಲಿ ಕೃತಿಗಳು ಕೋಮುವಾದಿ ನೆಲೆಗಳ ಮೇಲೆ ರಚನೆಗೊಂಡವು. ಬ್ರಿಟಿಷರು ಭಾರತಕ್ಕೆ ಬಂದ ನಂತರ ಒಡೆದು ಆಳುವ ನೀತಿಯಲ್ಲಿ ಹಿಂದೂ ಮತ್ತು ಮುಸ್ಲಿಂ ಎಂಬ ಧರ್ಮದ ಆಧಾರ ಮೇಲೆ ಕೋಮುವಾದ ಸೃಷ್ಟಿಸಿದರು. ಇದು ಮುಂದೆ ಹೆಮ್ಮರವಾಗಿ ಬೆಳೆದು ಹಿಂದೂ ಮತ್ತು ಮುಸ್ಲಿಂ ಒಬ್ಬರನೊಬ್ಬರಲ್ಲಿ ಶತ್ರುತ್ವದ ಭಾವನೆ ಬೆಳೆಯಿತು.

ಗುಲಬರ್ಗಾ ಪ್ರದೇಶದ ನಿಜಾಮನ ಚರಿತ್ರೆಗೆ ಸಂಬಂಧಪಟ್ಟಂತೆ ಧರ್ಮದ ಧೋರಣೆಗಳು ಚರಿತ್ರೆಯನ್ನು ರಚಿಸಿಲಿಕ್ಕೆ ಪ್ರಮುಖ ಕಾರಣವಾಗಿದೆ. ರಾಷ್ಟ್ರೀಯವಾದಿಗಳು ವಿವೇಚನೆಗಾಗಿ ನಡೆದಂತಹ ಹೋರಾಟ ಎಂದು ಅಭಿಪ್ರಾಯಪಡುತ್ತಾರೆ.

ಹಿಂದೂ ಮುಸ್ಲಿಂ ಸಂಘರ್ಷವಾಗಿದ್ದ ಪಕ್ಷದಲ್ಲಿ ಹಿಂದೂ ಮುಸ್ಲಿಮರನ್ನು ಒಬ್ಬರನ್ನೊಬ್ಬರು ಪರಸ್ಪರ ರಕ್ಷಿಸಿಕೊಂಡ ಉದಾಹರಣೆಗಳು ಕಂಡುಬರುತ್ತವೆ.

ನಿಜಾಮನ ಚರಿತ್ರೆ ಸಂಬಂಧಿಸಿದಂತೆ ಬಿ.ಸಿ.ಮಹಾಬಲೇಶ್ವರಪ್ಪ ಅವರ 'ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳವಳಿ' ಕೃತಿ ಪ್ರಮುಖವಾಗಿದ್ದು, ಹಿಂದುತ್ವ ನೆಲೆಯನ್ನು ಇದು ಪ್ರಮುಖವಾಗಿ ಹೊಂದಿದೆ. ಹಿಂದುಗಳನ್ನು ಪ್ರಧಾನೀಕರಿಸಿ ಇವರು ವಿವರಣೆಯನ್ನು ನೀಡಿದ್ದಾರೆ. ರಜಾಕಾರರ ದಬ್ಬಾಳಿಕೆ ಮತಾಂತರ ಬಗ್ಗೆ ಉಲ್ಲೇಖಿಸಿದ್ದು, ಇವರ ವಿರುದ್ಧ ಹಿಂದುಗಳು ಮಾಡಿದ್ದ ಹೋರಾಟದ ಬಗ್ಗೆ ತಿಳಿಸಿದ್ದಾರೆ. ಹೈದ್ರಾಬಾದ್ ಸಂಸ್ಥಾನಕ್ಕೆ ಸಂಬಂಧಿಸಿದಂತೆ ಕೇವಲ ಮುಸ್ಲಿಂ ಇರುವಂತಹ ಸಂಸ್ಥಾನವಾಗಿರಲಿಲ್ಲ. ಇಲ್ಲಿಯೂ ಹಿಂದೂಗಳು ಹೆಚ್ಚಾಗಿದ್ದರು. ನಿಜಾಮನ ಸಹಾಯಕ್ಕೆ ಹಿಂದೂಗಳು ಪ್ರಮುಖ ಪಾತ್ರ ವಾಹಿಸಿದರು. ಅವರು ಗೌಡರು, ಕುಲಕರ್ಣಿ, ಪಟೇಲರು ಹೀಗೆ ಕಂದಾಯ ವಸೂಲಿ ಮಾಡುವಂತಹ ಅಧಿಕಾರಿಗಳು ಹೆಚ್ಚಾಗಿ ಹಿಂದೂಗಳೇ ಆಗಿದ್ದರು ಹೊರತುಪಡಿಸಿ ಮುಸ್ಲಿಮರಲ್ಲ. ಮಹಾಬಲೇಶ್ವರಪ್ಪ ಅವರು ಹಿಂದೂ ಮುಸ್ಲಿಂ ಪರಸ್ಪರ ನಡೆದ ಹೋರಾಟದ ಬಗ್ಗೆ ಮಾಹಿತಿಯನ್ನು ನೀಡಿದರು. ಇದೇ ನಿಲುವು

ಹೊಂದಿಂತಹ ಗೋಪಾಲರಾವ್ ಹೇಜೀಬ್ ಅವರ 'ಹೈದರಾಬಾದ್ ಕರ್ನಾಟಕ ಮುಕ್ತಿ ಸಂಘರ್ಷ', ಬಸವರಾಜ ಪೊಲೀಸ್ ಪಾಟೀಲರ 'ಬಿಡುಗಡೆ', ಎನ್.ಎಚ್.ಪಾಟೀಲರ ವಿಮೋಚನೆ, ಕೃತಿಗಳು ಇದೇ ನೆಲೆಯಲ್ಲಿ ರಚನೆಗೊಂಡವು. ಮುನ್ಷಿ ಅವರ ಒಂದು ಯುಗ ಅಂತ್ಯ ಕೃತಿಯಲ್ಲಿ ನಿಜಾಮನ ಜೊತೆಗೆ ತನ್ನ ಒಡನಾಟ, ಭೇಟಿ, ಜೀವನಶೈಲಿ, ಆತನ ಹವ್ಯಾಸ, ವಾಸಿಸುವ ಮನೆಯ ವಾತಾವರಣದ ಬಗ್ಗೆ ವಿವರಣೆಯನ್ನು ನೀಡಿದ್ದಾರೆ. ಬಾಲಚಂದ್ರ ಜಯಶೆಟ್ಟಿಯವರ 'ಹೈದರಾಬಾದ್ ಕರ್ನಾಟಕದ ವಿಮೋಚನಾ ಚಳವಳಿ' (೨೦೦೬) ಕೃತಿಯು ಕೋಮುವಾದಿ ಹಿನ್ನೆಲೆಯಿಂದ ರಚನೆಗೊಂಡಿತು.

ನಿಜಾಮನ ಮತ್ತು ರಜವಿಯ ದಬ್ಬಾಳಿಕೆ ದೃಷ್ಟಿಕೋನದಲ್ಲಿಟ್ಟುಕೊಂಡು ಎಲ್ಲಾ ಮುಸ್ಲಿಮರು ಹಿಂದೂ ವಿರೋಧಿಗರು ಎಂಬ ಕಲ್ಪನೆ ಬೆಳೆಯಿತು. ನಿಜಾಮನ ಆಡಳಿತದಲ್ಲಿ ದೇವಾಲಯಗಳನ್ನು ನಾಶಪಡಿಸಿದ ದೇಶ ವಿರೋಧಿ ಕೆಲಸವೆಂದು ಹೇಳಲಾಗುತ್ತಿತ್ತು. ಅದೇ ಹಿಂದೂಗಳ ಮಸೀದಿಯನ್ನು ನಾಶಗೊಳಿಸಿದರೆ, ರಾಷ್ಟ್ರಪ್ರೇಮವೆಂದು ಪ್ರತಿಬಿಂಬಿಸಲಾಗಿದೆ. ಮಾಡುವ ಕಾರ್ಯ ಒಂದೇಯಾಗಿದ್ದರೂ ನೋಡುವಂತಹ ದೃಷ್ಟಿಕೋನ ಬೇರೆ ಬೇರೆಯಾಗಿದೆ.

ಸಾಮಾನ್ಯ ಮುಸ್ಲಿಂ ಸಹ ನಿಜಾಮನ ದಬ್ಬಾಳಿಕೆಗೆ ಒಳಗಾಗಿದ್ದರು. ಇವರು ಸಹ ಹೈದರಾಬಾದ್ ವಿಮೋಚನೆಗೆ ಪಾಲ್ಗೊಳ್ಳುವುದರ ಮೂಲಕ ಬೆಂಬಲವನ್ನು ನೀಡಿದರು. ಹಿಂದೂ ಮುಸ್ಲಿಂ ಸಾಮರಸ್ಯ ಜೀವನ ನಡೆಸುತ್ತಿದ್ದರೂ ಯಾವ ವಿಷಯಗಳನ್ನು ಪ್ರಸ್ತಾಪಿಸಿದೆ ಚರಿತ್ರೆಯನ್ನು ರಚಿಸಲಾಯಿತು.

ಇಲ್ಲಿಯವರೆಗೆ ಪ್ರಕಟವಾದ ಬರಹಗಳನ್ನು ಎರಡು ವರ್ಗಗಳನ್ನಾಗಿ ಹೆಚ್ಚಾಗಿ ಕಂಡುಬರುತ್ತವೆ. ರಾಷ್ಟ್ರೀಯವಾದಿ ಮತ್ತು ಕೋಮುವಾದ ಹಿನ್ನೆಲೆಯಿಂದ ರಚನೆಯಾದ ಕೃತಿಗಳಲ್ಲಿ ಬಿ.ಸಿ.ಮಹಾಬಲೇಶ್ವರಪ್ಪ, ಹಿಂದೂಪರವಾದ ಮತ್ತು ಮುಸ್ಲಿಮ್ ವಿರೋಧ ನೀತಿಯನ್ನು ನೋಡಬಹುದು. ಡಿ.ಸಿ.ಮೋಹನ್, ಗೋಪಾಲ್ ಹೇಜೀಬ್, ಬಸವರಾಜ ಪೋಲಿಸ್ ಪಾಟೀಲ, ಬಾಲಚಂದ್ರ ಈ ವರ್ಗಕ್ಕೆ ಸೇರುತ್ತಾರೆ. ಪ್ರಗತಿಪರ ಧೋರಣೆಗಳನ್ನು ಅಮರೇಶ ನುಗಡೋಣಿ, ಬಿ.ಶೇಷಾದ್ರಿ, ಟಿ.ಆರ್.ಚಂದ್ರಶೇಖರ್ ಮುಂತಾದ ವಿದ್ವಾಂಸರ ಕೃತಿಗಳಲ್ಲಿ ಸೆಕ್ಯುಲರ್ ಒಲವಿನ ಬರವಣಿಗೆಯನ್ನು ನೋಡಬಹುದು. ಇತ್ತೀಚಿನ ಕೆಲವು ಅಪ್ರಕಟಿತ ಕೃತಿಗಳ ಮತ್ತು ಎಂ.ಫಿಲ್. ಮತ್ತು ಪಿಎಚ್.ಡಿ. ಪ್ರಬಂಧಗಳು, ಜನಾಭಿಪ್ರಾಯಗಳು, ಸಂಗ್ರಹಣೆ ಮತ್ತು ಹೋರಾಟಗಾರರ ಅಥವಾ ಅವರ ಸಂಬಂಧಿಗಳ ಸಂದರ್ಶನಗಳು, ಇವರ ನಡುವೆಯೂ ಇವರಲ್ಲಿ ಕೆಲವರು ಹಿಂದೂ–ಮುಸ್ಲಿಂ ಸಮನ್ವಯತೆ ಬಗ್ಗೆ ಮಾತಡುವುದುಂಟು. ಸೂರ್ಯನಾಥ್ ಕಾಮತ್ ಅವರು 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು', ಸಂಪುಟಗಳು ಸಂದರ್ಶನ ಮೂಲಕ ಮಾಹಿತಿಯನ್ನು

ಕಲೆಹಾಕಿರುವುದನ್ನು ಕಂಡಬರುತ್ತದೆ. ಶುಭಾ ಅವರು 'ಸುರಪುರ:ವಿಮೋಚನಾ ಹೋರಾಟ' ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಚರಿತ್ರೆ ವಿಭಾಗದ ಎಂ.ಫಿಲ್. ನಿಬಂಧ (೨೦೦೬), ಸುಭಾಷಚಂದ್ರ ದೊಡ್ಡಮನಿ ಅವರ 'ಹೈದರಾಬಾದ್ ಕರ್ನಾಟಕದ ವಿಮೋಚನಾ ಹೋರಾಟದಲ್ಲಿ ಕಲಬುರ್ಗಿ ಶಿಬಿರಗಳ ಪಾತ್ರ', ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಚರಿತ್ರೆ ವಿಭಾಗದ ಎಂ.ಫಿಲ್. ನಿಬಂಧ (೨೦೦೨), ಮಂಜುಳಾ ಬಿ. ಚಿಂಚೋಳಿ ಅವರ 'ಡಿಪ್ರೆಸ್ಡ್ ಕ್ಲಾಸೆಸ್ ಇನ್ ಹೈದರಾಬಾದ್ ಕರ್ನಾಟಕ ಏರಿಯಾ ಅಂಡರ್ ದಿ ನಿಜಾಮ್ಸ್ ಡೊಮಿನಿಯನ್' ೧೯೪೨-೧೯೪೮ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ ಚರಿತ್ರೆ ವಿಭಾಗದ ಪಿಎಚ್.ಡಿ. ಪ್ರಬಂಧ (೧೯೮೯), ರಾಜ ಎಮ್. ಅವರ 'ಫ್ರೀಡಮ್ ಫೈಟರ್ಸ್ ಆಫ್ ಗುಲಬರ್ಗಾ ಡಿಸ್ಟ್ರಿಕ್ಸ್' ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ ಚರಿತ್ರೆ ವಿಭಾಗದ ಪಿಎಚ್.ಡಿ. ಪ್ರಬಂಧ (೨೦೦೬) ಮುಂತಾದವು ಜನ ಸಾಮಾನ್ಯರ ಮತ್ತು ಸ್ಥಳೀಯ ಹೋರಾಟಗಳ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ವಹಿಸಲಾಗಿದ್ದು ಕಂಡುಬರುತ್ತದೆ.

**ಟಿಪ್ಪಣಿಗಳು:**

೧. ಹೈದರಾಬಾದ್ ಸಂಸ್ಥಾನದಲ್ಲಿ ಸ್ವಾತಂತ್ರ್ಯ ಚಳವಳಿಯನ್ನು ಹತ್ತಿಕ್ಕಲು ಬ್ರಿಟಿಷ್ ಸರಕಾರದ ನೆರವು ಬೇಕೆ ಬೇಕು ಎಂಬುದು ನಿಜಾಮನಿಗೆ ಮನದಟ್ಟಾಯಿತು. ಇದರಿಂದಾಗಿ ನಿಜಾಮನು ನಿಷ್ಠಾವಂತ ಸಾಮಂತನಾಗಿ ಉಳಿದುಕೊಂಡು ತನ್ನ ಸಂಸ್ಥಾನದಲ್ಲಿ ಕೋಮುವಾದಿ ಹಾಗೂ ದಮನಕಾರಿ ನೀತಿಯನ್ನು ನಿರ್ಭೀತಿಯಿಂದ ಜಾರಿಗೆ ತಂದನು.

೨. ಜವಾಬ್ದಾರಿ ಸರಕಾರದ ಸ್ಥಾಪನೆಗಾಗಿ ಹಿಂದೂಗಳ ಸತ್ಯಾಗ್ರಹ ಮತ್ತು ಧಾರ್ಮಿಕ ಹಕ್ಕುಗಳಿಗಾಗಿ ಆರ್ಯ ಸಮಾಜದ ಚಳವಳಿ ಕಂಡು ಹೈದರಾಬಾದ್ ರಾಜ್ಯದಲ್ಲಿ ಇಸ್ಲಾಂ ಧರ್ಮದ ಶ್ರೇಷ್ಠತ್ವ ಮತ್ತು ನಿಜಾಮನ ಪ್ರಭುತ್ವಕ್ಕೆ ಸಂಚಕಾರ ಒದಗಬಹುದೆಂದು ಮುಸಲ್ಮಾನರು ಗಾಬರಿಯಾದರು. ರಾಜಕೀಯವಾಗಿ ಸಂಘಟನೆಗೊಳ್ಳದಿದ್ದರೆ ಮುಸಲ್ಮಾನರಿಗೆ ಆಪತ್ತು ಖಂಡಿತ ಎಂದು ನಿಜಾಮ ಭಾವಿಸಿದ ಇದರ ಪರಿಣಾಮವಾಗಿಯೇ ಇತ್ತೇಹಾದ್ ಮುಸಲ್ಮಿನ್ ಸಂಘಟನೆ ಅಸ್ತಿತ್ವಕ್ಕೆ ಬಂತು.

೩. ಆಳಂದ ತಾಲೂಕಿನ ಸರಸಂಬಾ ಗ್ರಾಮದ ದೊಡ್ಡವ್ವ ಗಂಡ ಗುರಪ್ಪ ಮತ್ತು ಸಹೋದರ ಶಿವಲಿಂಗ ಊರಿಗೆ ಹೊರಟಿದ್ದರು. ಇಂತಹ ಸಂದರ್ಭದಲ್ಲಿ ಪಠಾಣರು ಇವರಲ್ಲಿರುವಂತಹ ವಸ್ತ್ರಗಳನ್ನು ಕಸಿದುಕೊಂಡು ದೊಡ್ಡವ್ವಳನ್ನು ಬಲತ್ಕಾರ ಮಾಡಿ ಚೂರಿಯಿಂದ ಚುಚ್ಚಿ ಕೊಲೆ ಮಾಡಿದರು.

೪. ಮೈತುಂಬ ಶಂಖ, ಚಕ್ರ, ಗದಾ, ಪದ್ಮ, ಧನುಷ್ಯ, ಬಾಣ, ಸರ್ಪ, ಶಿವಲಿಂಗ, ಚಿತ್ರಗಳನ್ನು ಅಚ್ಚು (ಚಿಹ್ನೆ) ಹಾಕಿಸಿಕೊಂಡರು.

೫. ನನ್ನ ಮುಸ್ಲಿಂ ಸ್ನೇಹಿತರೆ ಕುರಾನ್ ನಿಮಗೆ ಒಂದು ವಿಷಯ ಕಲಿಸಿದೆ ಅದೇನೆಂದರೆ ನೀವು ವಾಸಿಸುವ ನಾಡೆಲ್ಲಾ ಪಾಕಿಸ್ತಾನವಾಗಿ ಮಾರ್ಪಾಡಬೇಕು. ಅಂದರೆ ನೀವು ಬೇರೆಯವರಿಗೆ 'ಕುರಾನ್ ಮಾಜಿದ್' ಜಲಪಾನ ಮಾಡಲು ಒತ್ತಾಯಿಸಬೇಕು. ಒಂದು ಪಾತ್ರೆಯಲ್ಲಿ ಒಂದು ಭಾಗ ಹಾಲು ಮೂರು ಭಾಗ ಸಗಣಿಯಿದ್ದರೆ ಅದು ಶುದ್ಧ ಎಂದು ಕರೆಯಲಾಗುವುದಿಲ್ಲ. ಅದರಲ್ಲಿ ಕಾಫಿರ್ ಸ್ಥಾನವಿದ್ದರೆ ಅದನ್ನು ಪಾಕಿಸ್ತಾನವೆಂದು ಕರೆಯಲಾಗುವುದಿಲ್ಲ.

೬. ಬೆಳಗಾವಿಯಲ್ಲಿ ೧೯೨೪ರ ಕಾಂಗ್ರೆಸ್ ಸಮಾವೇಶಗೊಂಡಾಗ ಹರ್ಡೀಕರ್‌ರಿಂದ ತರಬೇತಿ ಪಡೆದ ೧,೭೦೦ ಸ್ವಯಂ ಸೇವಕರು ಅದರ ಯಶಸ್ವಿಗೆ ದುಡಿದರು. ಇದರಲ್ಲಿ ೧೫೦ ಮಹಿಳೆಯರು ಅವರ ನಿಷ್ಠೆ, ಶಿಸ್ತು ಮತ್ತು ರಾಷ್ಟ್ರಭಕ್ತಿಗೆ ದೇಶದ ಎಲ್ಲೆಡೆಯ ಮುಖಂಡರು ಪ್ರಶಂಸೆಯ ಸುರಿಮಳೆಗೆರೆದರು. ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳವಳಿಗೆ ಸಂದ ಯಶಸ್ಸು ಸೇವಾದಳದ ಪಾಲು ಕಡಿಮೆಯದೇನಲ್ಲ.

೭. ವಿದೇಶಿ ವಸ್ತುಗಳ ಹೋಳಿ ಸಭೆ, ಮೆರವಣಿಗೆಗಳನ್ನು ಸತತವಾಗಿ ಕಂಡ ಕರ್ನಾಟಕದಲ್ಲಿ ೧೯೨೧-೨೨ರಲ್ಲಿ ೭೦ಕ್ಕೂ ಹೆಚ್ಚು ಜನರು ಬಂಧಿತರಾದರು. ಸರಕಾರದ ದಮನ ನೀತಿ ಬಲವಾಗಿತ್ತು. ಮದ್ಯದ ಅಂಗಡಿಯನ್ನು ಜನ ಮುತ್ತಿದಾಗ ಧಾರವಾಡದಲ್ಲಿ ೧೯೨೧ರ ಜುಲೈ ೧ ರಂದು ಗೋಲಿಬಾರ್ ನಡೆದು ಮಾಲಿಕ್‌ಸಾಬ್, ಗೌಸ್‌ಸಾಬ್ ಮತ್ತು ಗಫಾರ್ ಚುಕ್ತಾಯಿ ಎಂಬ ಮೂವರು ಹುತಾತ್ಮರಾದರು. ಆಗ ಆರ್.ಆರ್.ದಿವಾಕರ್, ಮುದವೀಡು ಕೃಷ್ಣರಾವ್, ವಾಮನರಾವ್ ಜತಾರ್ ಮತ್ತು ನರಸಿಂಗ್‌ರಾವ್ ಭಿಸೆ ಸೇರಿದಂತೆ ೨೯ ಜನರನ್ನು ಬಂಧಿಸಲಾಯಿತು. ಇವರ ಮೇಲೆ ದಂಗೆ ನಡೆಸಿದರೆಂಬ ಆಪಾದನೆ ಹೊರಿಸಿ ಅನೇಕರಿಗೆ ಜೈಲು ಶಿಕ್ಷೆ ವಿಧಿಸಲಾಯಿತು.

೮. ಸಂಸ್ಥಾನದ ಹೊರಗೆ ತಮ್ಮ ಶಿಕ್ಷಣ ಮುಂದುವರೆಸಲು ವಿದ್ಯಾರ್ಥಿಗಳಿಗೆ ನೆರೆಯ ಮೈಸೂರು ಹಾಗೂ ಮದರಾಸು ವಿಶ್ವವಿದ್ಯಾಲಯಗಳು ಪ್ರವೇಶ ನೀಡಲಿಲ್ಲ. ಆದರೆ ನಾಗಾಪುರ ವಿಶ್ವವಿದ್ಯಾಲಯದ ಉಪಕುಲಪತಿ ಟಿ.ಜೆ.ಕೇದಾರ ಅವರು ಈ ವಿದ್ಯಾರ್ಥಿಗಳಿಗೆ ಪ್ರವೇಶ ಕೊಡಲು ಮುಂದಾದರೂ ಹಾಗೆಯೇ ಜಬ್ಬಲಪುರ ವಿಶ್ವವಿದ್ಯಾಲಯವೂ ಸಹ ಪ್ರವೇಶ ನೀಡಿತು.

೯. ಸ್ಟೇಟ್ ಕಾಂಗ್ರೆಸ್, ಆರ್ಯ ಸಮಾಜ, ಕರ್ನಾಟಕ ಸಂಘ, ಹೈದರಾಬಾದ್ ಸ್ವದೇಶಿ ಲೀಗ್, ನಿಜಾಮ ಪ್ರಜಾಪರಿಷತ್, ಹೈದರಾಬಾದ್ ಪೀಪಲ್ಸ್ ಕನ್ವನೇಶನ್.

೧೦. ಕ್ವಿಟ್ ಇಂಡಿಯಾ ಚಳವಳಿಯು ಕನಿಷ್ಠ ಮೂರು ತಿಂಗಳ ಕಾಲವಾದರೂ ಉಗ್ರ ಸ್ವರೂಪದಲ್ಲೇ ಮುಂದುವರೆದಿತ್ತು. ಮೈಸೂರು ಸಂಸ್ಥಾನದಲ್ಲಿ ಸ್ವಲ್ಪ ತಣ್ಣಗಾದರೂ ಮುಂಬಯಿ

ಕರ್ನಾಟಕದಲ್ಲಿ ಸುಮಾರು ೨ ವರ್ಷಗಳ ಕಾಲ ಚಳವಳಿ ಬಿರುಸಾಗಿತ್ತು. ಬ್ರಿಟಿಷರ ಆಶ್ರಿತ ರಾಜರು ಆಳ್ವಿಕೆ ನಡೆಸುತ್ತಿರುವ ಕಡೆ ಅಷ್ಟು ಉಗ್ರವಾಗಿಲ್ಲದೆ, ಬ್ರಿಟಿಷರ ನೇರ ಆಳ್ವಿಕೆ ಇದ್ದ ಕಡೆ ಸತತವಾಗಿ ಬಿರುಸಾದ ಚಳವಳಿ ನಡೆದು 'ಕರ್ನಾಟಕ ಮಾದರಿ' ಎಂದೇ ಅದು ದೇಶದ್ಯಾಂತ ಪ್ರಖ್ಯಾತವಾಯಿತು.

೧೧. ಕುಷ್ಟಗಿ ತಾಲ್ಲೂಕಿನ ಬನ್ನಿಗೋಳದ ದಾಸಪ್ಪ ಎಂಬುವವರು ಕ್ರಾಂತಿಕಾರಿ ಸ್ವಾತಂತ್ರ್ಯ ಹೋರಾಟಗಾರರಾಗಿದ್ದರು. ನಿಜಾಮ ಅರಮನೆ ಎದುರು ಸತ್ಯಾಗ್ರಹ ಮಾಡಿದ್ದಕ್ಕಾಗಿ ಅವರನ್ನು ಬಂಧಿಸಿ ಹೈದರಾಬಾದ್ ಜೈಲಿಗೆ ಕರೆದೊಯ್ದು ಅಸಫಜಾಹ ಧ್ವಜವನ್ನು ಸುಟ್ಟ ಹಾಗೂ ನಿಜಾಮನ ವಿರುದ್ಧ ಘೋಷಣೆ ಕೂಗಿದ ಆರೋಪದ ಮೇಲೆ ಮಾರಾಣಾಂತಿಕವಾಗಿ ಹಿಂಸಿಸಿದ್ದರಿಂದ ಅವರು ಮರಣ ಹೊಂದಿದ್ದರು.

೧೨. ಆರ್ಯ ಸಮಾಜದ ಮಂದಿರಗಳ ಉದ್ದೇಶಗಳಲ್ಲಿ ಮುಖ್ಯವಾದವು. ೧. ಮಾನವ ಜನಾಂಗದ ಸಮಾನತೆ, ೨. ಜಾತಿ ಪದ್ಧತಿ ಖಂಡನೆ, ೩. ಶಿಕ್ಷಣ ಮತ್ತು ಸಂಸ್ಕಾರಗಳಲ್ಲಿ ಸರ್ವರಿಗೂ ಸಮಾನ ಅವಕಾಶ, ೪. ಸತ್ಯಾರ್ಥ ಪ್ರಕಾಶದ ಸಂದೇಶ ಅಂದರೆ ವೇದಗಳಿಗೆ ಹಿಂತಿರುಗಿ, ಭಾರತೀಯರಿಗೆ ಭಾರತ ಮುಂತಾದ ತತ್ವ ಪ್ರಚಾರದ ಕೇಂದ್ರಗಳಾದವು.

೧೩. ನಾನಾಸಾಹೇಬ ಪೇಶ್ವೆಯೊಂದಿಗೆ ಸಂಪರ್ಕವಿತ್ತೆಂತಲೂ ಅವನು ಬೆಳಗಾವಿಯಲ್ಲಿಯ ಬ್ರಿಟಿಷ್ ಸೈನ್ಯದಲ್ಲಿ ಸಲ್ಲಿಸುತ್ತಿದ್ದ ಭಾರತೀಯ ಸೈನಿಕರಿಗೆ ಬಂಡೇಳುವಂತೆ ಪ್ರಚೋದಿಸುತ್ತಿದ್ದನೆಂದೂ ದಾಖಲೆಗಳು ಹೇಳುತ್ತವೆ. ಮಳಖೇಡದ ಜಮೀನುದಾರ ಹಾಗೂ ವಿಜಾಪುರ ಜಿಲ್ಲೆಯ ಜಂಬಗಿಯ ದೇಶಮುಖನೂ ಇವರೊಂದಿಗೆ ಕೈಗೂಡಿಸಿದ್ದ ಜನವರಿ ೧೮೫೮ರಲ್ಲಿ ದೇಶಮುಖ ಬಸಲಿಂಗಪ್ಪ ಹಾಗೂ ಮಳಖೇಡದ ಜಮೀನುದಾರ ಇಬ್ಬರನ್ನು ಬಂಧಿಸಲಾಯಿತು.

೧೪. ಇದು ಬುದ್ಧಿಪೂರ್ವಕವಾಗಿ ಮಾಡಿದ ಕೆಲಸವೇ? ನಾನು ಹಾಗೆ ಭಾವಿಸುವುದಿಲ್ಲ. ಮೊದಲಿಂದಲೂ ತನ್ನ ಹತ್ತಿರ ಇರುವ ಪ್ರತಿಯೊಂದು ವಸ್ತುವನ್ನು ಎತ್ತಿಕೊಂಡು, ಪರೀಕ್ಷಿಸುವುದು ಆತನ ಅಭ್ಯಾಸ. ಹೊಸ ವಸ್ತುವಾಗಿದ್ದರಂತೂ ವಿಶೇಷವಾಗಿ ಎತ್ತಿ ನೋಡುತ್ತಿದ್ದ. ಇದು ಅವನಿಗೆ ಚಿಕ್ಕಂದಿನಿಂದ ಬಂದ ಚಾಳಿ. ಎಷ್ಟೋ ಸಾರಿ ನಾನಿದನ್ನು ತಡೆದಿದ್ದೇನೆ. ಅವನೆಂದೂ ರೀವಾಲ್ವರನ್ನೇ ನೋಡಿಲ್ಲ. ಆದ ಕಾರಣ ಈ ಹೊಸ ವಸ್ತು ಅವನಲ್ಲಿ ಆಸೆ ಹುಟ್ಟಿಸಿರಬೇಕು. ಅವನದನ್ನು ನೋಡಿರಬೇಕು. ನೋಡಿ ಅದರ ಮೇಲೆ ಕೈ ಹಾಕಿರಬೇಕು. ಅವನು ಉದ್ದೇಶ ಪಡದೆಯೇ ಪಿಸ್ತೂಲ್ ಹಾರಿರಬೇಕು. ಅವನೊಂದಿಗೆ ಯಾರು ಇರಲಿಲ್ಲ ಅವನನ್ನು ಯಾರು ನೋಡಲಿಲ್ಲ. ಈ ವಿಚಾರದಲ್ಲಿ ಬರೇ ಊಹೆಗಳನ್ನು ಮಾತ್ರ ಮಾಡಬಹುದು. ನಾನವನನ್ನು ಚನ್ನಾಗಿ ಬಲ್ಲವನಾಗಿ ಇದು ಆತ್ಮಹತ್ಯೆಯೆಂದು ನಾನು ನಂಬುವುದಿಲ್ಲ. ಮೆಡೋಸ್‌ನ ಅಭಿಪ್ರಾಯ.

೧೫. ಸಾಮಾನ್ಯವಾಗಿ ಜನರು ಬಂದಂತೆ ಕೂಡಿ ಸಂಘಟನೆ ನಿಜಾಮನ ಕ್ರೂರ ಆಳ್ವಿಕೆ ವಿರುದ್ಧ ಸಿಡಿದೇಳಲು ಪುಣೆಯಲ್ಲಿ ಶಿವಾಜಿ ಉತ್ಸವ ಒಂದು ಭಾಷಣದ ತುಣುಕು. ಪರಕೀಯರ ಆಳ್ವಿಕೆಯಿಂದ ದೇಶವನ್ನು ಪಾರು ಮಾಡುವುದು ಮತ್ತು ದೇಶದ ಪ್ರಾಚೀನ ವೈಭವವನ್ನು ಪುನರ್ ಪ್ರತಿಷ್ಠಾಪಿಸುವುದು ಕೇವಲ ಸ್ವರಾಜ್ಯದಿಂದ ಮಾತ್ರ ಸಾಧ್ಯ. ಮನೆಗೆ ಕಳ್ಳರು ನುಗ್ಗಿದಾಗ ಅವರನ್ನು ಮನೆಯಿಂದ ಹೊಡೆದೋಡಿಸಲು ನಮ್ಮಲ್ಲಿ ಶಕ್ತಿ ಇಲ್ಲದಿದ್ದರೆ ಅಂಥ ಮನೆಯ ಬಾಗಿಲು ಹಾಕಿ ಅವುಗಳಿಗೆ ಬೆಂಕಿ ಹಚ್ಚಲು ನಾವು ಹಿಂಜರಿಯಬಾರದು.

೧೬. ಅಂದೇ ರಾತ್ರಿ ಗುಲಬರ್ಗಾದ ಜೇವರ್ಗಿ ರಸ್ತೆಯಲ್ಲಿ ಡೈನ್‌ಮೈಟ್ ಅಸ್ಫೋಟಿಸಿತು. ಮರುದಿನ ಗಾಣಾಗ ಊರಿನಲ್ಲಿ ನಿಲ್ದಾಣವನ್ನು ರಜಾಕಾರರು ಲೂಟಿ ಮಾಡಿ ಬೆಂಕಿ ಹಚ್ಚಿದರು.

* * *

# ಅಧ್ಯಾಯ ನಾಲ್ಕು

## ಕರ್ನಾಟಕ ಏಕೀಕರಣೋತ್ತರ ಘಟ್ಟಕ್ಕೆ ಸಂಬಂಧಿಸಿದ ಕೃತಿಗಳು

೪.೧. ಏಕೀಕರಣ ಹೋರಾಟದ ಮಜಲುಗಳು

೪.೨. ದಲಿತರ ಚರಿತ್ರೆ

೪.೩. ಕೆಳವರ್ಗದ ಚರಿತ್ರೆ

೪.೪. ಮಹಿಳಾ ಚರಿತ್ರೆ

೪.೫. ರೈತರ ಚರಿತ್ರೆ

೪.೬. ಕಾರ್ಮಿಕರ ಚರಿತ್ರೆ

೪.೭. ಮೌಖಿಕ ಚರಿತ್ರೆ

## ಅಧ್ಯಾಯ ೪

## ಕರ್ನಾಟಕ ಏಕೀಕರಣೋತ್ತರ ಘಟ್ಟಕ್ಕೆ ಸಂಬಂಧಿಸಿದ ಕೃತಿಗಳು

ಭಾರತವು ವೈವಿಧ್ಯತೆಗಳ ನಡುವೆ ಏಕತೆಯನ್ನು ಸಾಧಿಸಿರುವ ರಾಷ್ಟ್ರ ರಾಜಕೀಯವಾಗಿ ಒಂದು ರಾಷ್ಟ್ರದ ಏಕತೆ ಎಷ್ಟುಮುಖ್ಯವೋ ರಾಷ್ಟ್ರದೊಳಗಿನ ಎಲ್ಲಾ ರಾಜ್ಯಗಳ ಭಾಷೆ ಮತ್ತು ಸಂಸ್ಕೃತಿಗಳ ವೈವಿಧ್ಯತೆಯನ್ನು ಕಾಪಾಡುವುದು ಅಷ್ಟೇ ಮುಖ್ಯ ಇದರಿಂದಾಗಿ ೧೯ನೇಯ ಶತಮಾನದ ಕೊನೆಯ ದಶಕಗಳಲ್ಲಿ ಕರ್ನಾಟಕ ಏಕೀಕರಣದ ಬಗ್ಗೆ ವಿಶೇಷವಾದ ಆಸಕ್ತಿ ಕನ್ನಡಿಗರಲ್ಲಿ ಉಂಟಾಯಿತು. ಭಾರತದ ಸ್ವಾತಂತ್ರ ಚಳವಳಿಯ ಜೊತೆ ಜೊತೆಗೆ ಭಾಷಿಕಚಳವಳಿ, ಅವುಗಳನ್ನಾಧರಿಸಿ ಪ್ರಾದೇಶಿಕತೆಯೂ ದಟ್ಟವಾಗುತ್ತಾ ಬಂದು ಅದು ಭಾಷಾವಾರು ಪ್ರಾಂತ್ಯಗಳು ಏಕೀಕರಣಗೊಳ್ಳುವ ಚಳವಳಿಯಾಗಿ ರೂಪುಗೊಂಡಿತು. ಆ ದಿಸೆಯಲ್ಲಿ ಕರ್ನಾಟಕ ಏಕೀಕರಣ ಚಳವಳಿಯೂ ಪ್ರಧಾನವಾದುದಾಗಿದೆ.

ಸ್ವತಂತ್ರ ಪಡೆದ ಮೇಲೆ ದೇಶದ ಪ್ರತಿಯೊಂದು ರಾಜ್ಯ, ಪ್ರತಿಯೊಂದು ಜಿಲ್ಲೆಯಲ್ಲಿಯೂ ತಮ್ಮದೇ ಅದ ಆಂತರಿಕ ಸಮಸ್ಯೆಗಳು ಉಂಟಾದವು. ಜಿಲ್ಲಾ ಮಟ್ಟದ ಸ್ಥಳೀಯ ಸರಕಾರಗಳ ಪುನರ್‌ರಚನೆ ಮತ್ತು ಅದರ ಬೆಳವಣಿಗೆ ಒಂದು ಮುಖವಾದರೆ ಕರ್ನಾಟಕ ಏಕೀಕರಣಕ್ಕೆ ನಡೆಸಿದ ಪ್ರಯತ್ನವು ಇನ್ನೊಂದು ಮುಖವಾಗಿದೆ. ಏಕೀಕರಣದ ನಂತರವು ದಮನಿನ ವರ್ಗಗಳಾದ ದಲಿತರು, ಮಹಿಳೆಯರು, ರೈತರು, ಕಾರ್ಮಿಕರು ಮುಂತಾದ ಜನರ ಸಮಸ್ಯೆಗಳು ಹೆಚ್ಚಾದವೇವಿನಹ ಕಡಿಮೆ ಆಗಲಿಲ್ಲ. ಇದರಿಂದಾಗಿ ಅವರಲ್ಲಿಯೇ ಮತ್ತಷ್ಟು ಸಂಘಟನೆಗಳು ಉದಯಗೊಂಡು ಹೋರಾಟಗಳನ್ನು ಕೈಗೊಳ್ಳುವುದರ ಮೂಲಕ ಪರಿಹಾರ ಕಂಡು ಕೊಳ್ಳಲಾರಂಭಿಸಿದರು.

ಪ್ರಸ್ತುತ ಈ ಅಧ್ಯಯನವನ್ನು ತಿಳಿದುಕೊಳ್ಳಲು ಲಭ್ಯವಿರುವ ಅನೇಕ ದಾಖಲೆಗಳು ಮತ್ತು ಕೃತಿಗಳು ಬಳಸಿಕೊಂಡರು. ಸೂರ್ಯನಾಥ ಕಾಮತ್ ಅವರು ಸಂಪಾದಿತ 'ಕರ್ನಾಟಕ ರಾಜ್ಯ ಗ್ಯಾಸ್‌ಟಿಯರ್' (೧೯೮೪), ಶಕುಂತಲಾ ದುರಗಿ ಅವರ 'ಮಹಿಳಾ ಸಾಹಿತ್ಯ ಮತ್ತು ಸಮಸ್ಯೆಗಳು' (೧೯೮೮), ಎಂ.ಬಿ.ಪಾಟೀಲ ಅವರು ಸಂಪಾದಿಸಿದ 'ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್' (೧೯೯೭:೯೭-೧೦೦), ಬಿ.ಷೇಕ್ ಅಲಿ ಅವರ ಕರ್ನಾಟಕ ಚರಿತ್ರೆ (೧೯೯೭), ಮ.ನ.ಜವರಯ್ಯರವರ 'ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ' (೧೯೯೪), ಆರ್.ವಿ. ಭಂಡಾರಿ ಅವರ 'ವರ್ಣದಿಂದ ವರ್ಗದ ಕಡೆಗೆ' (೨೦೦೩), ವಿಜಯಶ್ರೀ ಸಬರದ ಅವರು ಸಂಪಾದಿಸಿದ 'ಮಹಿಳೆ ಶೋಷಣೆ ಸವಾಲುಗಳು' (೨೦೦೫), ವಿರೂಪಾಕ್ಷಿ ಪೂಜಾರಹಳ್ಳಿ ಅವರು ಸಂಪಾದಿಸಿದ 'ದಲಿತರು ಮತ್ತು ಚರಿತ್ರೆ' (೨೦೦೫) ವಿಜಯ್ ಪೂಣಚ್ಚ ಅವರ 'ರೈತ ಚಳವಳಿಗಳು' (೧೯೯೯), ಸಿ.ಆರ್. ಗೋವಿಂದರಾಜು ಅವರ 'ಕರ್ನಾಟಕ ಏಕೀರಣ ಹಾಗೂ ನಾಮಕರಣ' (೨೦೦೫), ಆರ್.ಆರ್.ದಿವಾಕರ್ ಅವರು ಸಂಪಾದಿಸಿದ 'ಕರ್ನಾಟಕದ ಪರಂಪರೆ' (೨೦೦೬:೫೫೦-೫೭೩), ನರಸಿಂಹಶೆಟ್ಟಿ ಅವರ 'ಎತ್ತ ಸಾಗಿದೆ ನಮ್ಮ ನಾಡು' (೨೦೦೦), ಕೆ.ರಾಮು ಅವರ ಕರ್ನಾಟಕ ಏಕೀಕರಣ (೧೯೯೭), ಪಾಟೀಲ ಕಲ್ಲನಗೌಡ ಅವರ ಕರ್ನಾಟಕ ಏಕೀಕರಣದ ಹಾದಿಯಲ್ಲಿ (೧೯೮೬), ಬಿ.ಸಿ. ಮಹಾಬಲೇಶ್ವರಪ್ಪ ಅವರ 'ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳವಳಿಗಳು' (೨೦೦೮:೧೨೬-೧೪೫) ಮುಂತಾದ ಕೃತಿಗಳು ಅಧ್ಯಯನಕ್ಕೆ ಸಹಾಯಕವಾಗಿವೆ ಹಾಗೂ ಎಂ.ಫಿಲ್ ಮತ್ತು ಪಿಎಚ್.ಡಿ ಸಂಶೋಧನಗಳಾದ ಮಂಜುಳಾ ಬಿ. ಚಿಂಚೋಳಿರವರ 'ಡಿಪ್ರೆಸ್ಡ್ ಕ್ಲಾಸೆಸ್ ಇನ್ ಹೈದರಾಬಾದ್ ಕರ್ನಾಟಕ ಏರಿಯಾ ಅಂಡರ ದಿ ನಿಜಾಮ್ಸ್ ಡೈಮೇನ್‌ಷನ್ ೧೭೪೨-೧೯೪೮' (೧೯೮೯), ರಾಜಶೇಖರ ವಿ. ಬೀರನಳ್ಳಿರವರ 'ಇಂಪಾಕ್ಟ್ ಆಫ್ ಟ್ಯಾಂಕ್ ಏರಿಗೇಷನ್ ಆನ್ ಅಗ್ರೀಕಲ್ಚರ್ ಎ ಕೇಸ್ ಸ್ಟಡಿ ಆಫ್ ಗುಲಬರ್ಗಾ ಡಿಸ್ಟ್ರಿಕ್ಟ್' (೧೯೯೪), ಸಿಂಧೇ ಜಗನಾಥ ಅವರ 'ಆರ್.ಅರ್ಗನೇಜೇಷನ್ ಆಫ್ ಶೇಡ್ಯೋಲ್ಡ್ ಕಾಸ್ಟ್ ಆ್ಯಂಡ್ ಸೋಷಿಯಲ್ ಚೇಂಜ್' (೨೦೦೨), ವಿಜಯಕುಮಾರ ಹೆಚ್.ಸಾಲಿಮನಿರವರ 'ಯಂಡಿಕೇಷನ್ ಆಫ್ ಅನ್‌ಟಚ್ಚಬಿಲಿಟಿ ಇನ್ ಪೋಸ್ಟ್ ಇಂಡ್‌ಪೆಂಡೆನ್ಸ್ ಕರ್ನಾಟಕ ೧೯೪೭-೧೯೮೦' (೨೦೦೪), ದೇಶಮನ್ಯ ಜಾಗ್ರತಿ ಬಿ.ಎ ಅವರ 'ಸ್ಟಡಿ ಆಫ್ ಫಿಮೇಲ್ ಅಗ್ರೀಕಲ್ಚರಲ್ ಲೇಬರ್ಸ್ ಇನ್ ಗುಲಬರ್ಗಾ ಡಿಸ್ಟ್ರೀಕ್ಟ್' (೧೯೯೧), ಗಾಂಧೀಜಿ ಚಂದ್ರಪ್ಪರವರ 'ಡಾ.ಬಿ.ಆರ್.ಅಂಬೇಡ್ಕರ್ ಮತ್ತು ವುಮನ್ ಯಮ್ಪವರ ಮೆಂಟ್' (೨೦೦೭) ಮುಂತಾದವು ಈ ಅಧ್ಯಯನಕ್ಕೆ ಸಹಕಾರಿಯಾಗಿವೆ.

## ಏಕೀಕರಣ ಹೋರಾಟದ ಮಜಲುಗಳು

೧೯೫೬ಕ್ಕಿಂತ ಪೂರ್ವದಲ್ಲಿ ಕನ್ನಡಿಗರು ಹೆಚ್ಚಾಗಿದ್ದ ಪ್ರದೇಶಗಳು ಬೇರೆ ಬೇರೆ ಪ್ರಾಂತ್ಯ

ಮತ್ತು ಸರಕಾರಗಳಲ್ಲಿ ಹರಿದು ಹಂಚಿಹೋಗಿತ್ತು. ಪ್ರಾಚೀನ ಕರ್ನಾಟಕ ಗಡಿ ರೇಖೆಯು ಗುರುತಿಸುವ ಪ್ರಯತ್ನ ಮಾಡಬಹುದಾಗಿದೆ. ಹೀಗೆ ಗುರುತಿಸಲ್ಪಡುವ ಗಡಿರೇಖೆಗಳು ಆಡಳಿತಾತ್ಮಕ ಮತ್ತು ರಾಜಕೀಯ ಪ್ರಧಾನವಷ್ಟೇ ಹೊರತು ಭಾಷಿಕ ಅಥವಾ ಸಂಸ್ಕೃತಿಕ ಗಡಿರೇಖೆಯಲ್ಲ. ಕರ್ನಾಟಕದ ಮಟ್ಟಿಗೆ ಉತ್ತರ ಮತ್ತು ದಕ್ಷಿಣ ಗಡಿರೇಖೆಗಳ ಉಲ್ಲೇಖ ಪ್ರಥಮವಾಗಿ ತಿಳಿಯುವುದು ಶ್ರೀ ವಿಜಯನ ಕವಿರಾಜಮಾರ್ಗದಲ್ಲಿ 'ಕಾವೇರಿಯಿಂದಾ ಮೊ ಗೋದವರಿವರ ಮಿರ್ದ್ದ ನಾಡದಾ ಕನ್ನಡದೋಳ್' ಎಂದು ಉಲ್ಲೇಖಿಸಲಾಗಿದೆ. ಕರ್ನಾಟಕ ಗಡಿ ರೇಖೆಯು ಎಂದಿಗೂ ಸ್ಥಿರವಾಗಿರಲಿಲ್ಲ ಅನೇಕ ರಾಜವಂಶಗಳು ಕರ್ನಾಟಕವನ್ನಾಳಿವೆ. ಇವರ ಸಾಮರ್ತ್ಯ ತಕ್ಕಂತೆ ಸಾಮ್ರಾಜ್ಯ ವಿಸ್ತರಿಸಿತು ಮತ್ತು ಕುಗ್ಗಿತು. ವಿಧ್ರಗೊಂಡ ಕರ್ನಾಟಕವು ಬೇರೊಂದು ಭಾಷೆ ಮತ್ತು ಸಂಸ್ಕೃತಿಯನ್ನು ಬಲವಂತವಾಗಿ ಒಪ್ಪಬೇಕಾದ ಪರಿಸ್ಥಿತಿ ಇತ್ತು. ಇಂತಹ ಪರಿಸ್ಥಿತಿಯಲ್ಲಿ ಕನ್ನಡಿಗರು ತಾವೆಲ್ಲರೂ ಮತ್ತೆ ಒಟ್ಟು ಗೂಡುವ ಪ್ರಯತ್ನ ಮಾಡಿದರು. ಇದರಿಂದಾಗಿ ದೀರ್ಘಕಾಲದ ಹೋರಾಟ ಮಾಡಬೇಕಾಯಿತು.

ಕನ್ನಡ ಭಾಷಿಕರೆ ಅಧಿಕವಾಗಿದ್ದ ಪ್ರಾಂತ್ಯಗಳೂ ಬ್ರಿಟಿಷ್ ಆಡಳಿತದಲ್ಲಿ ೨೦ ಘಟಕಗಳನ್ನಾಗಿ ಹಂಚಿ ಹೋಗಿದ್ದವು.[೧] ಅದರಲ್ಲಿ ಮೈಸೂರು ಸಂಸ್ಥಾನ ಹೊರತುಪಡಿಸಿ ಉಳಿದ ಸಂಸ್ಥಾನದ ರಾಜರು ಮರಾಠಿ ಭಾಷಿಕರೆ ಆಗಿದ್ದರಿಂದ ಆಯಾಯ ಪ್ರದೇಶದ ಭಾಷೆ ಮರಾಠಿ ಹೆಚ್ಚಾಗಿತ್ತು. ಕನ್ನಡಿಗರು ಅನೇಕ ಸಮಸ್ಯೆಗಳು ಎದುರಿಸಬೇಕಾಯಿತು. ಇಂಥಹ ಪರಿಸ್ಥಿತಿಯಲ್ಲಿ ಕನ್ನಡಿಗರೂ ಬಂದಾಗಲೂ ಹೋರಾಡಬೇಕಾದ ಪರಿಸ್ಥಿತಿ ೧೯ನೇಯ ಶತಮಾನದ ಕೊನೆಯ ವರ್ಷದಲ್ಲಿ ಸೃಷ್ಠಿಯಾಯಿತು. ಮೇಲಿನ ಅಂಶಗಳು ಗೋಪಾಲರಾವ್ (೨೦೦೮:೫೬), ರಾಮು (೧೯೯೭:೨೪), ನರಸಿಂಹಶೆಟ್ಟಿ (೨೦೦೦:೩೫-೩೬) ತಮ್ಮ ಕೃತಿಗಳಲ್ಲಿ ತಿಳಿಸಿದ್ದಾರೆ.

ಹೈದರಾಬಾದ್ ಸಂಸ್ಥಾನದ ಭಾಗವಾಗಿದ್ದ ಗುಲಬರ್ಗಾ ಜಿಲ್ಲೆಯು ರಾಜ್ಯದ ಆಡಳಿತ ಭಾಷೆಯಾಗಿದ್ದ ಉರ್ದುವಿನ ಪ್ರಭಾವದಿಂದ ನರಳುತ್ತಿತ್ತು. ಕನ್ನಡ ಭಾಷೆ ಬೆಳೆಯಬೇಕು ಅದು ಆಡಳಿತ ಹಾಗೂ ಶಿಕ್ಷಣದಲ್ಲಿ ಮಹತ್ವದ ಸ್ಥಾನ ಪಡೆದುಕೊಳ್ಳಬೇಕು ಎಂಬುದು ಇಲ್ಲಿನ ಜನತೆಯ ಅಭಿಲಾಷೆಯಾಗಿತ್ತು. ಈ ಬಗೆಯ ಸನ್ನಿವೇಶದ ಜಾಗೃತಿಯು ಕನ್ನಡಿಗರಲ್ಲಿ ಒಗ್ಗಟ್ಟನ್ನು ಹಾಗೂ ಪ್ರತ್ಯೇಕ ರಾಜ್ಯದ ಬೇಡಿಕೆಯನ್ನು ಒತ್ತಾಯಿಸುವ ಮನೋಭಾವವನ್ನು ಬೆಳೆಸಿತು. ಭಾಷಾಭಿಮಾನದ ಮೊದಲು ಬೀಜಾಂಕುರ ಆದದ್ದು ಧಾರವಾಡದಲ್ಲಿ ೨೦-೭-೧೮೯೦ ರಂದು ಕರ್ನಾಟಕ 'ವಿದ್ಯಾವರ್ಧಕ ಸಂಘ' ಸ್ಥಾಪನೆಗೊಂಡಿತು. ಇದಕ್ಕೆ ಮೂಲ ಕಾರಣಕರ್ತರು ರಾ.ಹ.ದೇಶಪಾಂಡೆರವರು ಈ ಸಂಘವು ೧೮೯೬ ನವೆಂಬರ್ ವೇಳೆಗೆ ತನ್ನ ಮುಖವಾಣಿಯಾದ 'ವಾಗ್ಭೂಷಣ' ಎಂಬ ಮಾಸಿಕ ಪತ್ರಿಕೆ ಹೊರಟಿಸಿತು. ಇದರಲ್ಲಿ ಕನ್ನಡ ನಾಡು-ನುಡಿ ಸಂಸ್ಕತಿಗಳ ಪ್ರಚಾರ ಜಾಗೃತಿಗೆ ಆದ್ಯತೆ ನೀಡಲಾಯಿತು. ೧೯೧೫ ಕನ್ನಡ ಸಾಹಿತ್ಯ ಪರಿಷತ್ತು

ಸ್ಥಾಪಿಸಲಾಯಿತು ಸಾಹಿತ್ಯದ ಮೂಲಕ ಕನ್ನಡ ಪ್ರಜ್ಞೆಯನ್ನು ಬೆಳೆಸುವಲ್ಲಿ ಪ್ರಮುಖ ಪಾತ್ರವಹಿಸಿತು. ೧೯೧೫ ರಿಂದ ೧೯೫೫ ವರೆಗೆ ಸುಮಾರು ೩೮ ಸಾಹಿತ್ಯ ಸಮ್ಮೇಳನ ನಡೆದವು.[೨] ಕನ್ನಡ ಸಾಹಿತಿಗಳು ಭಾಷಾಭಿಮಾನಿಗಳು ಒಂದೆಡೇ ಸೇರಿ ಪ್ರಾಂತಾಭಿಮಾನ ಬೆಳೆಸಿಕೊಂಡು ಏಕೀಕರಣ ಸಾಧಿಸಲು ಸಹಾಯಕವಾಯಿತು. ೩-೫-೧೯೧೫ ರಂದು ಬೆಂಗಳೂರಿನ ಸಾಹಿತ್ಯ ಸಮ್ಮೇಳನದಲ್ಲಿ ನಡೆಯಿತು. ನಾಡು, ನುಡಿ, ಸಾಹಿತ್ಯ, ಸಂಸ್ಕೃತಿಗಳ ಅಭಿವೃದ್ಧಿಗಾಗಿ ೫.೫.೧೯೧೫ ರಂದು ಅಧಿಕೃತವಾಗಿ 'ಕರ್ನಾಟಕ ಸಾಹಿತ್ಯ ಪರಿಷತ್ತು' ಸಂಸ್ಥೆಯನ್ನು ಹುಟ್ಟುಹಾಕಿದರು. ೧೯೧೬ರಲ್ಲಿ ಕರ್ನಾಟಕ ಸಭಾ ಸ್ಥಾಪನೆಯು ಏಕೀಕರಣ ಚಳವಳಿಯು ಸಾಂಸ್ಕೃತಿಕ ರೂಪ ಪಡೆದ ಮೊಟ್ಟಮೊದಲ ರಾಜಕೀಯ ಸಂಸ್ಥೆ ಎಂದು ಹೇಳಬಹುದು. ಧಾರವಾಡದಲ್ಲಿ 'ಕರ್ನಾಟಕ ಸಭಾ' ಮತ್ತು ಬೆಂಗಳೂರಿನಲ್ಲಿ 'ಕನ್ನಡ ಸಾಹಿತ್ಯ ಪರಿಷತ್ತು' ಒಂದೇ ಕಾಲಕ್ಕೆ ಸ್ಥಾಪಿತವಾದವು. ಈ ಎರಡು ಸಂಸ್ಥೆಗಳು ಏಕೀಕೃತ ಕರ್ನಾಟಕದ ರಚನೆಗಾಗಿ ಕಟ್ಟಿಬದ್ಧವಾಗಿದ್ದವು ಎಂದು ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೭೭:೯೭), ರಾಮು (೧೯೭೭:೨೯:೫೭), ನರಸಿಂಹಶೆಟ್ಟಿ (೨೦೦೦:೩೭-೩೮), ಗೋವಿಂದರಾಜು (೨೦೦೫:೧೪-೧೬) ಮುಂತಾದ ಕೃತಿಕಾರರು ಮೇಲಿನ ವಿಷಯಗಳು ತಮ್ಮ ಕೃತಿಗಳಲ್ಲಿ ಪ್ರಸ್ತಾಪಿಸಿದ್ದಾರೆ.

ಅಖಿಲ ಭಾರತ ಕಾಂಗ್ರೆಸ್ಸಿನ ೩೯ನೇಯ ಅಧಿವೇಶನವು ೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆಯಿತು. ಈ ಅಧಿವೇಶನವು ಕನ್ನಡ ಪ್ರಜ್ಞೆಯನ್ನು ಬೆಳೆಸಲು ಮತ್ತು ಚಳವಳಿಗೆ ಸ್ಫೂರ್ತಿಯ ಸೆಲೆಯಾಯಿತು. ಇದೇ ಸಂದರ್ಭದಲ್ಲಿ ೧೯೨೮ ರಲ್ಲಿ ಬೆಂಗಳೂರಿನಲ್ಲಿ ಕರ್ನಾಟಕ ಏಕೀಕರಣ ಸಂಘ ಸ್ಥಾಪನೆಗೊಂಡಿತು. ಬೆನಗಲ್ ರಾಮರಾಯರು ಅಧ್ಯಕ್ಷರಾಗಿ ಶಿವಮೂರ್ತಿ ಶಾಸ್ತ್ರೀಗಳು ಕಾರ್ಯದರ್ಶಿಗಳಾಗಿದ್ದರು. ಕನ್ನಡ ಪರವಾದ ಅಭಿಮಾನ ಮೂಡಿಸುವಲ್ಲಿ ಪ್ರಮುಖವಾದ ಪಾತ್ರವಹಿಸಿತು. ೧೯೩೭ ರ ಅಕ್ಟೋಬರ್ ೧೦ರಂದು ಕರ್ನಾಟಕ ಏಕೀಕರಣ ದಿನವನ್ನಾಗಿ ಆಚರಿಸಲಾಯಿತು. ಗುಲಬರ್ಗಾ ಜಿಲ್ಲೆಯಲ್ಲಿ ಸಾಹಿತ್ಯ ಸಂಘ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದವು. ಸುರಪುರದ 'ಕರ್ನಾಟಕ ಸಂಘ', ರಂಗಂ ಪೇಟೆಯ 'ಕನ್ನಡ ಸಾಹಿತ್ಯ ಸಂಘ' ೧೯೪೩ರಲ್ಲಿ ಎ.ಆರ್.ಬುದ್ದಿವಂತ ಶೆಟ್ಟರ್ ಹಾಗೂ ಸಗರ ಕೃಷ್ಣಚಾರ್ಯ ಮುಂತಾದವರ ನೇತೃತ್ವದಲ್ಲಿ ಆರಂಭವಾಯಿತು. ೧೯೪೬ರಲ್ಲಿ ಶಹಬಾದನಲ್ಲಿ ಗೋಪಾಲರಾವ್ ಕಟ್ಟಿ, ತಿಮ್ಮಣ್ಣಾಚಾರ್ಯ, ಅರೇಕಲ್ ಮುಂತಾದ ಗಣ್ಯರು 'ಕನ್ನಡ ಸಂಘ' ಸ್ಥಾಪಿಸಿ ಉಪನ್ಯಾಸ, ನಾಡಹಬ್ಬ ಇತ್ಯಾದಿ ಕನ್ನಡಪರ ಕೆಲಸದಲ್ಲಿ ತೋಡಗಿದರು. ಇತರ ಕನ್ನಡ ಸಂಘಗಳು ಸ್ವಾತಂತ್ರ್ಯ ಪೂರ್ವದ ದಶಕದಲ್ಲಿ ಜಿಲ್ಲೆಯ ವಿವಿಧ ಭಾಗಗಳಲ್ಲಿ ಅಸ್ತಿತ್ವಕ್ಕೆ ಬಂದು, ಕನ್ನಡಿಗರಲ್ಲಿ ಸ್ವಾಭಿಮಾನವನ್ನು ಉಂಟುಮಾಡಿ ಸಕ್ರಿಯವಾಗಿ ಸಂಘಟಿತರಾಗಲು ಸಹಾಯ ಮಾಡಿದವು. ಈ ವಿಷಯಗಳು ಪಾಟೀಲ (೧೯೭೭:೯೭), ಕೃಷ್ಣಕೋಲ್ಹಾರ ಕುಲಕರ್ಣಿ (೨೦೦೬:೧೭೮), ನರಸಿಂಹಶೆಟ್ಟಿ (೨೦೦೦:೩೯-೪೦), ಗೋವಿಂದರಾಜು (೨೦೦೫:೨೫) ಕೃತಿಗಳಲ್ಲಿ ತಿಳಿಸಿದ್ದಾರೆ.

ಪ್ರಥಮ ಬಾರಿಗೆ ೧೯೩೪ರಲ್ಲಿ ಅಖಿಲ ಕರ್ನಾಟಕ ಸಾಹಿತ್ಯ ಪರಿಷತ್ತಿನ ಸಮ್ಮೇಳನವು ರಾಯಚೂರಿನಲ್ಲಿ ಜರುಗಿತು ಇದರಲ್ಲಿ ಗುಲಬರ್ಗಾ ಜಿಲ್ಲೆಯಿಂದಲೂ ಕನ್ನಡಾಭಿಮಾನಿಗಳು ಭಾಗವಹಿಸಿದರು. ಇದೇ ಸಮಯಕ್ಕೆ ನಿಜಾಮ ಕರ್ನಾಟಕದ ಕೇಂದ್ರೀಯ ಸಮಿತಿಯೊಂದು ಅಸ್ತಿತ್ವಕ್ಕೆ ಬಂದು, ೧೯೩೭ ಹೈದರಾಬಾದನಲ್ಲಿ ಬೆಳ್ಳಿ ಹಬ್ಬದ ಉತ್ಸವದಲ್ಲಿ ಗುಲಬರ್ಗಾ ಜಿಲ್ಲೆಯ ಜನರು ಇದನ್ನು ಉಪಯೋಗಿಸಿಕೊಂಡು, ನಿಜಾಮ ಕರ್ನಾಟಕ ಪರಿಷತ್ತಿನ ಪ್ರಥಮ ಐತಿಹಾಸಿಕ ಸಭೆಯು ಸಮಾವೇಶಗೊಂಡಿತು. ಮುಂದೆ ಗುಲಬರ್ಗಾದವರಾದ ಆಟ ಜನಾರ್ಥನ್ ರಾವ್ ದೇಸಾಯಿ ಅವರು 'ನಿಜಾಮ ಕರ್ನಾಟಕ ಪರಿಷತ್ತಿನ ಪ್ರಥಮ ಐತಿಹಾಸಿಕ ಸಭೆಯು ಸಮಾವೇಶಗೊಂಡಿತು. ಮುಂದೆ ಗುಲಬರ್ಗಾದವರಾದ ಜನಾರ್ಧನ್‌ರಾವ್ ದೇಸಾಯಿ ಅವರು 'ನಿಜಾಮ ಕರ್ನಾಟಕ ಪರಿಷತ್ತಿನ' ಪ್ರಧಾನ ಕಾರ್ಯದರ್ಶಿಗಳಾಗಿ ೨೪ನೇ ಅಕ್ಟೋಬರ್ ೧೯೨೪ರಿಂದ ಪ್ರಥಮ ಸತ್ಯಗ್ರಹವನ್ನು ಆರಂಭಿಸಿದರು. ತರುವಾಯ ೧೯೪೨ ಮಾರ್ಚ ತಿಂಗಳಿನಲ್ಲಿ ಸುರಪುರದಲ್ಲಿ ಅಣ್ಣರಾವ್ ಗುಣಮುಖಿ ಅಧ್ಯಕ್ಷತೆಯಲ್ಲಿ ರಾಯಚೂರಿನಲ್ಲಿ ಕಕ್ಕೇರಿ ಹನುಮಂತರಾಯರ ಅಧ್ಯಕ್ಷತೆಯಲ್ಲಿ ಅಧಿವೇಶನ ಜರುಗಿತು. ನಂತರ ೧೯೪೬ರಲ್ಲಿ ಯಾದಗಿರಿಯಲ್ಲಿ ಕಕ್ಕೇರಿ ಹನುಮಂತರಾಯರ ಅಧ್ಯಕ್ಷತೆಯಲ್ಲಿಯೇ ಅಧಿವೇಶನ ಜರುಗಿತು ಇದಕ್ಕೆ ಜಗನ್ನಾಥ ಚಂದ್ರಕಿಯವರು ಸಕ್ರಿಯವಾಗಿ ಭಾಗವಹಿಸಿದರು ಎಂದು ಪಾಟೀಲ (೧೯೯೭:೯೮), ಗೋವಿಂದರಾಜು (೨೦೦೫:೪೮) ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿದ್ದಾರೆ.

ಹೈದರಾಬಾದ್ ಸಂಸ್ಥಾನ ಭಾರತ ಒಕ್ಕೂಟದೊಂದಿಗೆ ೧೯೪೮ ಸೆಪ್ಟೆಂಬರ್ ತಿಂಗಳಿನಲ್ಲಿ ವಿಲೀನಗೊಂಡಿತು. ಒಕ್ಕೂಟದೊಂದಿಗೆ ಸೇರಿದ ನಂತರ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನದ ಕಾರ್ಯಕರ್ತರ ಶ್ರಮದಿಂದಾಗಿ ಭಾಷಾವಾರು ಪ್ರಾಂತ ರಚನೆಯನ್ನು ಒತ್ತಾಯಿಸುವ ಚಳವಳಿ ತೀವ್ರಗೊಂಡಿತು. ಗುಲಬರ್ಗಾದಲ್ಲಿ ೧೯೪೯ ಮಾರ್ಚ್ ೫, ೬, ಮತ್ತು ೭ ರಂದು ೩೨ ನೇಯ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನವು ಶ್ರೀಶರಣಬಸವೇಶ್ವರ ದೇವಾಲಯದ ಆವರಣದಲ್ಲಿ ಉತ್ತಂಗಿ ಚನ್ನಪ್ಪನವರ ಅಧ್ಯಕ್ಷತೆಯಲ್ಲಿ ಜರುಗಿತು. ಈ ಸಮ್ಮೇಳನದಲ್ಲಿ ಅನೇಕ ನಾಯಕರು ಭಾಗವಹಿಸಿದರು.[૩] ಇಲ್ಲಿನ ಕ್ನನಡಿಗರ ಹಿತಾಸಕ್ತಿಗಳನ್ನು ಅವರ ಗತವೈಭವವನ್ನು ಕಾಯ್ದುಕೊಳ್ಳುವಲ್ಲಿ ಹಾಗೂ ಭಾಷೆಯ ಬೆಳವಣಿಗೆ ದೃಷ್ಠಿಯಿಂದ ಇದೊಂದು ಮೈಲುಗಲ್ಲಾಗಿದೆ. ಭಾಷಾವಾರು ಪ್ರಾಂತ್ಯ ರಚನೆ ಕುರಿತು ಎಸ್.ಕೆ.ಧರ್ ಅವರ ಅಧ್ಯಕ್ಷತೆಯಲ್ಲಿ ೧೭-೬-೧೯೪೮ ರಲ್ಲಿ ಧರ್ ಸಮಿತಿ ಆಸ್ತಿತ್ವಕ್ಕೆ ಬಂತು. ಈ ಸಮೀತಿಯು ನಾಲ್ಕು ರಾಜ್ಯಗಳಿಗೆ ಪ್ರವಾಸಮಾಡಿ ಸಾವಿರಕ್ಕೂ ಹೆಚ್ಚಿನ ಮನವಿ ಹಾಗೂ ಏಳುನೂರಕ್ಕೂ ಹೆಚ್ಚಿನ ಸಾಕ್ಷಿದಾರರ ಪುರಾವೆಗಳು ಸಂಗ್ರಹಿಸಿ ೧೯೪೮ ಡಿಸೆಂಬರ್ ೧೦ ರಂದು ವರದಿ ಸಲ್ಲಿಸಿತು. ಇದರಲ್ಲಿ ಭಾಷಾವಾರು ವಿಂಗಡನೆಯು ರಾಷ್ಟ್ರಹಿತಕ್ಕೆ ಒಳ್ಳೆಯದಲ್ಲ ಎಂಬ ನಿಲುವನ್ನು ವ್ಯಕ್ತಪಡಿಸಿತು. ಈ ವರದಿಯನ್ನು

ಕರ್ನಾಟಕ ಪ್ರದೇಶ ಕಾಂಗ್ರೆಸ್ ತಿರಸ್ಕರಿಸಿತು. ಗೋವಿಂದರಾಜು (೨೦೦೫:೪೫-೪೭), ನರಸಿಂಹಶೆಟ್ಟಿ (೨೦೦೦:೪೧) ತಮ್ಮ ಕೃತಿಗಳಲ್ಲಿ ತಿಳಿಸಿದ್ದಾರೆ.

೧೯೪೮ ಡಿಸೆಂಬರ್ ತಿಂಗಳಿನಲ್ಲಿ ಜೆ.ವಿ.ಪಿ. ಅಥವಾ ತ್ರಿಮೂರ್ತಿ ಸಮಿತಿಯನ್ನು ನೇಮಿಸಲಾಯಿತು. ಇದು ತನ್ನ ವರದಿಯನ್ನು ೧೯೪೯ ಎಪ್ರಿಲ್ ೧ರಂದು ಸಲ್ಲಿಸಿ ಆಂಧ್ರಪ್ರದೇಶದ ರಚನೆಗೆ ಒಲವು ತೋರಿಸಿ ಆಂಧ್ರ ಪ್ರಾಂತ್ಯದ ರಚನೆಗೆ ಒಪ್ಪಿ ಇತರ ರಾಜ್ಯಗಳ ಬೇಡಿಕೆಯನ್ನು ತಿರಸ್ಕರಿಸುವುದರೊಂದಿಗೆ 'ಧರ್' ಸಮಿತಿಯ ಅಭಿಪ್ರಾಯವನ್ನು ಒಪ್ಪಿತು. ಆಂಧ್ರ ಪ್ರದೇಶದ ನಿರ್ಮಾಣ ವಿಳಂಬವಾಗುತ್ತಿರುವುದಕ್ಕೆ ಕಾಂಗ್ರೆಸ್ ಧೋರಣೆಯನ್ನು ವಿರೋಧಿಸಿ ಪೊಟ್ಟಿ ಶ್ರೀರಾಮುಲು ೧೯೫೨ ರಲ್ಲಿ ಆಂಧ್ರರಾಜ್ಯವನ್ನು ರಚಿಸಲು ಸರಕಾರವನ್ನು ಒತ್ತಾಯಿಸಲು ಆಮರಣಾಂತ ಉಪವಾಸವನ್ನು ಕೈಗೊಂಡರು. ಇವರು ೫೮ ದಿನಗಳ ಉಪವಾಸದ ನಂತರ ಡಿಸೆಂಬರ್ ೧೫ ರಂದು ನಿಧನ ಹೊಂದಿದರು. ಈ ಘಟನೆಯಿಂದಾಗಿ ಆಂಧ್ರ ಪ್ರದೇಶದಲ್ಲೆಲ್ಲ ವ್ಯಾಪಕ ಗಲಭೆ, ಜೀವ, ಆಸ್ತಿಪಾಸ್ತಿಗೆ ಹಾನಿ ಉಂಟಾಯಿತು. ಇದಕ್ಕೆ ಮಣಿದು ಡಿಸೆಂಬರ್ ೧೯ ರಂದು ನೆಹರೂ ಅವರು ರಾಜ್ಯದ ರಚನೆಗೆ ಸರಕಾರ ಒಪ್ಪಿಗೆ ನೀಡಿತು. ಇದರಿಂದ ಕರ್ನಾಟಕದ ಜನತೆ ಮನದಲ್ಲಿ ಏಕೀಕರಣ ಒಲವು ಗಟ್ಟಿಕೊಂಡಿತು. ನೆಹರೂ ಅವರು ಬೆಳಗಾವಿಗೆ ೧೯೫೩ ಡಿಸೆಂಬರ್ ೨೪ರಂದು ಬಂದ ಸಂದರ್ಭದಲ್ಲಿ ಗುಲಬರ್ಗಾದ ಜನತೆಯ ಪರವಾಗಿ ಶರಣಗೌಡರು ಕರ್ನಾಟಕ ಏಕೀಕರಣ ಅವಶ್ಯಕತೆಯ ಬಗೆಗೆ ಮನವಿಯೊಂದನು ಸಲ್ಲಿಸಿದರು. ೧೯೫೩ ರ ಕೆ.ಪಿ.ಸಿ.ಸಿ.ಯ ಅಧಿವೇಶನದಲ್ಲೂ ವಿಲೀನವಾಗುವ ಮನವಿ ಶೀಘ್ರವಾಗಿ ಪರಿಗಣಿಸಬೇಕೆಂದು ಒತ್ತಾಯಿಸಿದರು. ಕರ್ನಾಟಕದಲ್ಲಿ ದಿನೇ ದಿನೇ ಭಾಷಾವಾರು ಪ್ರಾಂತ ರಚನೆ ಚಳವಳಿಯು ತೀವ್ರಗೊಳ್ಳುತ್ತಾ ಬಂತು. ಬೃಹತ್ ಮೆರವಣಿಗೆಗಳು ಸಂಘಟಿಸಲಾಯಿತು. ಕರ್ನಾಟಕಾದ್ಯಾಂತ ಸುಮಾರು ೬೦೦೦ ಸತ್ಯಾಗ್ರಹಿಗಳನ್ನು ಬಂಧಿಸಲಾಯಿತು. ಅನೇಕ ಕಡೇ ಮುಷ್ಕರ ನಡೆಸಲಾಯಿತು. ಅದರಲ್ಲಿ ಗುಲಬರ್ಗಾದ ಜಗತ್ ಸರ್ಕಲ್ ಬಳಿ ಮಹಾಗಾಂವನ ಚಂದ್ರಶೇಖರ ಪಾಟೀಲ್ ಉಪವಾಸ ಮುಷ್ಕರ ಕೈಗೊಂಡರು. ಈ ಒತ್ತಾಯಗಳಿಗೆ ಮಣಿದು ನೆಹರೂ ಅವರು ೧೯೫೩ರಲ್ಲಿ ಫಜಲ್ ಆಲಿ ಆಯೋಗವನ್ನು ನೇಮಿಸಿದರು.[೪] ಈ ಆಯೋಗ ಫಜಲ್ ಅಲಿ ನೇತೃತ್ವದಲ್ಲಿ ೧೦೪ ಸ್ಥಳಗಳಲ್ಲಿ ಮಾಹಿತಿ ಸಂಗ್ರಹಿಸಿ ೧೯೫೫ ಅಕ್ಟೋಬರ್ ೧೦ ರಂದು ಕೇಂದ್ರ ಸರಕಾರಕ್ಕೆ ವರಿದಿ ಸಲ್ಲಿಸಿತು. ಇದರಲ್ಲಿ ಕರ್ನಾಟಕ ರಾಜ್ಯ ರಚನೆಯ ಅಗತ್ಯತೆಯನ್ನು ಎತ್ತಿ ತೋರಿಸಿತು. ಕೊನೆಗೆ ರಾಜ್ಯಪುನರ ವಿಂಗಡನಾ (ವರದಿ) ಕಾನೂನು ಅಸ್ತಿತ್ವಕ್ಕೆ ಬಂದು ಮೈಸೂರು ರಾಜ್ಯದಲ್ಲಿ ಗುಲಬರ್ಗಾ ೧೯ ಜಿಲ್ಲೆಗಳಲ್ಲಿ ಒಂದಾಗಿ ೧೯೫೬ ನವೆಂಬರ್ ೧ ರಂದು ವಿಲೀನವಾಯಿತು.[೫] ಇದರಿಂದ ಎಲ್ಲಾ ಕನ್ನಡಿಗರ ಆಸೆ ನೆರವೇರಿತು. ಮುಂದೆ ೧೭ ವರ್ಷಗಳ ಕಾಲ 'ಕರ್ನಾಟಕ' ಎಂಬ ನಾಮಕರಣಕ್ಕೆ ಹಲವಾರು ಹೋರಾಟಗಳು, ಸತ್ಯಗ್ರಹಗಳು,

ಉಪವಾಸ ನಡೆದವು.[೬] ಕೊನೆಗೆ ೧೯೭೩ ರಲ್ಲಿ ಮೈಸೂರು ಎಂಬ ನಾಮಕರಣದಿಂದ ಕರ್ನಾಟಕ ರಾಜ್ಯವೆಂಬ ಹೆಸರು ಪಡೆದುಕೊಂಡಿತು.

ರಾಮು (೧೯೯೭:೮೭–೮೮), ಪಾಟೀಲ (೧೯೯೭:೯೯–೧೦೦), ನರಸಿಂಹಶೆಟ್ಟಿ (೨೦೦೦:೪೨), ಗೋಪಾಲರಾವ್ (೨೦೦೮:೨೧೫), ಗೋವಿಂದರಾಜು (೨೦೦೫:೫೪), ಮೋಹನ್‌ಕೃಷ್ಣ ರೈ (೨೦೦೯:೫೬), ಮಹಾಬಲೇಶ್ವರಪ್ಪ (೨೦೦೮:೧೩೮–೧೪೧) ಮುಂತಾದವರ ಕೃತಿಗಳಲ್ಲಿ ಏಕೀಕರಣ ಸಂಬಂಧಿತ ವಿಚಾರಗಳ ಬಗ್ಗೆ ಚರ್ಚೆ ಇರುವುದನ್ನು ಗಮನಿಸಬಹುದಾಗಿದೆ.

ಈ ರೀತಿಯಾಗಿ ಗುಲಬರ್ಗಾದ ಏಕೀಕರಣ ಹೋರಾಟದ ಮಜಲುಗಳು ಕುರಿತು ಕೃತಿಕಾರ ಕೃತಿಗಳಲ್ಲಿ ತಮ್ಮದೇ ನಿಲುವುಗಳನ್ನು ವ್ಯಕ್ತಪಡಿಸುವ ಮೂಲಕ ಏಕೀಕರಣ ಚಳವಳಿ ಮೇಲೆ ಬೆಳಕನ್ನು ಚಲ್ಲಿದ್ದಾರೆ.

### ದಲಿತರ ಚರಿತ್ರೆ

ಸಮಕಾಲೀನ ಕರ್ನಾಟಕ ಚರಿತ್ರೆಯಲ್ಲಿ ದಮನಿತರ ಹೋರಾಟಗಳು ಕಂಡುಬಂದು ಇದಕ್ಕೆ ಸಂಬಂಧಿಸಿದಂತೆ ದಲಿತ ಹೋರಾಟಗಳು ಪ್ರಮುಖವಾಗಿದ್ದು, ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಹಿನ್ನೆಲೆಯಲ್ಲಿ ದಲಿತ ಚರಿತ್ರೆಯಲ್ಲಿ ಹೋರಾಟದ ಘಟ್ಟ ಕಂಡುಬಂದಿರುವುದರ ಮೂಲಕ ಪ್ರಾಮುಖ್ಯತೆ ಮತ್ತು ವಿಶೇಷತೆಗಳಿಸಿದೆ. ಪ್ರಾಯಶಃ ಇವು ಚರಿತ್ರೆಯ ಹೊಸ ಆಯಾಮಗಳಾಗಿವೆ ಎಂದರೆ ತಪ್ಪಾಗಲಾರದು. ಆಧುನಿಕ ಚರಿತ್ರೆಯಲ್ಲಿ ಉಂಟಾದ ಹೊಸ ತಿರುವು ವಿಶ್ಲೇಷಣೆಗಳಲ್ಲಿ ದಲಿತರ ಚರಿತ್ರೆ ಪ್ರಾಮುಖ್ಯತೆಗಳಿಸಿದೆ. ಅದರಂತೆ ಬಹುವ್ಯಾಪಕ ಚರಿತ್ರೆಯನ್ನು ಹೊಂದಿದೆ. ದಲಿತ ಜನರ ಸ್ಥಿತಿಗತಿಗಳು ಮತ್ತು ಅವರ ಹೋರಾಟದ ಕೂಗು ಮುಗಿಲು ಮುಟ್ಟಿದೆ. ಎಂದರೆ ಆಶ್ಚರ್ಯವೇನಿಲ್ಲ. ಪ್ರಜಾಪ್ರಭುತ್ವದಲ್ಲಿ ಇದೆಲ್ಲ ಸಹಜವೆಂದು ಎನ್ನುವುದಾದರೂ ಮಾನವೀಯತೆಯ ಹಿನ್ನಲೆಯಲ್ಲಿ ಮತ್ತು ಆರ್ಥಿಕ ಸಮಾನತೆಯಲ್ಲಿ ಅದೊಂದು ಗಣನೀಯ ವಿಷಯವಾಗಿದೆ.

ಗುಲಬರ್ಗಾ ಪ್ರದೇಶದಲ್ಲಿ ನಡೆದಂತಹ ದಲಿತರ ಹೋರಾಟಗಳು ಹಾಗು ಅವುಗಳ ಪರಿಣಾಮದಿಂದಾಗಿ ದಲಿತ ಬಂಡಾಯ ಸಾಹಿತ್ಯವೇ ಬೆಳೆದು ಕರ್ನಾಟಕ ಚರಿತ್ರೆಯಲ್ಲಿ ವಿಶೇಷತೆ ಗಳಿಸಿದೆ. ಹಿಂದುಳಿದ ಪ್ರದೇಶವೆಂದೇ ಹಣೆ ಪಟ್ಟಿಯನ್ನು ಕಟ್ಟಿಕೊಂಡ ಪ್ರದೇಶವಾದ ಗುಲಬರ್ಗಾ ಹೆಚ್ಚು ದಲಿತ ಜನಾಂಗದವರು ಹೊಂದಿದ್ದು ಅಲ್ಲದೆ ಅವರ ಆರ್ಥಿಕ ಹಿಂದುಳಿಯುವಿಕೆ, ಸಾಮಾಜಿಕ ಸಮಸ್ಯೆಗಳು, ಪ್ರಜ್ವಲಗೊಂಡಿರುವುದು ಇದಕ್ಕೆ ಕಾರಣವಾಗಿದೆ. ಹೀಗಾಗಿ ಇವರ ಚರಿತ್ರೆ ಮೇಲ್ವರ್ಗಗಳ ಚರಿತ್ರೆಗಿಂತ ಭಿನ್ನವಾಗಿ ಕಂಡುಬಂದು ವಿದ್ವಾಂಸರಲ್ಲಿ ಈ ಕುರಿತು ಆಕರ್ಷಣೆಯನ್ನುಂಟುಮಾಡಿದೆ. ಇದರಿಂದಾಗಿ ಅನೇಕ ವಿವಿಧ ಕೃತಿಗಳು

ರಚನೆಗೊಂಡವು. ಇವುಗಳನ್ನು ಅವಲೋಕಿಸುವುದರ ಮುಖಾಂತರ ಸೈದ್ಧಾಂತಿಕವಾಗಿ ವಿವರಿಸಲು ಈ ಕೆಳಗಿನಂತೆ ಕಿರು ಪ್ರಯತ್ನ ಮಾಡಲಾಗಿದೆ.

ಏಕೀಕರಣೋತ್ತರ ಘಟ್ಟದಲ್ಲಿ ದಲಿತ ಚರಿತ್ರೆಯನ್ನು ಅಧ್ಯಯನ ಮಾಡಲು ಹಲವಾರು ಕೃತಿಗಳು ಲಭ್ಯವಾಗಿವೆ. ಅವುಗಳಲ್ಲಿ ಪ್ರಮುಖವಾಗಿ ಮ.ನ.ಜವರಯ್ಯ ಅವರ 'ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ ಸಮಗ್ರ ಅಧ್ಯಯನ' (೧೯೯೪), ಬಿ.ಷೇಕ್ ಅಲಿ ಅವರ 'ಕರ್ನಾಟಕ ಚರಿತ್ರೆ' (೧೯೯೭), ಎಂ.ಬಿ. ಪಾಟೀಲ 'ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್' (೧೯೯೭:೧೩೩-೧೬೦), ಎಂ. ಮುನಿವೆಂಕಟಪ್ಪ ಅವರ 'ದಲಿತ ಚಳವಳಿ ಒಂದು ಅವಲೋಕನ' (೧೯೯೮), ಆರ್.ವಿ.ಭಂಡಾರಿ ಅವರ 'ವರ್ಣದಿಂದ ವರ್ಗದ ಕಡೆಗೆ' (೨೦೦೩), ಟಿ.ಆರ್. ಚಂದ್ರಶೇಖರ ಅವರು ಸಂಪಾದಿಸಿದ 'ದಲಿತ ಅಧ್ಯಯನ' (೨೦೦೫), ಪಿ.ಮಹಾದೇವಯ್ಯ ಅವರು ಸಂಪಾದಿಸಿದ 'ದಲಿತರು ಭಾಷೆ ಮತ್ತು ಸಮಾಜ' (೨೦೦೬), ಮುಂತಾದ ಕೃತಿಗಳು ಮತ್ತು ಪಿಎಚ್.ಡಿ. ಅಪ್ರಕಟಿತ ಪ್ರಬಂಧ ಮತ್ತು ಎಂ.ಫಿಲ್. ನಿಬಂಧಗಳಾದ ಗಾಂಧಿಜೀ ಚಂದ್ರಪ್ಪ ಅವರ 'ಡಾ.ಬಿ.ಆರ್. ಅಂಬೇಡ್ಕರ್ ಆ್ಯಂಡ್ ವುಮನ್ ಯಮ್ಮ್‌ಪವರ್‌ಮೆಂಟ್' (೨೦೦೭), ಜಗನಾಥಸಂಧೀ ಅವರ 'ಅರ್ಗನೇಜೆಷನ್ಸ್ ಆಫ್ ಷೇಡ್ಯೂಲ್ಡ್ ಕಾಸ್ಟ್ ಆ್ಯಂಡ್ ಸೊಷಿಯಲ್ ಚೇನ್ಜ್:ಎ ಸೋಷಿಯಲೋಜಿಕಲ್ ಸ್ಟಡಿ ಆಫ್ ಗುಲಬರ್ಗಾ' (೨೦೦೨), ವಿಜಯಕುಮಾರ ಸಾಲಿಮನಿ ಅವರ ಎರಡಿಕೇಷನ್ ಆಫ್ ಅನ್‌ಟಚ್ಚಬಲಿಟಿ ಇನ್ ಪೋಸ್ಟ್ ಇಂಡಿಪೆಂಡೆನ್ಸ್ ಕರ್ನಾಟಕ ೧೯೪೭-೧೯೮೦ (೨೦೦೪), ಮುಂತಾದ ಸಂಶೋಧನೆಗಳು ಪ್ರಸ್ತುತ ಅಧ್ಯಯನಕ್ಕೆ ನೆರವಾಗಿದೆ.

ದಲಿತ ವರ್ಗದವರು ಮೇಲ್ವರ್ಗದವರ ಸೇವೆ ಹಾಗೂ ಕೃಷಿ ದುಡಿಮೆಯಲ್ಲಿ ನಿರತರಾದ ವಂಶಪರಂಪರಿತವಾಗಿ ಚರ್ಮ ಹೊಲೆಯುವ, ಗ್ರಾಮ ನೈರ್ಮಲ್ಯವನ್ನು ನೋಡಿಕೊಳ್ಳುವ, ಸತ್ತ ಜಾನುವಾರುಗಳನ್ನು ಹೊರಗೆ ಹಾಕುವ ಕೆಲಸಗಳಲ್ಲಿ ಅವರು ನಿರತರಾಗಿದ್ದರು. ದಲಿತರು ಸಮಾಜಿಕ, ಅರ್ಥಿಕ ಪರಿಸ್ಥಿತಿ ಅತ್ಯಂತ ಶೋಚನಿಯ ಸ್ಥಿತಿ ತಲುಪಿ ಬಡತನ ಮತ್ತು ಅನಕ್ಷರತೆ ದಾರಿದ್ರ್ಯದಿಂದ ಒಂದು ಹೊತ್ತಿನ ಊಟಕ್ಕಾಗಿ, ಚೂರು ಬಟ್ಟೆಗಾಗಿ, ಮಡದಿ ಮಕ್ಕಳೆಲ್ಲಾ ಜೀವನ ಪೂರ್ತಿ ಒಡೆಯನ ಹೊಲದಲ್ಲಿ ದುಡಿದರು ಸಹ ತೃಪ್ತಿಕಾಣದ ಭೂಮಾಲೀಕರಿಂದ ಋಣಮುಕ್ತರಾಗುವುದು ಕನಸಿನಮಾತಾಗಿತ್ತು ಎಂದು ಮೂರ್ತಿ (೨೦೦೫:೧-೨), ಷೇಕ್ ಅಲಿ (೧೯೯೭:೧೭೬) ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿದ್ದಾರೆ.

ದಲಿತರ ಬದುಕು ಗ್ರಾಮೀಣ ಪ್ರದೇಶದಲ್ಲಿ ತೀರಾ ಸಂಕುಚಿತ ಕಟ್ಟುಪಾಡುಗಳ ಕುಲಮೆಯಂತಿದೆ. ದಲಿತಕೇರಿ ಮಾದಿಗರ ಓಣಿ, ಹರಿಜನಕೇರಿ, ಹೊಲಗೇರಿ, ಬ್ಯಾಡರ ಓಣಿ, ತಳವಾರಕೇರಿ ಹೀಗೆ ಅವರ ಕಾಲೋನಿಗಳೇ ಪ್ರತ್ಯೇಕವಾಗಿವೆ. ಹಳ್ಳಿ ವ್ಯವಸ್ಥೆಯಲ್ಲಿ ಊರಕೇರಿಯಲ್ಲಿ

ತಿರುಗಾಡಕೊಡದು, ಹೊಟೆಲುಗಳಲ್ಲಿ, ದೇವಸ್ಥಾನ ಒಳಗೆ, ಕೆರೆ, ಬಾವಿ, ಮುಂತಾದ ಸ್ಥಳಗಳಲ್ಲಿ ಪ್ರವೇಶಕ್ಕೆ ಅವಕಾಶ ವಿರಲಿಲ್ಲ. ಹಬ್ಬಗಳಲ್ಲಿ ದೇವರ ಮುಂದೆ ತಮಟೆ ಹೊಡೆಯುವುದನ್ನು ಪರಿಶಿಷ್ಟರು ಬಹಿಷ್ಕರಿಸಿದಾಗ ದೇವಸ್ಥಾನದ ಒಳಗೆ ಪ್ರವೇಶಕ್ಕಾಗಿ ಪ್ರಯತ್ನ ಮಾಡಿದಾಗ, ಹೊಟೆಲುಗಳಲ್ಲಿ ತಿಂಡಿ ತಿನ್ನಲು ಹೋದಾಗ ನಡೆದಿರುವ ದೌರ್ಜನ್ಯಗಳೇ ಹೆಚ್ಚು. ಇದರ ವಿರುದ್ಧ ಹೋರಾಡುವುದರ ಮೂಲಕ ತಮ್ಮ ಅಸ್ಥಿತ್ವವನ್ನು ಕಂಡುಕೊಳ್ಳಲು ಪ್ರಯತ್ನಿಸಿದರು ಪೂಜಾರಹಳ್ಳಿ (೨೦೦೫:೧೪೩-೧೪೬), ವೀರಯ್ಯ (೨೦೦೫:೨೨) ತಮ್ಮ ಕೃತಿಗಳಲ್ಲಿ ಪ್ರಸ್ತಾಪಿಸಿದ್ದಾರೆ.

ಗುಲಬರ್ಗಾ ಜಿಲ್ಲೆಯ ಚಿಂಚೋಳಿಯಲ್ಲಿ ದಲಿತ ಮಹಿಳೆಯನ್ನು ಬೆತ್ತಲೆಗೊಳಿಸಿ ಮೆರವಣಿಗೆ ಮೂಲಕ ಸಜೀವ ದಹನ ಘಟನೆಗಳು ವಿಕೃತ ಕಿಡಿಗೇಡಿತನ ಪ್ರವೃತ್ತಿಯನ್ನು ತೋರಿಸಿಕೊಡುತ್ತದೆ (ವೀರಯ್ಯ ೨೦೦೫:೭). ಗುಲಬರ್ಗಾ ಜಿಲ್ಲೆಯಲ್ಲಿ ದಲಿತರನ್ನು ಹೀನಾಯವಾಗಿ ಬಡಿದು ಅಂಬೇಡ್ಕರರ ಪ್ರತಿಮೆಯನ್ನು ಭಗ್ನಗೊಳಿಸಿದರು. ಶಿಕ್ಷಣ ಕ್ಷೇತ್ರದಲ್ಲಿ ದಲಿತ ವಿದ್ಯಾರ್ಥಿಗೆ ಆದ ಅನ್ಯಾಯವನ್ನು ಪ್ರತಿಭಟಿಸಿ ಗುಲಬರ್ಗಾ ವಿಶ್ವವಿದ್ಯಾಲಯದ ನಂದಿಹಳ್ಳಿ ಸ್ನಾತಕೋತ್ತರ ಕೇಂದ್ರಕ್ಕೆ ಮುತ್ತಿಗೆ ಹಾಕಿ ಪ್ರತಿಭಟನೆ ನಡೆಸಿದರು.[೬] ಅಂಬೇಡ್ಕರ್ ಅವರು ಗುಲಬರ್ಗಾ ಜಿಲ್ಲೆಗೆ ಭೇಟಿ ನೀಡಿದ್ದರಿಂದ ಇದು ದಲಿತ ಚಳವಳಿಗೆ, ದಲಿತರಿಗೆ ಸ್ವಾಭಿಮಾನದ ಸಂಕೇತವಾಗಿದೆ. ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಡಾ.ಬಾಬಾಸಾಹೇಬ್ ಅಂಬೇಡ್ಕರ್ ನಾಮಕರಣಕ್ಕೆ ಒತ್ತಾಯಿಸಿ ನಿರಂತರ ಹೋರಾಟಕ್ಕೆ ಪ್ರೇರಣೆ ನೀಡಿತು. ಅಂಬೇಡ್ಕರ್ ಅವರು ಶಿಕ್ಷಣ, ಸಂಘಟನೆ, ಹೋರಾಟಗಳ ಮೂಲಕ ದಲಿತರಲ್ಲಿ ಪ್ರಜ್ಞೆಯನ್ನು ಮೂಡಿಸಿದರು. ಶಿಕ್ಷಣ ಪಡೆದು ವಿದ್ಯಾವಂತರಾಗಿ ತಮ್ಮ ಹಕ್ಕುಗಳು, ರಕ್ಷಣೆ, ಒಗ್ಗಟ್ಟಿನ ಬಗ್ಗೆ ಚಿಂತಿಸಬೇಕು ಎಂದು ದಲಿತರಲ್ಲಿ ಜಾಗೃತಿಯನ್ನು ಮೂಡಿಸಲು ಶ್ರಮಪಟ್ಟರು ಎಂದು ವೀರಯ್ಯ (೨೦೦೫:೯೭), ತಮ್ಮ ಕೃತಿಗಳು ತಿಳಿಸಿದ್ದಾರೆ.

ಗುಲಬರ್ಗಾ ನಗರದಲ್ಲಿ ೧೫-೭-೨೦೦೩ರಂದು ಬಹುಜನ ಜಾಗೃತಿ ರ್‍ಯಾಲಿ ಹಮ್ಮಿಕೊಂಡಿತು ದಲಿತರ ಸಂಘರ್ಷ ಸಮಿತಿ ಮತ್ತು ಬಿ.ಸಿ.ಪಿ ಹೊರಡಿಸಿದ ಸುತ್ತೋಲೆ ಗುಲಬರ್ಗಾವಾಸದ ಸ್ಥಳೀಯ ದ.ಸಂ.ಸ.ವಿಭಾಗೀಯ ಶಾಖೆಯ ಅಧ್ಯಕ್ಷರಾದ ನಾಗಪ್ಪ ಆರ್. ಟೈಗರ್ ಮುಂದಾಳತ್ವದಲ್ಲಿ ರ್‍ಯಾಲಿಯು ಹಮ್ಮಿಕೊಳ್ಳಲಾಯಿತು. ಗುಲಬರ್ಗಾ ಜಿಲ್ಲೆಯ ತಾಲೂಕು, ಹೋಬಳಿ, ಗ್ರಾಮಗಳಲ್ಲಿ ಯಶಸ್ವಿಗೊಳಿಸುವಂತೆ ಆಯಾ ಶಾಖೆಗಳ ಮೂಲಕ ದಲಿತ ಜಾಗೃತಿ ಕಾರ್ಯಕ್ರಮ ನಡೆಸಲಾಯಿತು.[೮] ಜೆ.ಲಿಂಗಯ್ಯ, ಕೆ. ರಾಮಕರಪ್ಪಯ್ಯ, ನಾಗಪ್ಪ, ಆರ್. ಟೈಗರ್ ಅನೇಕ ಜನರು ಉಪಸ್ಥಿತರಿದ್ದರು. ೧೫-೭-೨೦೦೩ ರಂದು ಮಧ್ಯಾಹ್ನ ೩ ಗಂಟೆಗೆ ಗುಲಬರ್ಗಾ ಅಂಬೇಡ್ಕರ್ ವೃತ್ತದಿಂದ ಮುಖ್ಯ ಬೀದಿಯಲ್ಲಿ ಸಹಸ್ರಾರು ಜನ ರ್‍ಯಾಲಿಯಲ್ಲಿ ಪಾಲ್ಗೊಂಡರು. ಮುರಲೀಧರ, ಬಿ.ತೆಲಂಗಿಕರ್ ಅಧ್ಯಕ್ಷರು ದ.ಸಂ.ಸ. ಗುಲಬರ್ಗಾ, ವಸಂತ ಜಂಬಗಿ, ಡಾ.ರಾಜು

ಕುಳಗೇರಿ ಅಧ್ಯಕ್ಷರು ದ.ಸಂ.ಸ ಹಿಂದುಳಿದ ಮತ್ತು ಅಲ್ಪ ಸಂಖ್ಯಾತರ ಘಟಕ ಗುಲಬರ್ಗಾ ವಿಭಾಗ, ಮುಂತಾದವು ಅನೇಕ ಕಾರ್ಯಕ್ರಮ ಸಂಘಟಿಸಿದರು. ಇದರ ಮೂಲಕ ಜನರಲ್ಲಿ ಆಗೃತಿ ಮೂಡುವಲ್ಲಿ ಈ ರ್‍ಯಾಲಿ ಅತ್ಯಂತ ಪ್ರಭಾವ ಬೀರಿದೆ ಎಂದು ಮೂರ್ತಿ (೨೦೦೫: ೧೨೭-೧೨೯) ಕೃತಿಯಲ್ಲಿ ತಿಳಿಸಿದ್ದಾರೆ.

ದಲಿತ ಸಾಹಿತ್ಯವು ಅಂದಿನ ಸಮಾಜದಲ್ಲಿನ ಜಾಗೃತಿಯನ್ನು ಮೂಡಿಸಲು ಬಹಳಷ್ಟು ಪ್ರೇರಣೆಯನ್ನು ನೀಡಿತ್ತು. ಗುಲಬರ್ಗಾದ ಬಸಣ್ಣಾ ಸಿಂಗೆಯವರ ದಲಿತ ಶಕ್ತಿ ವ್ಹಿ.ಸಿ.ಸ್ವಾಮಿಯವರ ಬಸವಕ್ರಾಂತಿ, ಶೀಲಾತಿವಾರಿಯ ಚಿಂತಕ, ಯಶವಂತ ಹರಸೂರ ಅವರ ಆಕ್ರೋಶ, ಶಿವರಾಯ ದೊಡ್ಡಮನಿಯವರ ನೃಪತುಂಗ, ಕೋಡ್ಲಾರವರ ಜಯಭೀಮಗದೆ ಮುಂತಾದ ಪತ್ರಿಕೆಗಳಿಗೆ ದಲಿತರು, ಮಹಿಳೆಯಿಂದ ಪ್ರಗತಿಪರ ಲೇಖಕರ ಲೇಖನಗಳು, ಕವನಗಳು, ಕಥೆಗಳು, ಬರೆದು ಗುಲಬರ್ಗಾದಲ್ಲಿ ಬಂಡಾಯದ ಅಲೆ ದಲಿತ ಸಾಹಿತಿಗಳ ಹುಟ್ಟು ಪ್ರಾರಂಭವಾಯಿತು. ಈ ಹಿನ್ನೆಲೆಯಲ್ಲಿ ಲಂಕೇಶ ಪತ್ರಿಕೆ, ವಿಜಯರವರ ಬದುಕು, ದಲಿತ ಸಂಘರ್ಷ ಸಮಿತಿಯ ಮುಖವಾಣಿ ಪತ್ರಿಕೆಯಾ ಪಂಚಮ, ಕೆಂಬಾವುಟ ಮುಂತಾದವು ಗುಲಬರ್ಗಾ ಸಾಹಿತಿಗಳ ಮೇಲೆ ವಿಶೇಷ ಪ್ರಭಾವ ಬೀರಿದವು. ಹೊಸ ಬೆಳಕು, ನವಚೇತನ ಮೂಡಿಸಿದವು. ದಲಿತರ ಮೇಲೆ ದೌರ್ಜನ್ಯಗಳನ್ನು ಖಂಡಿಸಿ ಡಿ.ಜಿ. ಸಾಗರ, ಬಸಣ್ಣಾ ಸಿಂಗೆ, ಜಿ.ಕೆ.ಗೋಖಲೆ, ಮಂಗ್ಳೂರ ವಿಜಯ, ವಾಯ್ ಸಿದ್ರಾಮಪ್ಪ, ಅಂಬಣ್ಣ ಜೀವಣಗಿ, ಎಸ್.ಪಿ.ಸುಳ್ಳದ್ ಇವರ ನೇತೃತ್ವದಲ್ಲಿ ದಲಿತ ಚಳವಳಿ ಗುಲಬರ್ಗಾದಲ್ಲಿ ಮೊಳಕೆ ಒಡೆದು ಹೆಮ್ಮರವಾಗಿ ನಿಲ್ಲಲು ಸಾಹಾಯಕವಾಯಿತು. ದಲಿತರ ಮೇಲೆ ನಡೆದ ದೌರ್ಜನ್ಯಗಳು, ಹಲ್ಲೆಗಳು, ಕೊಲೆ, ಸುಲಿಗೆಗಳನ್ನು ಪ್ರತಿಭಟಿಸುವ ರೊಚ್ಚನ್ನು ಮೈಗೂಡಿಸಿಕೊಂಡು ತಮ್ಮ ಮನದ ಬಯಕೆಗಳನ್ನು ಭಾಷಣ, ಕ್ರಾಂತಿ ಗೀತೆಗಳ ಮೂಲಕ ಈ ನಾಡಿನ ದಲಿತ ಮತ್ತು ಪ್ರಗತಿಪರ ಚಿಂತಕರು ಜನತೆಗೆ ಪರಿಚಯವಾದರು. ಈ ಸಂದರ್ಭದಲ್ಲಿ ಬುದ್ಧ-ಬಸವ-ಅಂಬೇಡ್ಕರ ಅವರ ಜಯಂತ್ಯೋತ್ಸವಗಳು ಸಂದರ್ಭಗಳಲ್ಲಿ ಜಾಗೃತಿ ಮೂಡಿಸಲಾಗುತ್ತಿತ್ತು ಎಂದು ಭಾಸ್ಕರ್ (೨೦೦೫:೭೦:೭೧) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ. ಹಾಗೆಯೇ ಮೂರ್ತಿ ತಮ್ಮ ಕೃತಿಯಲ್ಲಿ ದಲಿತರ ಮೇಲಿನ ದೌರ್ಜನ್ಯ ದೇವದಾಸಿ ಪದ್ಧತಿಗಳ ಬಗ್ಗೆ ವಿವರವಾಗಿ ತಿಳಿಸಿದ್ದಾರೆ.

ಹೀಗೆ ದಲಿತರ ಹೋರಾಟ ಗುಲಬರ್ಗಾ ಪ್ರದೇಶದಲ್ಲಿ ಕಂಡುಬಂದರು. ಬೇರೆ ಪ್ರದೇಶಗಳಲ್ಲಿ ನಡೆದಂತಹ ಹೋರಾಟ ಚಳವಳಿ ಸಂಭವಿಸಲಿಲ್ಲ. ಕೆಲವೊಮ್ಮೆ ದೌರ್ಜನ್ಯ ವಿರುದ್ಧ ಸೆಟೆದೆದ್ದು ನಿಂತಿದ್ದು ಕಾಣಬಹುದಾಗಿದೆ. ಅನೇಕ ಸಂವಿಧಾನಾತ್ಮಕ ಸೌಲಭ್ಯಗಳು, ಸಂಘಟನೆ, ಹೋರಾಟ ನಡೆದರು ಇಂದಿಗೂ ದಲಿತರ ಸ್ಥಿತಿ ಶೋಚನೀಯವಾಗಿದ್ದಿದ್ದನ್ನು ನೋಡಬಹುದಾಗಿದೆ.

## ಕೆಳವರ್ಗದ ಚರಿತ್ರೆ

ಭಾರತದ ಚರಿತ್ರೆಯನ್ನು ಗಮನಿಸಿದಾಗ ಚರಿತ್ರೆಯ ಉನ್ನತ ವರ್ಗದ ನೆಲೆಯಲ್ಲಿ ರಚನೆಗೊಂಡಿತು. ಬಹು ಸಂಖ್ಯಾತ ಕೆಳವರ್ಗದ ಜನರ ಬದುಕನ್ನು ದಾಖಲಿಸದೆ ನಿರ್ಲಕ್ಷಿಸಿತು. ಇದರಿಂದಾಗಿ ಚರಿತ್ರೆಯೆಂದರೆ ರಾಜಪ್ರಭುತ್ವ ಅಧಿಕಾರ ವರ್ಗ, ಮೇಲ್ವರ್ಗಗಳಿಗೆ ಮಾತ್ರ ಸೀಮಿತವಾದ ಅರ್ಥವನ್ನು ಪಡೆದುಕೊಂಡಿತು. ಪ್ರತಿಯೊಂದು ಕೆಲಸಕಾರ್ಯಗಳಿಗೆ ಇವರನ್ನೆ ಅವಲಂಬಿಸಿದರೂ ಕೆಳವರ್ಗದವರನ್ನು ಅಲಕ್ಷಿಸಿತು. ರಾಜಪ್ರಭುತ್ವ ಕಳೆದು ಪ್ರಜಾಪ್ರಭುತ್ವ ವ್ಯವಸ್ಥೆ ಬಂದರು. ಕೆಳವರ್ಗ ಸಮುದಾಯವು ಸಮಾಜದಲ್ಲಿ ಯಾವುದೇ ರೀತಿಯ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳಲು ಸಾಧ್ಯವಾಗಲಿಲ್ಲ. ಇದರಿಂದ ಸಂಘ ಸಂಸ್ಥೆಗಳನ್ನು ಕಟ್ಟಿಕೊಂಡು ಸಂವಿಧಾನಾತ್ಮಕ ಹೋರಾಟದಲ್ಲಿ ತೊಡಗಿದರು. ಇದರಿಂದ ಮೀಸಲಾತಿ, ಸೌಲಭ್ಯಗಳು, ಕಾಯ್ದೆ ಕಾನೂನು ಜಾರಿಗೆ ತರಲಾಯಿತು. ಇವುಗಳು ಕೇವಲ ಅಧಿಸೂಚನೆಗಳಿಗೆ ಸೀಮಿತಗೊಂಡವು. ಏಕೀಕರಣ ನಂತರ ಕೆಲವು ಬದಲಾವಣೆ ಕಂಡರು ಸಂಪೂರ್ಣವಾಗಿ ಇವರ ಸಮಸ್ಯೆಗಳು ಹೊಡೆದು ಹಾಕಲು ಸಾಧ್ಯವಾಗಿಲ್ಲ. ಆದರೂ ಸರಕಾರ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವುದರ ಮೂಲಕ ಇವರ ಅಸ್ತಿತ್ವಕ್ಕೆ ಪ್ರಯತ್ನಿಸುತ್ತಿದೆ.

ಗುಲಬರ್ಗಾ ಪ್ರದೇಶಕ್ಕೆ ಸಂಬಂಧಿಸಿದಂತೆ ಕೆಳವರ್ಗದ ಸಮುದಾಯಗಳು ಕಂಡು ಬಂದು, ಇವರ ಒಳಗೊಂಡ ಹೆಚ್ಚು ಕೃತಿಗಳ ರಚನೆಗೊಳ್ಳಲಿಲ್ಲ. ಆದರೂ ರಚನೆಗೊಂಡ ಕೇಲ ಕೃತಿಗಳನ್ನು ಅವಲೋಕಿಸುವುದರ ಮೂಲಕ ಸೈದ್ಧಾಂತಿಕವಾಗಿ ಅಭ್ಯಾಸಿಸಲಾಗಿದೆ.

ಕೆಳವರ್ಗದ ಚರಿತ್ರೆಗೆ ಸಂಬಂಧಿಸಿದ ಪ್ರಮುಖ ಕೃತಿಗಳಾದ ನಿಂಗಣ್ಣ ಸಣ್ಣಕ್ಕಿ ಅವರ 'ಬುಡುಬುಡಿಕೆಯವರು' (೧೯೮೦), ಪಿ.ಕೆ.ಖಂಡೋಬಾ ಅವರ 'ಕರ್ನಾಟಕದ ಲಂಬಾಣಿಗಳು' (೧೯೯೧), ಎಂ.ಬಿ.ಪಾಟೀಲ 'ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್' (೧೯೯೭:೧೩೩-೧೬೦), ಎಚ್.ಜೆ.ಲಕ್ಕಪ್ಪಗೌಡ ಅವರ ಸಂಪಾದಿತ 'ಕರ್ನಾಟಕ ಬುಡಕಟ್ಟುಗಳು ಸಂಪುಟಗಳು' (೧೯೯೮), ಕಾಳೇಗೌಡ ನಾಗವಾರ ಅವರ (ಸಂ) 'ಗಿರಿಜನ ಸಂಸ್ಕೃತಿ' (೨೦೦೦), ಕೆ.ಎಂ.ಮೈತ್ರಿ ಅವರ 'ಬುಡಕಟ್ಟು ಕುಲಕಸುಬುಗಳು' (೨೦೦೨), ಎ.ಎಸ್. ಪ್ರಭಾಕರ್ ಅವರು ಸಂಪಾದಿಸಿತ 'ಡೊಂಬರು ಒಂದು ಚಾರಿತ್ರಿಕ ಹಿನ್ನೋಟ' (೨೦೦೬), ಸಣ್ಣರಾಮ ಅವರ 'ಲಂಬಾಣಿ ಸಂಸ್ಕೃತಿ' (೧೯೯೯), ಬೈಲಪತ್ತಾರ ವಿಶ್ವನಾಥ ಎಲ್. ಅವರು ಸಂಪಾದಿಸಿದ 'ಬೈಲಪತ್ತಾರ' (೨೦೦೮), ಎಂ.ಹೆಚ್.ನಾಗರಾಜು ಅವರ 'ಕುಂಚಿಟಿಗರ' (೨೦೦೩), ಅಪ್ರಕಟಿತ ಎಂ.ಫಿಲ್ ನಿಬಂಧಗಳು ಮತ್ತು ಪಿಎಚ್.ಡಿ ಪ್ರಬಂಧಗಳಾದ ಅಜ್ಜಯ್ಯ ಅವರ 'ಹೈದ್ರಾಬಾದ್ ಕರ್ನಾಟಕ ಅಲೆಮಾರಿಗಳ ಸಮಾಜೋ ಆರ್ಥಿಕ ವ್ಯವಸ್ಥೆ' (೨೦೦೬), ಬಸವರಾಜ ಎಸ್. ಹಿರೇಮಠ

ಅವರ 'ಗುಲಬರ್ಗಾಜಿಲ್ಲೆಯ ಬೈಲುಪತ್ತಾರರ ಸಮಾಜಶಾಸ್ತ್ರೀಯ ಅಧ್ಯಯನ' (೨೦೦೩), ಪರಮೇಶ್ವರ. ಸಿ ಜಾನೆ ಅವರ 'ಮಂಗಾರವಾಡಿ ಮಹಿಳಾ ಅಧ್ಯಯನ ಗುಲಬರ್ಗಾ ಜಿಲ್ಲೆ ಅನುಲಕ್ಷಿಸಿ' (೨೦೦೭), ಶ್ರೀನಾಥ ಸುಭಾಷ ಅವರ 'ಅಲೆಮಾರಿ ಸಮುದಾಯಗಳ ಸಾಮಾಜಿಕ ಅಧ್ಯಯನ ಶಹಪುರ ಪಟ್ಟಣವನ್ನು ಅನುಲಕ್ಷಿಸಿ' (೨೦೦೯), ಚನ್ನಮಲ್ಲಪ್ಪ ಜುಬೀರ್ ಅವರ 'ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ ಅಧ್ಯಯನ' (೨೦೦೧), ತಾರಾಮತಿ ಅವರ 'ಕರ್ನಾಟಕದ ಖಾಟಿಕ್ ಸಮುದಾಯ' (೨೦೦೭) ಮುಂತಾದವುಗಳು ಅಧ್ಯಯನಕ್ಕೆ ಸಹಕಾರಿಯಾಗಿವೆ.

ಗುಲಬರ್ಗಾ ಪ್ರದೇಶದಲ್ಲಿ ಕೆಳವರ್ಗದ ಜನರು ಬಹುತೇಕ ಕೃಷಿಕಾರ್ಮಿಕರಾಗಿ, ಕುಲಕಸುಬು ಮಾಡುವುದರ ಮೂಲಕ ಜೀವನ ಸಾಗಿಸಿದ್ದಾರೆ. ಹಲವು ವರ್ಷಗಳಿಂದ ಮೇಲ್ವರ್ಗದವರ ಶೋಷಣೆ, ದಬ್ಬಾಳಿಕೆ ಅನುಭವಿಸಿರುವದನ್ನು ಕಂಡುಬರುತ್ತದೆ. ಗುಲಬರ್ಗಾದಲ್ಲಿ ಕಂಡುಬರುವ ಪ್ರಮುಖ ಕೆಳವರ್ಗದ ಸಮುದಾಯಗಳೆಂದರೆ ದಲಿತರು, ಲಂಬಾಣಿಗರು, ಕಲ್ಲುಕಟುಕರು, ವಡ್ಡರು, ಜೋಗಿಗಳು, ಹಗಲುವೇಶಗಾರರು, ಡೊಂಬರು, ಬೈಲುಪತ್ತಾರರು, ಮಂಗಾರವಾಡಿ ಜನಾಂಗ, ಅಲೆಮಾರಿ ಸಮುದಾಯಗಳಾದ ಖಾಟಿಕ್, ಬುಡ್ಗಜಂಗಮ, ಚನ್ನದಾಸರು, ಕೊರವಾ, ಛಿಸಾಡಿ, ಹೆಳವರು, ಸಿಂಧೋಳ್ಳು, ಶಿಳ್ಳೇಕ್ಯಾತ ಮುಂತಾದ ಕೆಳವರ್ಗದ ಸಮುದಾಯಗಳು ಕಂಡುಬರುತ್ತೇವೆ. ಇವರು ಗುಲಬರ್ಗಾ ಪ್ರದೇಶದ ವಿವಿಧ ಭಾಗಗಳಲ್ಲಿ ನೆಲೆಸಿ ಸಾಂಸ್ಕೃತಿ, ಸಾಂಪ್ರದಾಯ, ಕುಲಕಸುಬು ನಿರ್ವಹಿಸುವುದರ ಮೂಲಕ ಜೀವನವನ್ನು ಸಾಗಿಸುತ್ತಿದ್ದಾರೆ. ಕೆಲವು ಸಮುದಾಯಗಳ ಸಂಕ್ಷಿಪ್ತ ಪರಿಚಯಿಸಲಾಗಿದೆ.

ಗುಲಬರ್ಗಾದಲ್ಲಿ ಪ್ರಮುಖವಾಗಿ ಕಂಡುಬರುವವ ಸಮಗಾರರು ಸಾಂಪ್ರದಾಯಿಕವಾಗಿ ಚರ್ಮದ ಕೆಲಸಮಾಡುವರು. ಈಚೆಗೆ ಹಲವಾರು ಕೃಷಿಕಾರ್ಮಿಕರಾಗಿ, ಉದ್ಯೋಗಸ್ಥರಾಗಿ ಕೆಲಸಗಳಲ್ಲಿ ತೊಡಗಿದ್ದಾರೆ. ಇವರಲ್ಲಿ ಅನೇಕ ಬೆಡಗುಗಳಿವೆ ಇವರು ಹೆಚ್ಚು ಶಹಾಪುರ, ಸುರಪುರ, ಗುಲಬರ್ಗಾ ಹಾಗೂ ಚಿತ್ತಾಪುರ ತಾಲೂಕುಗಳಲ್ಲಿ ಕಂಡುಬರುವರು. ಹೆಚ್ಚಾಗಿ ಅವಿಭಕ್ತ ಕುಟುಂಬ ವ್ಯವಸ್ಥೆಯನ್ನು ಹೊಂದಿದ್ದು ಪುರೋಹಿತ ವರ್ಗವಿಲ್ಲ. ಎಲ್ಲಮ್ಮ, ಮಾರಗಮ್ಮ, ದುರ್ಗಮ್ಮ ಮುಂತಾದ ದೇವತೆಗಳನ್ನು ಪೂಜಿಸುತ್ತಾರೆ. ಮಹಾನವಮಿ ಹಾಗೂ ದೀಪಾವಳಿ ವಿಶೇಷವಾದ ಹಬ್ಬಗಳನ್ನು ಆಚರಿಸುತ್ತಾರೆ. ಮಾಂಸಹಾರ ಸೇವಿಸುವುದು ರೂಢಿಯಲ್ಲಿದೆ. ಶವವನ್ನು ಹೂಳುವ ಹಾಗೂ ಸುಡುವ ಎರಡೂ ಪದ್ಧತಿಗಳೂ ಇವರಲ್ಲಿ ಕಂಡುಬರುತ್ತದೆ. (ಪಾಟೀಲ ೧೯೯೭: ೧೫೯-೧೬೦)

ಗುಲಬರ್ಗಾದಲ್ಲಿ ಪ್ರಮುಖವಾಗಿ ಕಂಡುಬರುವ ವಡ್ಡರು ಇವರು ತೆಲಗು ನಾಡಿನಿಂದ ಬಂದವರಾಗಿದ್ದು ಬೋವಿಗಳೆಂದೂ ಕರೆಯುತ್ತಾರೆ. ಇವರಲ್ಲಿ ಕಲ್ಲುವಡ್ಡರು, ಮಣ್ಣುವಡ್ಡರು,

ಮತ್ತು ಬಂಡಿವಡ್ಡರು ಎಂಬ ಉಪಪಂಗಡಗಳಿವೆ. ಕಲ್ಲುಒಡೆಯುವುದು, ಬಂಡೆಕಲ್ಲು ಅಗೆಯುವುದು, ಕಲ್ಲು ಮಾರಾಟ ಮಾಡುವುದು, ಮೊದಲಾದವು ಇವರ ಸಾಂಪ್ರದಾಯಿಕ ಉದ್ಯೋಗವಾಗಿದೆ. ಬಾವಿ ತೋಡುವುದು, ರಸ್ತೆ ನಿರ್ಮಾಣ ಮಾಡುವುದು, ಕೃಷಿ ಮೊದಲಾದ ವೃತ್ತಿಗಳಲ್ಲೂ ಹಲವರು ತೊಡಗಿದ್ದಾರೆ. ಮಾಂಸಹಾರ ಸೇವನೆ ರೂಢಿಯಲ್ಲಿದೆ. ವೆಂಕಟರಮಣ, ದುರ್ಗಮ್ಮ, ಎಲ್ಲಮ್ಮ, ಮುಂತಾದ ದೇವದೇವತೆಗಳನ್ನು ಆರಾಧಿಸುತ್ತಿದ್ದಾರೆ. ಪ್ರಮುಖ ಹಬ್ಬಗಳಾದ ಯುಗಾದಿ, ದಸರಾ, ಆಚರಣೆ ಮಾಡುತ್ತಾರೆ. ಸಾಮಾನ್ಯವಾಗಿ ಶವವನ್ನು ಹೂಳುವ ಪದ್ಧತಿಯಿದೆ (ಪಾಟೀಲ ೧೯೯೭:೧೫೯) ಮತ್ತು (ವೆಂಕಟೇಶ ೨೦೦೫:೧೪೦).

ಕಾಟಿಕ ಸಮುದಾಯವು ಗುಲಬರ್ಗಾ ಪ್ರದೇಶದಲ್ಲಿ ಕಂಡುಬರುತ್ತದೆ. ಇವರನ್ನು ಕುಲಾಲ್ ಎಂದೂ ಕರೆಯುತ್ತಾರೆ. ಶಹಾಪುರ, ಸುರಪುರ, ಜೇವರ್ಗಿ ಹಾಗೂ ಯಾದಗಿರಿ ತಾಲೂಕುಗಳಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ. ಮಾಂಸ ಮಾರುವುದು ಇವರ ಸಾಂಪ್ರದಾಯಿಕ ಉದ್ಯೋಗ. ಶರಾಬನು ತಯಾರಿಸಿ ಮಾರಾಟ ಮಾಡುವುದರಲ್ಲೂ ಕೆಲವರೂ ತೊಡಗಿರುತ್ತಾರೆ. ಸೂರ್ಯನು ತಮ್ಮ ಮೂಲ ಪುರುಷನೆಂದು ಹೇಳಿಕೊಂಡು ಸೂರ್ಯನನ್ನು ಆರಾಧಿಸುತ್ತಾರೆ. ಮಾಂಸ ಆಹಾರ ಸೇವನೆ ಮಾಡುತ್ತಾರೆ. ದಸರಾ, ದೀಪಾವಳಿ, ಹೋಳಿ ಹಬ್ಬಗಳನ್ನು ಆಚರಣೆ ಮಾಡುತ್ತಾರೆ. ತಮ್ಮ ಸಮುದಾಯದ ಪಂಚಾಯಿತಿ ಹೊಂದಿದ್ದು ನ್ಯಾಯ ತಿರ್ಮಾನವನ್ನು ನೀಡಲಾಗುತ್ತದೆ. (ಪಾಟೀಲ ೧೯೯೭:೧೫೧). ಇನ್ನೂ ಹೆಚ್ಚಿನ ವಿಷಯವನ್ನು ಕರ್ನಾಟಕದ ಕಾಟಿಕ್ ಸಮುದಾಯ (೨೦೦೭-೦೮) ಪಿಎಚ್.ಡಿ ಪ್ರಬಂಧ ಕನ್ನಡ ವಿಶ್ವವಿದ್ಯಾಲಯ ಹಂಪಿ, ಗಮನಿಸಬಹುದು.

ಗುಲಬರ್ಗಾ ಪ್ರದೇಶದಲ್ಲಿ ಲಂಬಾಣಿ ಜನಾಂಗ ಕಂಡುಬರುತ್ತವೆ. ಇವರನ್ನು ಲಮಾಣಿ, ಬಂಜಾರ, ವಂಜಾರ, ಮುಂತಾದ ಹೆಸರುಗಳಿಂದಲೂ ಕರೆಯುತ್ತಾರೆ. ಇವರ ಪೂರ್ವಿಕರು ರಾಜಸ್ಥಾನದಿಂದ ವಲಸೆ ಬಂದವರೆಂದು ಹೇಳುತ್ತಾರೆ. ಗುಲಬರ್ಗಾದಲ್ಲಿ ೫೭,೮೨೦ ವಾಸವಾಗಿದ್ದಾರೆ. ಹಿಂದಿನ ಕಾಲದಲ್ಲಿ ಹೋರುವ ಪ್ರಾಣಿಗಳ ಮೇಲೆ ಆಹಾರ ಧಾನ್ಯಗಳನ್ನು ಹೋರಿಸಿಕೊಂಡು ಮಾರಾಟ ಮಾಡುತ್ತಿದ್ದರು. ಕೃಷಿಕೂಲಿ, ಕಟ್ಟಿಗೆ ಮಾರುವುದು ಮುಂತಾದ ಕೆಲಸಗಳಲ್ಲಿ ತೊಡಗಿದ್ದಾರೆ. ಇವರು ಸಾಮಾನ್ಯ ತಾಂಡಾಗಳಲ್ಲಿ ವಾಸಿಸುತ್ತಾರೆ. ಇದರಲ್ಲಿ ಜಾತ್, ಭುಕಿಯಾ ಗೋತ್ರಗಳಿವೆ. ಪುರೋಹಿತ ವರ್ಗದವರಿಗೆ ಮಹಾರಾಜ್ ಅಥವಾ ಸಂತ್ ಎಂದು ಕರೆಯುತ್ತಾರೆ. ವಿವಾಹ ಧಾರ್ಮಿಕ ಕಾರ್ಮಿಕಗಳಿಗೆ ತಮ್ಮ ಗುರುಗಳನ್ನು ಕರೆಸುತ್ತಾರೆ. ಇವರು ಭಾಷೆಗೆ ಯಾವುದೇ ಲಿಪಿಯನ್ನು ಕಂಡುಬರುವುದಿಲ್ಲ. ಸ್ತ್ರೀಯರ ಉಡುಪುಗಳು ಮತ್ತು ಆಭರಣಗಳು ವಿಶಿಷ್ಟವಾಗಿದ್ದು ಸಾಮಾನ್ಯ ಉಡುಪುಗಳಿಗಿಂತ ಭಿನ್ನವಾಗಿವೆ. ಸಾಮಾನ್ಯವಾಗಿ ಹಿಂದೂಗಳ ಎಲ್ಲಾ ಹಬ್ಬಗಳನ್ನು ಆಚರಿಸುತ್ತಾರೆ. ಮಾಂಸ ಆಹಾರ ಸೇವಿಸುತ್ತಾರೆ. ಬಾಲಾಜಿ,

ಆಂಜನೇಯ, ಕೃಷ್ಣ, ಜಗದಂಬೆ, ಮೊದಲಾದ ದೇವದೇವತೆಗಳನ್ನು ಆರಾಧಿಸುತ್ತಾರೆ.[೯] (೧೯೯೭:೧೫೭-೧೫೮) ಲಕ್ಕಪ್ಪಗೌಡ ೨೦೦೦:೧೦೭-೧೮೦) ತಮ್ಮ ಕೃತಿಗಳಲ್ಲಿ ಮೇಲಿನ ಅಂಶಗಳನ್ನು ತಿಳಿಸಿದ್ದಾರೆ.

ಗುಲಬರ್ಗಾ ಪ್ರದೇಶದಲ್ಲಿ ಕಂಡುಬರುವ ಡೊಂಬರು ಹಗ್ಗದ ಮೇಲೆ ನಡೆಯುವುದು, ಎದೆಯ ಮೇಲೆ ಕಲ್ಲು ಒಡೆಯುವುದು ಹೀಗೆ ಸಾಹಸಮಯ ಪ್ರದರ್ಶನಗಳ ಮೂಲಕ ಹಣಸಂಗ್ರಹಿಸಿ ಜೀವನ ಸಾಗಿಸುತ್ತಾರೆ. ಇದೇ ರೀತಿ ಕೊರವಂಜಿಗರು, ದಾಸಯ್ಯ, ಜೋಗಿಗಳು, ಬುಡಬುಡಿಕೆಯವರು ಊರೂರು ಅಲೆದಾಡಿ ಬಿಕ್ಷೆಯನ್ನು ಬೇಡುವುದರ ಮೂಲಕ ಜೀವನ ಸಾಗಿಸುತ್ತಾರೆ. ಬಿಕ್ಷಾಟನೆಯ ತಮ್ಮ ಕುಲದ ಸಾಂಪ್ರದಾಯವೆಂಬ ನಂಬಿಕೆ ಇಟ್ಟುಕೊಂಡಿದ್ದಾರೆ. ಶಿಕ್ಷಣ ಪಡೆದ ಜನರು ಸ್ವಾಭೀಮನದಿಂದ ಕಾರ್ಮಿಕರಾಗಿ ಕೆಲಸ ಮಾಡುವುದರ ಮೂಲಕ ಜೀವನ ಸಾಗಿಸುತ್ತಿದ್ದಾರೆ. (ಜಿ.ಎಂ.ವೆಂಕಟೇಶ ೨೦೦೫:೧೪೧), (ಲಕ್ಕಪ್ಪಗೌಡ ೨೦೦೦:೫೦೦-೫೧೮), ತಮ್ಮ ಕೃತಿಯಲ್ಲಿ ವಿವರಿಸಿದ್ದಾರೆ. ಎ.ಎಸ್.ಪ್ರಭಾಕರ ಡೊಂಬರ ಬಂದು ಚಾರಿತ್ರಿಕ ಹಿನ್ನೋಟ (೨೦೦೬), ಕೃತಿಯಲ್ಲಿ ಹೆಚ್ಚಿನ ವಿವರನೋಡಬಹುದು.

ಗುಲಬರ್ಗಾದ ಪ್ರದೇಶದಲ್ಲಿ ಇರುವ ಬೈಲುಪತ್ತಾರರು ಮೂಲತಃ ಓರಿಸ್ಸಾದಿಂದ ವಲಸೆ ಬಂದವರು ಎಂದು ಸಮುದಾಯದವರೇ ಹೇಳುತ್ತಾ ಬೈಲು ಪತ್ತಾರರು ಪದದ ಅರ್ಥ ಬೈಲು-ಮೈದಾನ, ವಿಶಾಲಸ್ಥಳ, ಪತ್ತಾರರು-ಅಕ್ಕಸಾಲಿಗರು ಎಂದು ಅರ್ಥೈಸಿದ್ದಾರೆ. ಇವರು ಸಾಮಾನ್ಯವಾಗಿ ಅಲೆಮಾರಿ ಜೀವನವನ್ನು ಸಾಗಿಸುತ್ತಿದ್ದರು. ಇವರ ವಸತಿಯು ಊರ ಹೊರಗೆ, ಶಾಲೆ, ಮಸಿದೆ, ದೇವಾಲಯಗಳು, ಹಳೆಯ ಬಸ್ ನಿಲ್ದಾಣ ಬೀಡಾರ ಹಾಕುತ್ತಿದ್ದರು. ಸಮುದಾಯದ ಪಂಚಾಯಿತಿ ಇದ್ದು ನ್ಯಾಯ ತೀರ್ಮಾನ ನೀಡಲಾಗುತ್ತದೆ. ವಿಭಕ್ತ ಮತ್ತು ಅವಿಭಕ್ತ ಕುಟುಂಬ ಕಂಡುಬರುತ್ತವೆ. ಕೌಟುಂಬಿಕ ವ್ಯವಸ್ಥೆಯ ಪಿತೃಪ್ರಧಾನ ಕುಟುಂಬ ಕಂಡುಬರುತ್ತವೆ. ಮಾಂಸಹಾರಿ ಸೇವನೆ ಮಾಡುತ್ತಾರೆ. ಉಪಜೀವನಕ್ಕಾಗಿ ಕೃಷಿಕೂಲಿ, ಬೇವಿನ ಬೀಜ ಆರಿಸುವಿಕೆ, ವೃತ್ತಿಕೂಲಿ, ಕಾಗದ ಆರಿಸುವುದು ಕೆಲಸ ನಿರ್ವಹಿಸುತ್ತಾರೆ. ಸಾಮಾನ್ಯವಾದ ಹಬ್ಬಗಳನ್ನು ಆಚರಿಸುತ್ತಾರೆ. ಸ್ತ್ರೀದೇವತೆಗಳು-ಪುರುಷದೇವತೆಗಳ ಜೊತೆ ಮುಸ್ಲಿಂ ದೇವರನ್ನು ನಂಬಿಕೆ, ಭಕ್ತಿಭಾವನೆಯನ್ನು ಹೊಂದಿದ್ದಾರೆ. ಭಾಷೆಯಲ್ಲಿ ಬೇರೆ ಪ್ರಾಂತಗಳ ಪ್ರಭಾವವನ್ನು ಹೊಂದಿರುವುದನ್ನು ಕಂಡು ಬರುತ್ತದೆ. ಬಸವರಾಜ ಹಿರೇಮಠ ಅವರ ಗುಲಬರ್ಗಾ ಜಿಲ್ಲೆಯ ಬೈಲು ಪತ್ತಾರರ (೨೦೦೩) ಎಂ.ಫಿಲ್. ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿವರವಾಗಿ ತಿಳಿಸಿದ್ದಾರೆ.

ಗುಲಬರ್ಗಾ ಪ್ರದೇಶದಲ್ಲಿ ಕಂಡುಬರುವ ಮಂಗಾರವಾಡಿಗಳು ಮಹಾರಾಷ್ಟ್ರದ ಬಾಂಬೆ ಪ್ರದೇಶದಿಂದ ಬಂದವರೆಂದು ಹೇಳುತ್ತಾರೆ. ಗುಲಬರ್ಗಾ ಜಿಲ್ಲೆಯಲ್ಲಿ ಬಾಪುನಗರ ಮತ್ತು

ಸುಂದರ ನಗರ ಬಡಾವಣೆಯಲ್ಲಿ ವಾಸವಾಗಿದ್ದಾರೆ. ಇವರ ಕಸುಬು ಎಮ್ಮೆ ಬೋಳಿಸುವುದು, ಚರಗಹೊಡೆಯುವುದು, ಪ್ಲಾಸ್ಟಿಕ್ ಆರಿಸುವುದು, ವ್ಯಾಪಾರ, ಕೃಷಿಕಾರ್ಮಿಕ, ಭಟ್ಟಿಸಾರಾಯಿ ತಯಾರಿಕೆ, ಬೇಟೆ, ಮುಂತಾದ ಕೆಲಸಗಳು ಮಾಡುತ್ತಾರೆ. ಕಳ್ಳತನವೂ ಇವರ ಕೆಲಸವಾಗಿತ್ತೆಂದು ವದಂತಿ ಕಂಡುಬರುತ್ತದೆ. ಕುಲದೇವರು ವಾರದೇವರಲ್ಲಿ ನಂಬಿಕೆ ಹೊಂದಿದರು. ಯುಗಾದಿ, ಹೋಳಿ, ಶಿವರಾತ್ರಿ, ನಾಗರ ಪಂಚಮಿ ಮುಂತಾದ ಹಬ್ಬಗಳನ್ನು ಆಚರಣೆಮಾಡುತ್ತಾರೆ. ಮೂಢನಂಬಿಕೆಹೊಂದಿ ಪ್ರಾಣಿ ಬಲಿ ನೀಡತ್ತಾರೆ. ಸಮುದಾಯದ ಪಂಚ ಕಮಡಿ ಪಂಚಾಯಿತಿ ಸೇರಿ ನ್ಯಾಯ ಅನ್ಯಾಯವನ್ನು ತೀರ್ಮಾನಿಸಲಾಗುತ್ತಿತ್ತು. ಪರಮೇಶ್ವರ. ಸಿ. ಜಾನೆ ಮಂಗದವಾಡಿ ಮಹಿಳಾ ಅಧ್ಯಯನ (೨೦೦೮) ಕನ್ನಡ ವಿಶ್ವವಿದ್ಯಾಲಯ ಹಂಪಿ)

ಹೀಗೆ ಇನ್ನೂ ಅನೇಕ ಕೆಳವರ್ಗಗಳು ಕಂಡುಬಂದು ವಿಶಿಷ್ಟವಾದ ಸಂಪ್ರದಾಯ ಆಚರಣೆಯನ್ನು ಕಂಡುಬರುತ್ತವೆ. ಶತಮಾನಗಳಿಂದ ದಾರಿದ್ರ್ಯ, ದಬ್ಬಾಳಿಕೆ, ಶೋಷಣೆ ಜೊತೆಗೆ ಸಮಕಾಲಿನ ಸಮಸ್ಯೆಗಳಾದ ವಸತಿ ಸಮಸ್ಯೆ, ಕುಡಿಯುವ ನೀರಿನ ಸಮಸ್ಯೆ, ಶೌಚಾಲಯದ ಸಮಸ್ಯೆ, ವೃತ್ತಿಸಮಸ್ಯೆ, ಶೈಕ್ಷಣಿಕ ಸಮಸ್ಯೆ, ಸಂಘಟನೆ ಕೊರತೆ ಮುಂತಾದವು ಪ್ರಸ್ತುತ ಸಂದರ್ಭದಲ್ಲಿ ಎದುರಿಸುತ್ತಿದ್ದಾರೆ. ತಮ್ಮ ಸಮಸ್ಯೆಗಳನ್ನು ಸಂಘಟಿತರಾಗುವುದರ ಮೂಲಕ ಉತ್ತರಗಳನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಶಿಕ್ಷಣದಲ್ಲಿ ಮೀಸಲಾತಿ, ಉದ್ಯೋಗದಲ್ಲಿ ಮೀಸಲಾತಿ ನೀಡುವುದರ ಮೂಲಕ ಜೀವನ ಮಟ್ಟವನ್ನು ಸುಧಾರಿಸಿ ಸಮಾಜದ ಕಡೆಗೆ ಎಳೆದು ತರಬೇಕು.

### ಮಹಿಳಾ ಚರಿತ್ರೆ

ಪ್ರಾಚೀನ ಕಾಲದಿಂದಲೂ ಸಮಕಾಲಿನ ಸಮಾಜದಲ್ಲಿ ಮಹಿಳೆಯರು ಅನೇಕ ಸಮಸ್ಯೆಗಳು ಕಷ್ಟನಷ್ಟಗಳು ಅನುಭವಿಸುತ್ತಾ ಬಂದಿದ್ದಾಳೆ. ವಸಾಹತು ಕಾಲದಲ್ಲಿಯೇ ಸಮಾಜ ಸುಧಾರಕರು, ಮಹಿಳೆಯರ ಸ್ಥಿತಿಗತಿಗಳಲ್ಲಿ ಸುಧಾರಣೆಗೆ ಪರಿಶ್ರಮಿಸಿದರು. ಆದರೆ ಜಡತ್ವ ಹೊಂದಿದ ಹಿಂದೂ ಸಮಾಜದಲ್ಲಿ ಅಂತಹ ಪ್ರಯತ್ನಗಳು ಆಮೆ ಹೆಜ್ಜೆಯಲ್ಲಿ ಮುಂದು ವರೆದವು. ಸ್ವಾತಂತ್ರ್ಯದ ನಂತರ ಭಾರತವು ಅಳವಡಿಸಿಕೊಂಡ ಸಂವಿಧಾನವು ಮಹಿಳೆಯರಿಗೆ ಸಮಾನ ಹಕ್ಕುಗಳನ್ನು ಹಲವು ಸವಲತ್ತುಗಳನ್ನು ನೀಡಿದೆ ಮತ್ತು ಮಹಿಳೆಯರ ಬದುಕಿನ ಸುಧಾರಣೆಗಾಗಿ ಅನೇಕ ಸರಕಾರಿ ಹಾಗೂ ಸರಕಾರೇತ್ತರ ಸಂಘಸಂಸ್ಥೆಗಳು ಕಾರ್ಯನಿರತವಾಗಿವೆ.

ಏಕೀಕರಣೋತ್ತರ ಘಟ್ಟದಲ್ಲಿ ಪ್ರಾಮುಖ್ಯತೆ ಪಡೆದುಕೊಂಡ ಚರಿತ್ರೆ ಲೇಖನಶಾಸ್ತ್ರ ಗಮನದಲ್ಲಿರಿಸಿಕೊಂಡು ಮಹಿಳಾ ಚರಿತ್ರೆಯು ಅಭ್ಯಾಸಿಸಲಾಗಿದೆ. ಇದರಿಂದ ಗುಲಬರ್ಗಾ ಪ್ರದೇಶದ ಏಕೀಕರಣೋತ್ತರ ಘಟ್ಟದಲ್ಲಿ ಮಹಿಳೆಯರ ಚರಿತ್ರೆಯನ್ನು ವಿಶ್ಲೇಷಿಸುವಾಗ, ಮಹಿಳಾ ಸಮಾಜದ ಸ್ಥಿತಿಗತಿಗಳು, ಸುಧಾರಣೆಗಳು ಕುರಿತಾಗಿ ವಿವಿಧ ಲೇಖನಗಳೂ ಅವಲೋಕಿಸುವುದರ ಮೂಲಕ ಸೈದ್ಧಾಂತಿಕವಾಗಿ ವಿವರಿಸಲು ಈ ಕೆಳಕಂಡ ಕೃತಿಗಳು ಸಹಾಯಕವಾಗಿವೆ.

ಎಂ.ಬಿ.ಪಾಟೀಲ ಸಂಪಾದಿತ ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್ (೧೯೯೭), ಜಿ.ರಾಮಕೃಷ್ಣ ಸಂಪಾದಿತ ಮಹಿಳಾ ಚಳವಳಿಯ ಮಜಲುಗಳು (೧೯೯೮), ಎಂ.ಎಷಾ ಅವರ ಮಹಿಳಾ ಚಳವಳಿ ಮತ್ತು ಮಹಿಳಾ ವಿಷಯಗಳು (೨೦೦೪), ವಿಜಯಶ್ರೀ ಸಬರದ ಅವರು ಸಂಪಾದಿಸಿದ ಮಹಿಳೆ ಶೋಷಣೆ ಸವಾಲುಗಳು (೨೦೦೫), ಟಿ.ಎಂ. ಭಾಸ್ಕರ್ ಸಂಪಾದಿತ 'ಕಲಬುರ್ಗಿ ಜಿಲ್ಲಾ ದರ್ಶನ' (೨೦೦೫:೨೪೬-೨೫೫), ಗಾಯಿತ್ರಿ ನಾವಡ ಅವರ 'ಮಹಿಳಾ ಸಂಕಥನ (೨೦೦೩), ಡಿ. ವೆಂಕೋಬರಾವ್ ಅವರ 'ನ್ಯಾಯಕ್ಕಾಗಿ ಮಹಿಳೆಯ ಹೋರಾಟ' (೨೦೦೦), ಕೆ. ಶಿವಚಿತ್ತಪ್ಪ ಅವರು ಸಂಪಾದಿಸಿದ 'ಮಹಿಳಾ ಸಬಲೀಕರಣದ ವಿಭಿನ್ನ ನೆಲೆಗಳು' (೨೦೦೬), ಹಾಲತಿ ಸೋಮಶೇಖರ ಅವರ 'ಮಹಿಳಾ ಚಳವಳಿ:ಸಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ' (೨೦೦೭), ಕೆ. ಜಯಲಕ್ಷ್ಮಿ ಅವರ 'ಹೆಣ್ಣು ಅಸ್ತಿತ್ವದ ಹೋರಾಟದಲ್ಲಿ' (೨೦೦೬) ಮುಂತಾದ ಕೃತಿಗಳನ್ನು ಅವಲೋಕಿಸುವುದರ ಜೊತೆಗೆ ಎಂ.ಫಿಲ್. ನಿಬಂಧ ಮತ್ತು ಪಿಎಚ್.ಡಿ. ಮಹಾಪ್ರಬಂಧಗಳಾದ ಕಾವೇರಿ ಪಿ. ಸಾಗರ ಅವರ 'ಗುಲಬರ್ಗಾ ಕೊಳಚೆ ಪ್ರದೇಶದ ಮಹಿಳಾ ಬದುಕು', ಬಿದಿರ ಚಂದ್ರಭಾಗಾ ಅವರ 'ಹೈದರಾಬಾದ್ ಕರ್ನಾಟಕ ಸಾಹಿತ್ಯದಲ್ಲಿ ಮಹಿಳಾ ಬದುಕಿನ ಪ್ರತಿನಿಧಿಕರಣ', ಪರಮೇಶ್ವರ ಸಿ. ಜಾನೆ ಅವರ 'ಮಂಗಾರವಾಡಿ ಮಹಿಳಾ ಅಧ್ಯಯನ', ರಾಘವೇಂದ್ರ ಮಲ್ಲಣ್ಣ ಅವರ 'ಗುಲಬರ್ಗಾ ಜಿಲ್ಲೆಯ ಲೈಂಗಿಕ ಕಾರ್ಯಕರ್ತೆಯರ ಸಾಮಾಜಿಕ ಸ್ಥಿತಿಗತಿಗಳು' ಮುಂತಾದವುಗಳನ್ನು ಅವಲೋಕಿಸುವುದರ ಮೂಲಕ ಸೈದ್ಧಾಂತಿಕವಾಗಿ ವಿವರಿಸಲು ಪ್ರಯತ್ನವನ್ನು ಮಾಡಲಾಗಿದೆ.

ಗುಲಬರ್ಗಾ ಪ್ರದೇಶದ ಚರಿತ್ರೆಯಲ್ಲಿ ಮಹಿಳೆಯರ ಚರಿತ್ರೆಯನ್ನು ಗಮನಿಸಿದಾಗ ಮೇಲ್ವರ್ಗದ ಮಹಿಳೆಯರು, ಕೆಳವರ್ಗದ ಮಹಿಳೆಯರು ಎಂಬ ದೃಷ್ಠಿಯಿಂದ ಕಾಣಲಾಗುತ್ತದೆ. ಮೇಲ್ವರ್ಗದ ಮಹಿಳೆಯರು ಮನೆಯ ಒಳಗೆ ಹೆಚ್ಚಾಗಿ ಕೆಲಸ ಕಾರ್ಯನಿರ್ವಹಿಸಿದ್ದರೆ ಕೆಳವರ್ಗದ ಮಹಿಳೆಯರು ತಮ್ಮ ಉಪಜೀವನಕ್ಕಾಗಿ ಮನೆ ಹೊರಗೆ ದುಡಿಯುತ್ತಿದ್ದಾಳೆ. ಗುಲಬರ್ಗಾ ಜಿಲ್ಲೆಯಲ್ಲಿ ೨೦೦೧ರ ಜನಗಣತಿಯ ಪ್ರಕಾರ ಗಂಡು, ೧೫,೩೩,೪೭೯, ಹೆಣ್ಣು ೧೫.೯೧.೩೭೯, ಒಟ್ಟು ೩೧,೨೪,೮೫೮ ಜನಸಂಖ್ಯೆ ಹೊಂದಿತ್ತು. ಸಮಾಜದಲ್ಲಿ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯರ ಸ್ಥಾನಮಾನಗಳು ಮರೆಯಾಗುತ್ತಾ ಬಂದಿದೆ. ಸನಾತನ ಕಾಲದಿಂದಲೂ ಮಹಿಳೆಗೆ ದ್ವಿತೀಯ ದರ್ಜೆ ಸ್ಥಾನಮಾನ ನೀಡುತ್ತಾ ಬಂದಿರುವುದರಿಂದ ಆತ್ಮವಿಶ್ವಾಸ ಆತ್ಮಸ್ಥೈರ್ಯ ಮತ್ತು ಆಂತರಿಕ ಶಕ್ತಿ ಕುಗ್ಗಿ ಹೋಯಿತು. ಮಹಿಳೆಯು ಪ್ರತಿಯೊಂದು ಕಾಲಘಟ್ಟದಲ್ಲಿಯೂ ಶೋಷಿತಳಾಗಿದ್ದಾಳೆ. ಸ್ತ್ರೀಯರ ಮೇಲಿನ ದಬ್ಬಾಳಿಕೆ ಅತ್ಯಾಚಾರ, ವರದಕ್ಷಿಣೆ ಕಿರುಕುಳ ಬಹುಪತ್ನಿತ್ವ, ವಿವಾಹ ವಿಚ್ಛೇದನ, ಹೆಣ್ಣು ಬ್ರೂಣ ಹತ್ಯೆ, ಅತ್ಯಾಚಾರ, ವಧುದಹನ, ಮುಂತಾದ ಸಮಾಜಿಕ ಸಮಸ್ಯೆಗಳನ್ನು ಅನುಭವಿಸಿದ್ದಾಳೆ. ಸ್ತ್ರೀ ದೃಷ್ಠಿಕೋನದಿಂದ ವಿಶ್ಲೇಷಿಸಿ ಕಾನೂನು ತಿದ್ದು ಪಡಿಗಾಗಿ ಹೋರಾಟ

ನಡೆದವು. ಮಹಿಳಾ ಬದುಕನ್ನು ಕಟ್ಟುವ ನಿಟ್ಟಿನಲ್ಲಿ ಅನೇಕ ಸ್ತ್ರೀವಾದಿಗಳ ಮಹತ್ತರವಾದ ಪಾತ್ರವಿದೆ. ಅವರ ಒಲವು ಕೇವಲ ಮೇಲ್ವರ್ಗದ ಮಹಿಳೆಯರಿಗೆ ಸೀಮಿತವಾಗಿರದೆ ಕೆಳವರ್ಗದ ಮಹಿಳೆಯರ ಕುರಿತಾಗಿಯು ಇತ್ತು. ಮಹಿಳೆ ಎಂದಾಕ್ಷಣ ಅವಳು ಸಮಾನ ಶೋಷಿತಳು, ಮೇಲ್ವರ್ಗದ ಮಹಿಳೆಯಾಗಿರಬಹುದು. ಅಥವಾ ಕೆಳವರ್ಗದ ಮಹಿಳೆಯಾಗಿರಬಹುದು. ಆದರೆ ಸಮಸ್ಯೆಗಳು ಸ್ವರೂಪ ಬಿನ್ನತೆಯನ್ನು ಹೊಂದಿದೆ ಎಂದು ಗಾಯಿತ್ರಿ ನಾವಡ (೨೦೦೩:೧೬೭-೧೭೯), ಪಾಟೀಲ್ (೧೯೯೭:೧೧೩-೧೧೪) ಮೇಲಿನ ಅಂಶಗಳು ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ. ತಮ್ಮ ಕೃತಿಗಳಲ್ಲಿ ತಿಳಿಸಿದ್ದಾರೆ. ವೆಂಕೋಬರಾವ್ ಅವರು ಹೆಣ್ಣು ಮಕ್ಕಳ ಮೇಲೆ ಅತ್ಯಾಚಾರಗಳ ಬಗ್ಗೆ ಕೋಷ್ಟಕದ ಮೂಲಕ ತಮ್ಮ ಕೃತಿಗಳಲ್ಲಿ ನಮೂದಿಸಿದ್ದಾರೆ. (೨೦೦೦:೧೪೪), ಕರ್ನಾಡಸಮಚಿತ್ತ (೨೦೦೪:೧೩೦) ತಮ್ಮ ಕೃತಿಯಲ್ಲಿ ಮೇಲಿನ ಅಂಶಗಳನ್ನು ಒಳಗೊಂಡಿದೆ.

ಗುಲಬರ್ಗಾ ಜಿಲ್ಲೆಯಲ್ಲಿ ಒಟ್ಟು ಸಾಮಾಜಿಕ ಜೀವನ ಅವಲೋಕಿಸಿದಾಗ ಬಡತನ, ನಿರುದ್ಯೋಗ, ಕೃಷಿಕರ ಸಮಸ್ಯೆ, ವೈಶ್ಯವೃತ್ತಿ, ಮಕ್ಕಳ ಮಾರಾಟ, ಬಾಲಾಪರಾಧಗಳು, ಹೆಣ್ಣು ಭ್ರೂಣ ಹತ್ಯೆ ಮುಂತಾದ ಸಮಸ್ಯೆಗಳು ಜಿಲ್ಲೆಯಲ್ಲಿ ಕಂಡುಬರುತ್ತವೆ.[೧೦] ಗುಲಬರ್ಗಾ ಜಿಲ್ಲೆಯಲ್ಲಿ ೩೦೦೦ ಕ್ಕೂ ಅಧಿಕ ದೇವದಾಸಿಯರು ಇದ್ದರು ಎಂದು ೧೯೯೫ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಸಮೀಕ್ಷೆ ತಿಳಿಸಿದೆ. ಇಲ್ಲಿ ಲೈಂಗಿಕ ಮಹಿಳೆಯರು ೪೮%ರಷ್ಟು ೨೬ರಿಂದ ೩೩ ವಯಸ್ಸಿನವರಾಗಿದ್ದಾರೆ. ಇದರಲ್ಲಿ ಪರಿಶಿಷ್ಟಜಾತಿ ಮತ್ತು ಪಂಗಡದವರು ೪೪% ಮಹಿಳೆಯರು ಕಂಡುಬರುತ್ತಾರೆ. ಇದಕ್ಕೆ ಪ್ರಮುಖ ಕಾರಣ ಅನಕ್ಷರತೆ ೧೯೯೧ ಅಂಕಿ ಅಂಶಗಳ ಪ್ರಕಾರ ಸ್ತ್ರೀಸಾಕ್ಷರತೆಯ ಪ್ರಮಾಣ ಶೇ.೩೯ ಇದ್ದು ನಂತರ ೨೦೦೧ ರಲ್ಲಿ ಶೇ.೫೪ರಷ್ಟು ಏರಿಕೆ ಆಗಿದೆ. ಎಂದು ಭಾಸ್ಕರ (೨೦೦೫:೨೫೪) ತಮ್ಮ ಕೃತಿಯಲ್ಲಿ ಅಂಕೆ ಸಂಖ್ಯೆಯ ಮೂಲಕ ಮಾಹಿತಿ ನೀಡಿದ್ದಾರೆ.

ಗುಲಬರ್ಗಾ ಜಿಲ್ಲೆಯಲ್ಲಿ ಹೆಣ್ಣು ಕೂಸುಗಳ ಮಾರಾಟ ನಡೆಯುತ್ತಿರುವುದು ಪ್ರಧಾನವಾದ ಸವಾಲಾಗಿದೆ. ಚಿಂಚೋಳಿ ತಾಲೂಕಿನ ಲಂಬಾಣಿ ತಾಂಡಾಗಳಲ್ಲಿ ಮಕ್ಕಳನ್ನು ಮಾರಾಟ ಮಾಡಿದ ದಾಖಲೆಗಳು ಕಂಡುಬಂದಿವೆ. ಚಿಂಚೋಳಿಯ ೫೨ಕ್ಕೂ ಅಧಿಕ ಲಂಬಾಣಿ ತಾಂಡಾಗಳಲ್ಲಿ ಈ ಅಕ್ರಮ ದಂಧೆ ನಡೆಯುದಿದ್ದು, ಆದರೆ ಇತ್ತೀಚೆಗೆ ೪೫ ಪ್ರಕರಣಗಳನ್ನು ಮಾತ್ರ ಬೆಳಕಿಗೆ ಬಂದಿವೆ. ಮಾರಾಟವಾಗುವ ಹೆಣ್ಣು ಮಕ್ಕಳು ೧೫ ದಿನಗಳಿಂದ ೪ ವರ್ಷದ ವಯಸ್ಸಿನವರು ಮಾತ್ರ ಆಗಿರುತ್ತಿದ್ದರು. ಈ ಮಕ್ಕಳಿಗೆ ೫೦೦ ರೂಪಾಯಿಗಳಿಂದ ೨೦೦೦ ರೂಪಾಯಿಗಳವರೆಗೆ ಬೆಲೆಗೆ ಕೊಡುತ್ತಿದ್ದರು. ಹಣಕ್ಕಾಗಿ ಹೆತ್ತಮಕ್ಕಳನ್ನು ಮಾರಬೇಕಾದರೆ ಅವರ ಸ್ಥಿತಿಗತಿಗಳು ಯಾವ ಪರಿಯಲ್ಲಿ ಇರುತ್ತವೆ ಎಂದು ಊಹಿಸಬಹುದಾಗಿದೆ (ಸಬರದ:೨೦೦೫:೧೦), ಜನಸಂಖ್ಯಾ ವಿಷಯಕ್ಕೆ ಬಂದಾಗ ೧೯೮೧-೮೨ ರಲ್ಲಿ ಭ್ರೂಣ ಪರೀಕ್ಷೆಯಿಂದ ೭೮,೦೦೦ ಹೆಣ್ಣು ಭ್ರೂಣಗಳ

ಹತ್ಯೆಯಾಗಿವೆ. ಇಂಥಹ ಹತ್ಯಗಳಿಂದ ಸ್ತ್ರೀಪುರುಷರ ಅನುಪಾತ ಭಿನ್ನತೆಯನ್ನು ಕಾಣುತ್ತೇವೆ.[೧೧] ೧೯೮೧ರಲ್ಲಿ ೧೦೦೦ ಪುರುಷರಿಗೆ ೯೮೧ ಸ್ತ್ರೀಯರು, ೧೯೯೧ ರಲ್ಲಿ ೧೦೦೦ ಪುರುಷರಿಗೆ ೯೬೨ ಸ್ತ್ರೀಯರು ಹೊಂದಿದ್ದಾರೆ. ಎಂದು ಪಾಟೀಲ (೧೯೯೭:೧೨೪) ತಮ್ಮ ಕೃತಿಯಲ್ಲಿ ತಿಳಿಸಿದ್ದರೆ. ಈ ಲಿಂಗ ಅಸಮನತೆ ಬಗ್ಗೆ ಗೋವಿಂದರಾಜು (೨೦೦೫:೯೪), ವಿಜಯಶ್ರೀ ಸಬರದ (೨೦೦೫:೩೮) ಕೃತಿಗಳಲ್ಲಿ ಅಂಕೆ ಸಂಖ್ಯೆಗಳು ವ್ಯತ್ಯಾಸವನ್ನು ಕಂಡುಬರುತ್ತವೆ.

ಭಾರತದಲ್ಲಿ ೫೪ ನಿಮಿಷಗಳಿಗೊಮ್ಮೆ ಒಂದು ಹೆಣ್ಣಿನ ಮೇಲೆ ಅತ್ಯಾಚಾರವನ್ನು ನಡೆಯುತ್ತದೆ. ೨೦೦೦ ಇಸವಿಯಲ್ಲಿ ೧೯,೪೯೬ ಅತ್ಯಾಚಾರ ಪ್ರಕರಣಗಳು ನ್ಯಾಯಾಲಯದ ಕಟ್ಟೆ ಹತ್ತಿವೆ. ಅದರಲ್ಲಿ ಕೇವಲ ೫೧೭ ಪ್ರಕರಣಗಳಿಗೆ ಮಾತ್ರ ಶಿಕ್ಷೆ ಆಗಿವೆ ಎಂದು ಗೋವಿಂದರಾಜು (೨೦೦೫:೯೮) ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

ಸಮಾಜ ವೈಜ್ಞಾನಿಕತೆ ಕಡೆಗೆ ಮುಂದುವರೆದರೆ ಒಂದು ಕಡೆ ಮೂಡನಂಬಿಕೆಯಿಂದಾಗಿ ಸತಿ, ಹೋಗುವುದು, ದೇವದಾಸಿ, ಬತ್ತಲೆಸೇವೆ, ಮೈಯಲ್ಲಿ ದೇವರುಬರುವುದು, ಮಾಟ ಮಂತ್ರ, ಭಾನುಮತಿ, ಮುಂತಾದ ನಂಬಿಕೆಗಳೂ ವ್ಯಾಪಕವಾಗುತ್ತಿದೆ. ಇದೊಂದು ರೀತಿಯಲ್ಲಿ ಮಹಿಳೆ ಬಲಿಯಾಗುತ್ತಿದ್ದಾಳೆ. ಸ್ವಾತಂತ್ರ್ಯ ನಂತರ ಮಹಿಳಾ ಅಭಿವೃದ್ಧಿಗೆ ಸರಕಾರ ಸಂವಿಧಾನಬದ್ಧ ಸುಧಾರಣೆಗಳನ್ನು ಹಮ್ಮಿಕೊಂಡಿದೆ. ಪಂಚವಾರ್ಷಿಕ ಯೋಜನೆ, ಶಿಶು ಮತ್ತು ಮಹಿಳಾ ಅಭಿವೃದ್ಧಿ ಕಲ್ಯಾಣ ಇಲಾಖೆ, ಸಮಾಜ ಕಲ್ಯಾಣ ಇಲಾಖೆ ಹಾಗೂ ಮಹಿಳೆಯರ ಸ್ವಾಲಂಬನೆ ತರಲು ಹೊಲಿಗೆ ತರಬೇತಿ ಕೇಂದ್ರಗಳು, ಉದ್ಯೋಗ ತರಬೇತಿ ಕೇಂದ್ರಗಳು ತೆರೆದಿದೆ. ಶಿಕ್ಷಣ ಮತ್ತು ಉದ್ಯೋಗದಲ್ಲಿ ಮೀಸಲಾತಿ ಒದಗಿಸಲಾಗಿದೆ. ಇತ್ತೀಚಿಗೆ ಸ್ವಸಹಾಯ ಗುಂಪುಗಳು ಮತ್ತು ಸ್ತ್ರೀಶಕ್ತಿ ಗುಂಪುಗಳು ಮುಖಾಂತರ ತಮ್ಮ ಆರ್ಥಿಕವಾಗಿ ಸಬಲತೆಯನ್ನು ಹೊಂದುವುದಲ್ಲದೆ ಮಹಿಳೆಯರಲ್ಲಿ ಜಾಗೃತಿ ಮತ್ತು ತಿಳುವಳಿಕೆ ಮೂಡಿಸುತ್ತಾ ಮಹಿಳೆಯರಲ್ಲಿ ಸ್ವಾಲವಂಬನೆಗೆ ದಾರಿಯಾಗಿದೆ. ೧೯೭೮ ರಲ್ಲಿ 'ಸಮತಾವೇದಿಕೆ' ಸ್ತ್ರೀಪರ ಸಂಘಟನೆಯು ಅನೇಕ ಸ್ತ್ರೀಯರ ಮೇಲಿನ ದೌರ್ಜನ್ಯ ಪ್ರತಿಭಟಿಸಿ ನ್ಯಾಯವನ್ನು ದೊರಕಿಸಿಕೊಟ್ಟಿದೆ.

ಮೇಲಿನ ಅಂಶಗಳನ್ನು ಗೋವಿಂದರಾಜು (೨೦೦೫:೮೮), ಶಿವಚಿತ್ರಪ್ಪ (೨೦೦೬:೮೪–೮೯), ಹಾಲತಿ ಸೋಮಶೇಖರ (೨೦೦೮:೧೦೪–೧೧೨) ತಮ್ಮ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ಇನ್ನೂ ಹೆಚ್ಚಿನ ಸ್ತ್ರೀಪರ ಕಾಯ್ದೆ ಕಾನೂನು ಮತ್ತು ಮೀಸಲಾತಿ ಬಗ್ಗೆ ಗಾಯಿತ್ರಿ ನಾವಡ (೨೦೦೩:೫೭–೬೨) ಮೀಸಲಾತಿ ಬಗ್ಗೆ ತಿಳಿಸಿದ್ದಾರೆ. ರಾಮಕೃಷ್ಣ (೧೯೯೮:೯೭–೧೦೦), ವಿಜಯಾ (೨೦೦೫:೧೩–೧೯) ಬೋರಲಿಂಗಯ್ಯ (೨೦೦೭:೧೦೦೩–೧೦೦೫), ವಿಜಯಶ್ರೀ ಸಬರದ (೨೦೦೫:೧೩೮–೧೪೬) ಮುಂತಾದ ಕೃತಿಗಳು ಹೆಚ್ಚಿನ ವಿಷಯ ನೋಡಬಹುದು.

ಈ ರೀತಿಯಾಗಿ ಗುಲಬರ್ಗಾ ಪ್ರದೇಶದ ಮಹಿಳೆ ಚರಿತ್ರೆಯು ಹೆಚ್ಚು ಶೋಷಣಾತ್ಮಕ, ಸಂಘರ್ಷಣಾತ್ಮಕವಾಗಿದ್ದು, ಇದರ ವಿರುದ್ಧ ಹೋರಾಡಿದ ಮಹಿಳೆ ಚಳವಳಿಗಳು ಹೆಚ್ಚಾಗಿ ಕಂಡು ಬರುವುದಿಲ್ಲ.

## ರೈತರ ಚರಿತ್ರೆ

ಒಂದು ಪ್ರದೇಶದ ಆರ್ಥಿಕ ವ್ಯವಸ್ಥೆ ನಿರ್ವಹಿಸುವಲ್ಲಿ ರೈತನು ಅತ್ಯಂತ ಮಹತ್ವದ ಪಾತ್ರವಹಿಸುತ್ತಾನೆ. ಕೃಷಿಯ ಮಹತ್ವವನ್ನು ರೈತನನ್ನು ಅರಿತಿದ್ದು ವ್ಯವಸಾಯಕ್ಕೆ ಪೂರಕವಾಗಿ ಬೇಕಾಗುವ ಅನೇಕ ಅವಶ್ಯಕ ಸೌಲಭ್ಯಗಳು ಪಡೆಯಲು ಹೋರಾಟವನ್ನು ಮಾಡಿದ್ದಾನೆ. ರಾಜ್ಯದ ಪ್ರತಿಶತ ೬೫ ರಷ್ಟು ದುಡಿಮೆಯ ಒಲವು ಕೃಷಿ ಮತ್ತು ಕೃಷಿಸಂಬಂಧಿತ ವಲಯಗಳದ್ದಾಗಿದೆ. ಈ ವಲಯಗಳೂ ಇವತ್ತಿಗೂ ಪ್ರಧಾನ ಪಾತ್ರವಹಿಸುತ್ತಿವೆ. ಕರ್ನಾಟಕ ಏಕೀಕರಣದ ನಂತರ ಚರಿತ್ರೆಯಲ್ಲಿ ಹೊಸ ಆಯಾಮಗಳಲ್ಲಿ ರೈತರು ಚರಿತ್ರೆ ಪ್ರಾಮುಖ್ಯತೆ ಪಡೆದುಕೊಂಡಿದೆ. ಈ ಕುರಿತು ಗುಲಬರ್ಗಾ ಪ್ರದೇಶದ ಚರಿತ್ರೆ ಲೇಖನ ಶಾಸ್ತ್ರಕ್ಕೆ ದೊರೆತ ಕೃತಿಗಳು, ಲೇಖನಗಳು ಹಾಗೂ ಚರಿತ್ರೆ ದಾಖಲಾತಿಗಳ ಬಳಸಿಕೊಳ್ಳುವುದರ ಅಭ್ಯಸಿಸಲಾಗಿದೆ.

ರೈತರ ಚರಿತ್ರೆ ಅಧ್ಯಯನ ಮಾಡಲು ಎಂ.ಜಿ.ನಾಗರಾಜ್ ಅವರ ಕರ್ನಾಟಕ ರೈತ ಚಳವಳಿ–ಸತ್ಯಾಗ್ರಹಗಳ (೨೦೦೬), ಸೂರ್ಯನಾಥ ಕಾಮತ್ ಅವರು ಸಂಪಾದಿತ 'ಕರ್ನಾಟಕ ರಾಜ್ಯ ಗ್ಯಾಸೆಟಿಯರ್' (೧೯೮೪), ಎಂ.ಬಿ.ಪಾಟೀಲ್ ಅವರು ಸಂಪಾದಿತ 'ಗುಲಬರ್ಗಾ ಜಿಲ್ಲೆ ಗ್ಯಾಸೇಟಿಯರ್' (೧೯೯೭), ತಂಬಂಡ ವಿಜಯ್ ಪೂಣಚ್ಚ ಅವರ 'ರೈತಚಳವಳಿಗಳು' (೧೯೯೯), ಕೆ.ಎಂ.ಕುಮಾರ್ ಅವರ 'ಕರ್ನಾಟಕದಲ್ಲಿನ ರೈತ ಚಳವಳಿ' (೨೦೦೮), ಎಸ್.ಪಿ. ಶಂಕರನಾರಾಯಣರಾವ್ ಸ್ವಾತಂತ್ರ್ಯಗಂಗೆಯ ಸಾವಿರ ತೊರೆಗಳು (೨೦೦೮:೩೯–೨೫೬), ಸ್ಟೀವನ್ ಕ್ವಾಡ್ರಸ್ ಆಧುನಿಕ ಕರ್ನಾಟಕ (೨೦೦೫:೨೧೮–೨೨೩) ಮುಜಾಫರ್ ಅಸ್ಸಾದಿ ಅವರ ಕರ್ನಾಟಕದಲ್ಲಿ ಪಡೆಂಟಿಟಿ ರಾಜಕೀಯ ರೈತ. ರೈತ ಹೋರಾಟ ಹಾಗೂ ಸಮಾಜಿಕ ಚಳವಳಿ (೨೦೦೯), ಕೆ.ಮೋಹನ್‌ಕೃಷ್ಣರೈ ಅವರ ಚರಿತ್ರೆ ಕಥನ (೨೦೦೯:೭೯–೮೩) ಮುಂತಾದ ಕೃತಿಗಳು ಸಹಾಯಕವಾಗಿವೆ.

ಗುಲಬರ್ಗಾ ಜಿಲ್ಲೆಯಲ್ಲಿ ೧೯೯೫–೯೬ ರಲ್ಲಿ ಒಟ್ಟು ಭೌಗೋಳಿಕ ವಿಸ್ತೀರ್ಣ ೧೬,೧೦,೨೦೮ ಆಗಿದ್ದು ಇದರಲ್ಲಿ ನಿವ್ವಳ ಬಿತ್ತನೆಯಾದ ಪ್ರದೇಶದ ಶೇ ೮೦ ರಷ್ಟು ಭಾಗ. ೧೯೯೧ರಲ್ಲಿ ಕೃಷಿ ಕೆಲಸಗಾರರಲ್ಲಿ ಮುಖ್ಯಕೆಲಸಗಾರರು ಪುರುಷರು ೬೭೦,೪೨೬, ಮಹಿಳೆಯರು ೩೭೯,೪೯೬ ಹೊಂದಿದ್ದಾರೆ. ಸಾಗುವಳಿದಾರರು ಪುರುಷರು ೨೫೦,೯೬೨, ಮಹಿಳೆಯರು ೬೫,೫೩೦ ಹೊಂದಿದ್ದಾರೆ. ಕೃಷಿ ಕೆಲಸಗಾರರು ಪುರುಷರು ೧೮೪,೭೧೫, ಮಹಿಳೆಯರು ೨೫೫,೭೩೧

ಹೊಂದಿದ್ದಾರೆ. ೧೯೯೯-೯೧ರ ಕೃಷಿ ಗಣತೆಯ ವರದಿಯಂತೆ ಭೂ ಹಿಡುವಳಿಗಳಲ್ಲಿ ಗುಲಬರ್ಗಾಜಿಲ್ಲೆಯು ರಾಜ್ಯದ ಶೇ. ೭-೪ ಹೊಂದಿದೆ. ಪಾಟೀಲ (೧೯೯೭:೧೮೨-೧೮೬) ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.

ಕರ್ನಾಟಕ ಏಕೀಕರಣದ ನಂತರ ರೈತ ಸಂಘಗಳ ಪಾತ್ರ ಹಾಗೂ ರೈತರ ರಾಜಕೀಯ ಪ್ರಜ್ಞೆ ಹೋರಾಟದ ಕಸುವು ಹೆಚ್ಚು ತೀವ್ರವಾಗಿ ಕಾಣುತ್ತದೆ. ಭರಾಟೆಯಿಂದ ರೈತ ಚಳವಳಿಗಳು ನಡೆದದ್ದು ಕಂಡುಬರುತ್ತದೆ. ಅದಕ್ಕೆ ಅನುಗುಣವಾಗಿ ವಿಧಾನ ಸಭೆ ವಿಧಾನ ಪರಿಷತ್ತಿನಲ್ಲಿ ಅದರ ಪ್ರತಿ ಧ್ವನಿ ಕೇಳಿಸಿತು. ಕರ್ನಾಟಕ ಪ್ರಾಂತ ರೈತ ಸಂಘ ಅಸ್ತಿತ್ವಕ್ಕೆ ಬಂದಿತು.[೨] ಮುಂದೆ ಇಡೀ ಕರ್ನಾಟಕಕ್ಕೆ 'ಉಳುವವನೇ ಒಡೆಯ' ಎಂಬ ಕಾಯ್ದೆ ಅನ್ವಯವಾದಾಗ ಸಾರ್ವತ್ರಿಕ ರೈತ ಲಾಭವನ್ನು ಎತ್ತಿ ತೋರುತ್ತದೆ. ಕರ್ನಾಟಕ ಸರಕಾರವು ೧೯೫೬ ರಲ್ಲಿ ಅಸ್ತಿತ್ವಕ್ಕೆ ಬಂದ ಮೇಲೆ ಜೋಡಿ ಇನಾಮ್ ರದ್ದು ಮಾಡಿತ್ತು. ಇದಕ್ಕಿಂತ ಮುಂಚೆ ಭೂ ಗೇಣಿ ಮತ್ತು ಭೂ ನೊಂದಣಿಯಲ್ಲಿ ಸಾಕಷ್ಟು ವ್ಯತ್ಯಾಸಗಳಿದ್ದವು. ಇಲ್ಲಿ ೧೯೫೫, ೧೯೬೧ ಮತ್ತು ೧೯೭೪ ಭೂ ಸುಧಾರಣಾ ಕಾಯಿದೆಗಳು ರೈತ ಚಳವಳಿಯ ಪ್ರತಿಫಲವೇ ಆಗಿದೆ ಎಂದು ಕೆ.ಎಂ.ಕುಮಾರ (೨೦೦೮;೨-೩), ನಾಗರಾಜ್ (೨೦೦೬:೧೬೧) ಕೃತಿಗಳಲ್ಲಿ ತಿಳಿಸಿದ್ದಾರೆ.

೧೮೭೦ರ ದಶಕದಲ್ಲಿ ಕೊನೆಯ ಭಾಗದಲ್ಲಿ ಮತ್ತು ೧೯೮೦ರ ದಶಕದ ಆದಿ ಭಾಗದಲ್ಲಿ ಭಾರತದ ರೈತ ಚಳವಳಿಯಲ್ಲಿ ನವರೈತ ಉಗಮವನ್ನು 'ಟಾಮ್‌ಬ್ರಾಸ್' ರವರು ತಮ್ಮ 'ನ್ಯೂಫಾರ್ಮರ್ಸ್ ಮೂವಮೆಂಟ್ಸ್' ಎಂಬ ಗ್ರಂಥದಲ್ಲಿ ಹಸಿರು ಕ್ರಾಂತಿ ಪ್ರದೇಶಗಳನ್ನು ಗುರುತಿಸುತ್ತಾರೆ. ಅವರು ಹಳೆಯ ಮತ್ತು ನವ ರೈತ ಚಳವಳಿಗಳನ್ನು ಪ್ರತ್ಯೇಕಿಸಿನೋಡಿದ್ದರೆ. ಹಿಂದಿನ ರೈತ ಚಳವಳಿ ನಿರ್ದಿಷ್ಟವಾಗಿ ಭೂ ಮಾಲಿಕರ ವಿರುದ್ಧವಾಗಿತ್ತು. ಹಾಗೂ ೭೦ರ ದಶಕದಲ್ಲಿ ಎಲ್ಲಾ ಬೆಳೆಗಳನ್ನು ಬೆಳೆಯುವ ರೈತ ಯಾವುದೇ ವರ್ಗವನ್ನು ತಮ್ಮೊಳಗೆ ಇಟ್ಟುಕೊಳ್ಳದೇ ಒಂದಾಗಿ ರಾಜ್ಯಕ್ಕೆ ಬೆಂಬಲ ಬೆಳೆಗಾಗಿ ಬೇಡಿಕೆ ಸಲ್ಲಿಸಿದವು ಕುಮಾರ್ (೨೦೦೮:೭) ತಮ್ಮ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

ರೈತರು ಆರ್ಥಿಕವಾಗಿ ಮಾತ್ರವಲ್ಲ ಸಾಮಾಜಿಕವಾಗಿ ಹಿಂದುಳಿದ ವರ್ಗದವರಾಗಿದ್ದು, ಜಮೀನ್ದಾರರ ದಬ್ಬಾಳಿಕೆ ಘೋರವಾಗಿತ್ತು. ಬಿಟ್ಟಿ ದುಡಿಮೆ ಮಾಡಿ, ಹಬ್ಬಗಳಲ್ಲಿ ಜಮೀನ್ದಾರರಿಗೆ ಉತ್ತಮ ವಸ್ತ್ರಗಳ ಕಾಣಿಕೆ ಸಲ್ಲಿಸಬೇಕಾಗಿತ್ತು. ಕ್ರಮೇಣ ಈ ಪದ್ಧತಿ ಕಣ್ಮರೆ ಆದರೂ ತಮ್ಮ ಸಮಸ್ಯೆಗಳು ಕೊನೆಗಾಲಿಲ್ಲ. ರೈತನು ತಮ್ಮ ದಿನ ನಿತ್ಯದ ಅತ್ಯಗಳಿಗಾಗಿ ಅವರು ಸಾಲಗಾರರಾಗುತ್ತಾ ಹೋದರು. ಭೂಮಿಯ ಮೇಲಿನ ಬಡತನ ಕಳೆದುಕೊಳ್ಳುತ್ತಾ ಹೋದರು ರೈತಾಪಿ ವರ್ಗದ ನಿರ್ಗತಿಕತನ ಬೆಳೆಯಿತು. ಈ ಸ್ಥಿತಿಗೆ ಅನೇಕ ಸಮಸ್ಯೆಗಳು ಗುರುತಿಸಬಹುದು.

ಕೃಷಿಕಾಲ, ಸಾಮಾಜಿಕ ಸಂಸ್ಥೆಗಳ ವಿಫಲತೆ, ಸಡಿಲಗೊಳ್ಳುತ್ತಿರುವ ಸಾಮಾಜಿಕ ಭದ್ರತೆ ದುಶ್ಚಟಗಳು, ಸಾಲ, ಅನಾರೋಗ್ಯ ಹೀಗೆ ಹತ್ತಾರು ಸಮಸ್ಯೆಗಳು ರೈತನು ಅನುಭವಿಸುತ್ತಿದ್ದಾನೆ. ರೈತನು ಹೆಚ್ಚಾಗಿ ಮಳೆಯನ್ನು ನಂಬಿ ಕೃಷಿ ಕೈಗೊಳ್ಳುತ್ತಿದ್ದು ನೈಸರ್ಗಿಕವಾಗಿಯು ರೈತನು ಸಂಕಷ್ಟಕ್ಕೆ ಸಿಲುಕಿದ್ದಾನೆ. ಸ್ಟೀವನ್ ಕ್ವಾಡ್ರಸ್ (೨೦೦೫:೨೨೦), ಶಿವಸುಂದರ್ (೨೦೦೮-೦೯) ಈ ಹಿನ್ನಲೆಯಲ್ಲಿ ರೈತರು ಸರಕಾರದ ವಿರುದ್ಧ ಕ್ರಾಂತಿಕಾರಕ ಭಾವನೆಗಳನ್ನು ಬೆಳೆಸುಕೊಳ್ಳುವುದರ ಮೂಲಕ ರೈತ ಒಂದು ದಿನ ಸರಕಾರಿವ್ಯವಸ್ಥೆಯನ್ನು ನಾಶ ಮಾಡಿ ಬಿಡುವ ಎಲ್ಲಾ ಸಾಧ್ಯತೆಗಳು ಸರಕಾರ ಮನಗಾಣತೊಡಗಿತ್ತು. ಇದರಿಂದಾಗಿ ಕ್ರಮೇಣ ಪ್ರಜಾತಾಂತ್ರಿಕ ಸರಕಾರಗಳು ರೈತನ ಅಗತ್ಯಗಳಿಗೆ ಸ್ಪಂದಿಸಿ ಕನಿಷ್ಟ ಮಟ್ಟದಲ್ಲಿಯಾದರೂ ಪೂರೈಸಿ ಸಮಾಜಿಕ ಶಿಸ್ತು, ಸುವ್ಯವಸ್ಥೆಯನ್ನು ಕಾಯ್ದುಕೊಳ್ಳುವ ಪ್ರಯತ್ನ ಮಾಡುವುದನ್ನು ಗುರುತಿಸಬಹುದಾಗಿದೆ.

ರೈತರ ಹಿತರಕ್ಷಣೆಗಾಗಿ ರೈತ ಸಂಘಟನೆಗಳು ಹುಟ್ಟಿಕೊಂಡು ರೈತರ ಸಮಸ್ಯೆಗಳನ್ನು ಬಗೆಹರಿಸಲು ಅನೇಕ ಹೋರಾಟಗಳನ್ನು ಕೈಗೊಂಡವು.[೧೩] ಹಾಗೆಯೇ ಪರಿಹಾರ, ಸುಧಾರಣೆಗಳನ್ನು ತರುವಲ್ಲಿಯು ರೈತ ಸಂಘಟನೆಗಳು ಪಾತ್ರ ಮಹತ್ವದ್ದು. ಕಾಲ ಗತಿಸಿದಂತೆ ತಮ್ಮ ಧ್ಯೇಯ ಧೋರಣೆಯಲ್ಲಿ ಇನ್ನೂ ಹೆಚ್ಚಿನ ಪಕ್ವತೆ ಕಂಡುಬರತೊಡಗಿತ್ತು. ಒಂದು ಬಗೆಯ ಹೊಸತನ ಗೋಚರಿಸಲು ಉಪಕ್ರಮಿಸಿತು. ಸ್ಥಳೀಯ ಸಮಸ್ಯೆಗಳಿಗೆ ಒತ್ತು ಕೊಡುವುದರ ಬದಲು ಒಟ್ಟಾರೆ ರೈತರ ಸಾಮಾನ್ಯ ಸಮಸ್ಯೆಗಳಿಗೆ ಹೆಚ್ಚಿನ ಆದ್ಯತೆ ಕೊಡುವಂತೆ ಆಲೋಚನೆ ಹರಿಯ ತೊಡಗಿತ್ತು. ಭೈರಪ್ಪ (೨೦೦೬:೫೯೫).

ಗುಲಬರ್ಗಾ ಜಿಲ್ಲೆಯ ರೈತರು ಕಬ್ಬಿನ ಸಾಗಾಣಿಕೆಗೆ ಸಮಸ್ಯೆಯನ್ನು ಎದುರಿಸಬೇಕಾಯಿತು.[೧೪] ಆಳಂದ ಶುಗರ್ ಕೋ ಆಪರೇಟಿವ್ ಫ್ಯಾಕ್ಟರಿ ೨೧ ಕೋಟಿ ರೂಪಾಯಿ ರೈತರಿಗೆ ಬಾಕಿ ಹಣ ನೀಡಬೇಕಾಗಿತ್ತು. ೧೯೯೬ ರಲ್ಲಿ ಬೆಳೆದ ಕಬ್ಬನ್ನು ಅರೆಯುವ ಸೂಕ್ತ ವ್ಯವಸ್ಥೆ ಇಲ್ಲದೆ ಸಮಸ್ಯೆ ಎದುರಿಸಬೇಕಾಯಿತು ಇದರಿಂದ ಆಳಂದ, ಅಫಜಲ್‌ಪುರ, ಗುಲಬರ್ಗಾ ರೈತರು ಕಬ್ಬನ್ನು ಮಹಾರಾಷ್ಟ್ರಕ್ಕೆ ಸಾಗಾಣಿಕೆಯ ಮೇಲೆ ಸರಕಾರ ನಿಷೇಧ ಹೇರಿತು. ಇದನ್ನು ವಿರೋಧಿಸಿ ೨೮-೧೧-೨೦೦೧ರಂದು ಬೃಹತ್ ಪ್ರತಿಭಟನೆ ನಡೆಸುವುದರ ಜೊತೆಗೆ ಮುಖ್ಯಮಂತ್ರಿಯವರಿಗೆ ಮನವಿ ಸಲ್ಲಿಸಲಾಯಿತು.

ಗುಲಬರ್ಗಾ ಪ್ರದೇಶದಲ್ಲಿ ತೊಗರಿ ಬೆಳೆಯು ಹೆಚ್ಚು ಪ್ರಸಿದ್ಧ ಬೆಳೆಯಾಗಿದ್ದು ಇದರ ಬೆಲೆಯು ಸ್ಥಿರಗೊಳಿಸಲು ತೊಗರಿ ಮಂಡಳಿ ಸ್ಥಾಪಿಸಬೇಕು ಮತ್ತು ತೊಗರಿ ಬೆಳೆ ಹಾನಿಗೊಳಗಾದ ಸಂದರ್ಭದಲ್ಲಿ ಪರಿಹಾರ ಸೇರಿದಂತೆ ಬೆಂಬಲ ಬೆಲೆ ನೀಡುವಂತೆ ದಿನಾಂಕ ೨೯-೧೨-೨೦೦೩ರಂದು ಮಲ್ಲಾಬಾದನಿಂದ ಪಾದಯಾತ್ರೆ ಆರಂಭಿಸಲಾಯಿತು ಇದರಲ್ಲಿ ೫೦೦ಕ್ಕೂ ಹೆಚ್ಚಿನ ರೈತರು ಭಾಗವಹಿಸಿದರು. ೧೯೯೮ರಲ್ಲಿ ಗುಲಬರ್ಗಾ ಜಿಲ್ಲೆಯಲ್ಲಿ ತೊಗರಿ ಬೆಳೆ

ನಾಶವಾಗಿದ್ದಕ್ಕೆ ೧೨ ಜನ ರೈತರು ವಿಷ ಸೇವಿಸಿ ಪ್ರಾಣ ಕಳೆದುಕೊಂಡಿದ್ದಾರೆ. ಆಳಂದ ತಾಲೂಕಿನ ವೈಜಾಪುರ ಗ್ರಾಮದ ಶರಣಯ್ಯ, ಹಂಗರಗಿ ಮಠ ಕೀಟನಾಶಕ ಕುಡಿದು ಮರಣ ಹೊಂದಿದನು. ಚಿತ್ತಾಪುರ ತಾಲೂಕಿನ ಹೊಸೂರಿನ ಬಸವರಾಜ ನೇಣುಹಾಕಿಕೊಂಡು ಮರಣ ಹೊಂದಿದನು. ಶರಣಪ್ಪ ನಾಟೀಕಾರ ಕೀಟನಾಶಕ ಸೇವಿಸಿ ಮರಣ ಹೊಂದಿದನು. ಕೊಡದುರು ಗ್ರಾಮದ ಮಸ್ತಾನಪ್ಪ, ಹಿಪ್ಪರಗಿಯ ಭರಮಣ್ಣ ನೇಣು ಹಾಕಿಕೊಂಡು ಮರಣ ಹೊಂದಿದರು. ಗುಲಬರ್ಗಾ ತಾಲೂಕಿನ ಅಂಕಲಗಿಯ ಶಿವಲಿಂಗಪ್ಪ ಕೊಂಬಣ್ಣ ನೇಣು ಹಾಕಿಕೊಂಡು ಮರಣ ಹೊಂದಿದರು. ಹೆಚ್ಚಾಗಿ ನೆರೆಹಾವಳಿ, ಬರಗಾಲದಿಂದಾಗಿ ಬೆಳೆನಾಶ ಹೊಂದಿ ಕೃಷಿಸಾಲ ತೀರಿಸಲಾಗದೇ ರೈತರು ಆತ್ಮಹತ್ಯೆಗೆ ಶರಣಾಗಿದ್ದಾರೆ. ೧೯೯೬-೨೦೦೫ ರ ಅವಧಿಯಲ್ಲಿ ಕನಿಷ್ಠ ಒಂದುವರೆ ಲಕ್ಷಕ್ಕೂ ಹೆಚ್ಚು ಭಾರತದ ವಿವಿಧ ಭಾಗಗಳಲ್ಲಿ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. (ಕರ್ನಾಟಕ ಪ್ರಾಂತ ರೈತ ಸಂಘ ೧೪ನೇ ರಾಜ್ಯ ಸಮ್ಮೇಳನದ ಕರಡುವರಿದೆ-೪) ೧೦-೩-೧೯೯೮ ರಂದು ಕರ್ನಾಟಕ ಪ್ರಾಂತ ರೈತ ಸಂಘಟನೆ ರೈತರು ಮೃತ ಪಟ್ಟ ಕುಟುಂಬಕ್ಕೆ ಪರಿಹಾರ ನೀಡಬೇಕು ಮತ್ತು ಹಾನಿಯಾದ ಬೆಳೆಗೆ ಸಾಲ ಮನ್ನಾ ಮಾಡಬೇಕು ಎಂದು ಗುಲಬರ್ಗಾದಲ್ಲಿ ಉಗ್ರಹೋರಾಟ ಕೈಗೊಳ್ಳಲಾಯಿತ್ತು. ಈ ಪ್ರತಿಭಟನೆಗೆ ಮಣಿದು ಸರಕಾರ ೧೯೯೮ ಡಿಸೆಂಬರ್ ರಂದು ಪರಿಹಾರ ನೀಡಲು ಮುಂದೆ ಬಂದಿತು. ಮುಂದೆ ರೈತರ ಆತ್ಮಹತ್ಯೆಗೆ ಸಂಬಂಧಿಸಿದಂತೆ ಗುಲಬರ್ಗಾದಲ್ಲಿ ರೈತ ಸಂಘಟನೆ ಮತ್ತು ಧುರಿಣ ನಾಯಕರು ೩೦-೧೧-೨೦೦೩ ರಂದು ಬೃಹತ್ ಪ್ರತಿಭಟನೆ ಮೂಲಕ ಜಿಲ್ಲಾಧಿಕಾರಿಗಳಿಗೆ ಮನವಿ ಸಲ್ಲಿಸಿದರು. ಇವರ ಆಧಾರದ ಮೇಲೆ ರಾಜ್ಯಸರಕಾರ ರೈತರ ಹತ್ಯೆಯ ಅಧ್ಯಯನದ ತಜ್ಞರ ಸಮಿತಿ ನೇಮಕ ಮಾಡಿತು. ಡಾ.ಜಿ.ಕೆ.ವೀರೇಶ ನೇತೃತ್ವದಲ್ಲಿ ಆತ್ಮಹತ್ಯೆ ಮಾಡಿಕೊಂಡ ರೈತರ ಕುಟುಂಬಕ್ಕೆ ಭೇಟಿ ನೀಡುವುದರ ಮೂಲಕ ೧ ಲಕ್ಷ ಪರಿಹಾರ ನೀಡಿತ್ತು (ನಾಗರಾಜ್, ೨೦೦೬:೫೭೧-೫೭೩)

ಮಳೆಯಿಂದ, ಬರಗಾಲದಿಂದ ಹಾನಿಗೊಳಗಾದ ಬೆಳೆಯನ್ನು ವಿಮೆಯ ಯೋಜನೆಯನ್ನು ೧೯೮೫ರಲ್ಲಿ ಪ್ರಾರಂಭಿಸಲಾಯಿತು.[೧೫] ಇದರಿಂದ ಸರಕಾರದಿಂದ ಹಣದ ಸೌಲಭ್ಯವನ್ನು ಒದಗಿಸಲಾಯಿತ್ತು. ಕೆಲವು ಸಂದರ್ಭದಲ್ಲಿ ಯಾವುದೇ ಪರಿಹಾರಸಿಗದ ಸಂದರ್ಭದಲ್ಲಿ ಬೆಳೆ ವಿಮೆಗಾಗಿ ಚಳವಳಿ ಪ್ರಾರಂಭಿಸಲಾಗುತ್ತಿತ್ತು. ಪಾಟೀಲ ೧೯೯೭:೨೦೨. ೧-೨-೨೦೦೩ ಬೆಳೆ ವಿಮೆ ಜಾರಿಗೆ ತುರುವಂತೆ ಆಫ್‌ಜಲ್‌ಪುರ ತಾಲೂಕು ಕಚೇರಿ ಎದುರು ಕರ್ನಾಟಕ ಪ್ರಾಂತ ರೈತರ ಸಂಘಟನೆಯು ಪ್ರತಿಭಟನೆ ಮಾಡಿದರು. ಮತ್ತು ೨-೧-೨೦೦೪ ರಂದು ಜೇವರ್ಗಿ ತಹಸಿಲ್ದಾರ ಕಚೇರಿಗೆ ನುಗ್ಗಿ ತೊಗರಿ ಬೆಳೆಗೆ ಪರಿಹಾರ ಒದಗಿಸಬೇಕು ಮತ್ತು ಬೆಳೆ ವಿಮೆ ನೀಡಬೇಕೆಂದು ಒತ್ತಾಯಿಸಿದರು. ಜೇವರ್ಗಿ ಮತ್ತು ಚಿಂಚೋಳಿಯಲ್ಲಿ ೧೭-೧೧-೦೪ ರಂದು

ರೈತರು ಮತ್ತು ಕರ್ನಾಟಕ ಪ್ರಾಂತದ ರೈತರು ಸಂಘದ ಸದಸ್ಯರು ಧರಣಿನಡೆಸಿದರು. ೨೦೦೨-೦೩ ವರ್ಷದಲ್ಲಿ ವಿಮೆ ಹಣಬಿಡುಗಡೆ ಮಾಡಬೇಕು ಎಂದು ಸಂಘಟನೆ ಅಗ್ರಹಿಸಿದವು.

ಇತ್ತೀಚೆಗೆ ರೈತರು ಕೊಳವೆ ಮುಖಾಂತರ ಭಾವಿ, ಕೆರೆಗಳ ಮೂಲಕ ನೀರನ್ನು ಬೆಳೆಗೆ ಬಿಡುವುದರ ಮೂಲಕ ಬೆಳೆಯನ್ನು ಬೆಳೆಯುತ್ತಾನೆ. ಇದಕ್ಕೆ ವಿದ್ಯುತ್ ಅವಶ್ಯಕವಾಗಿದ್ದು. ಗುಲಬರ್ಗಾದಲ್ಲಿ ನಿರಂತರ ವಿದ್ಯುತ್ ಪೂರೈಕೆ ಆಗದಿದ್ದಾಗ ಕರ್ನಾಟಕ ಪ್ರಾಂತ ರೈತ ಸಂಘ ಮತ್ತು ರಾಜ್ಯ ರೈತ ಸಂಘ, ಜಿಲ್ಲಾ ಅಭಿವೃದ್ಧಿ ಹೋರಾಟ ಸಮಿತಿ, ರೈತ ಸಂಘಟನೆಗಳು ಕೆ.ಪಿ.ಟಿ.ಸಿ.ಎಲ್ ಕಚೇರಿ ಮುತ್ತಿಗೆಗೆ ತೀರ್ಮಾನಿಸಿ ಕಾರ್ಯ ಪ್ರವತ್ತರಾದಾಗ ರೈತರನ್ನು ಚದುರಿಸಲು ಪೋಲೀಸರು ಲಾಠಿ ಪ್ರಹಾರ ನಡೆಸಿದರು ಇದರಿಂದಾಗಿ ೫೦ ಕ್ಕೂ ಹೆಚ್ಚು ರೈತರು ಗಾಯಗೊಂಡರು. ೩೦-೯-೨೦೦೪ ರಂದು ಭಾಗ್ಯಜ್ಯೋತಿ ಸಂಪರ್ಕಕ್ಕೆ ಮೀಟರನ್ನು ಅಳವಡಿಸುವುದನ್ನು ವಿರೋಧಿಸಿ ಕರ್ನಾಟಕ ಪ್ರಾಂತ ರೈತ ಸಂಘದ ಆಶ್ರಯದಲ್ಲಿ ಗುಲಬರ್ಗಾ ಮತ್ತು ಜೇವರ್ಗಿಯಲ್ಲಿ ವಿದ್ಯುತ್ ಮೀಟರ್‌ಗಳನ್ನು ಕಿತ್ತಿ ತಹಸಿಲ್ದಾರ್ ಕಚೇರಿ ಎದುರು ರಾಶಿ ಹಾಕಿ ಪ್ರತಿ ಭಟಿಸಿದರು ನಾಗರಾಜ್ (೨೦೦೬:೫೬೧-೫೬೨).

ಗುಲಬರ್ಗಾ ಜಿಲ್ಲೆಯಲ್ಲಿ ಏತನೀರಾವರಿಗಾಗಿ ಮಲ್ಲಾಬಾದ್ ಏತನಿರಾವರಿ ಮತ್ತು ಇಟಗಾ, ಗಾಣಗಾಪೂರ ಬ್ರಿಜ್ ಕಮ್ ಬ್ಯಾರೇಜ್, ಕೊನಾಹಿಪ್ಪರಾಗಿ, ಸರಡಗಿ ಬ್ಯಾರೇಜ್ ನಿರ್ಮಿಸುವಂತೆ ಒತ್ತಾಯಿಸಿ ನೀರಾವರಿಗಾಗಿ ಹಲವಾರು ಚಳವಳಿಗಳು ನಡೆದಿವೆ.

೧೯೮೩ ರಲ್ಲಿ ಸರಕಾರವೂ ರಸಗೊಬ್ಬರಗಳ ಮೇಲಿನ ತೆರಿಗೆಯನ್ನು ಶೇ ೩ರಿಂದ ೨ಕ್ಕೆ ಇಳಿಸಿತು. ೧೯೮೮ರ ಹಲವಾರು ರಿಯಾಯಿತಿಗಳನ್ನು ರೈತರ ಪರವಾಗಿ ಪ್ರಕಟಿಸಿತು. ೧೯೮೪-೮೫ರಲ್ಲಿ ಕೀಟನಾಶಕಗಳು, ಕಳೆನಾಶಕಗಳು, ಮುಂತಾದ ಮೇಲಿನ ತೇರಿಗೆ ಶೇ ೫ರಿಂದ ೪ಕ್ಕೆ ಇಳಿಸಲಾಯಿತ್ತು ಭೈರಪ್ಪ (೨೦೦೬:೬೦೨) ಹೀಗೆ ರೈತರ ಅಭಿವೃದ್ಧಿ ಮತ್ತು ಸುಧಾರಣೆಗಳನ್ನು ಪಂಚವಾರ್ಷಿಕ ಯೋಜನೆಯ ಮೂಲಕ ರೈತರ ಅಭಿಪೃದ್ಧಿ ಸಂಘ ಹಾಗೂ ಕೃಷಿ ಇಲಾಖೆಗಳು ಜಿಲ್ಲೆಯಲ್ಲಿ ಪ್ರಾರಂಭಗೊಂಡು ನೀರಾವರಿ ರೈತರ ಸಾಲ ಸೌಲಭ್ಯಗಳು ಒದಗಿಸುವುದರ ಮೂಲಕ ರೈತರಿಗೆ ತಂತ್ರಾಂಶ ತರಬೇತಿ, ಉತ್ತಮ ಬೀಜಗೊಬ್ಬರ ಒದಗಿಸಲು ಪ್ರಾರಂಭಿಸಿತು. ಕೃಷಿ ಇಲಾಖೆ ವತಿಯಿಂದ ರೈತರಿಗೆ ತಿಳುವಳಿಕೆಗಳು ನೀಡುವಂತಹ ಕಾರ್ಯಕ್ರಮಗಳು ನಡೆಸಿತು. ಕೃಷಿ ಮಾರುಕಟ್ಟೆ ಅಭಿವೃದ್ಧಿ, ಸಾರಿಗೆ ಸೌಲಭ್ಯ ಒದಗಿಸುತ್ತಾ ಬಂದಿದೆ. ಇಷ್ಟೆಲ್ಲ ಸೌಲಭ್ಯ ಒದಗಿಸಿದರೂ ಶ್ರೀಮಂತ ರೈತರು ಹೆಚ್ಚು ಅನುಕೂಲಗಳನ್ನು ಪಡೆಯುತ್ತಿದ್ದಾರೆ. ಬಡ ರೈತರು ಸೌಲಭ್ಯಗಳೂ ಎಟುಕದೆ ಬಡವರಾಗಿಯೇ ಉಳಿದಿದ್ದಾರೆ. ಇವರ ಅಸಮರ್ಥ್ಯತೆ ತಿಳುವಳಿಕೆ ಕೊರತೆ ಹಾಗೂ ಆಡಳಿತ ಸಂಘಗಳ ತಾರತಮ್ಯ ನೀತಿಯಿಂದ

ಅವರ ಅಭಿವೃದ್ಧಿ ಪ್ರಗತಿ ಅಂತರ ಕುಂಟುತ್ತ ಬಂದಿದೆ ಅಲ್ಲದೆ ಜಾಗತೀಕರಣ, ಮೇಲ್ವರ್ಗಗಳ ಧರ್ಮ ನೀತಿಗಳಿಂದ ರೈತರು ತೀವ್ರತರವಾದ ಸಮಸ್ಯೆ ಎದುರಿಸುತ್ತಲೇ ಇದ್ದಾರೆ. ರಾಜೇಂದ್ರ ಚನ್ನಿ (೨೦೦೪:೨೧೦), ದೇವರಾಜಯ್ಯ (೧೯೯೯:೧೬), ಪಾಟೀಲ (೧೯೯೭:೧೯೯-೨೦೦) ಕೃತಿಕಾರ ಕೃತಿಯಲ್ಲಿ ಮೇಲಿನ ಅಂಶಗಳು ಕಂಡುಬರುತ್ತವೆ.

ಹೀಗೆ ರೈತರು ಸತತವಾಗಿ ಪರಿಸರ ವೈಪರಿತ್ಯದಿಂದ ಮತ್ತೊಂದು ಕಡೆ ಶ್ರೀಮಂತರ ವರ್ಗ ಬಂಡವಾಳಶಾಹಿ ವರ್ಗಗಳಿಂದ ದಬ್ಬಾಳಿಕೆಗೆ ಒಳಗಾಗುವುದರ ಮುಖಾಂತರ ತಮ್ಮ ನೆಲೆಯನ್ನು ಕಂಡುಕೊಳ್ಳಲು ಹೋರಾಡುತ್ತಿದ್ದಾರೆ,

**ಕಾರ್ಮಿಕರ ಚರಿತ್ರೆ**

ಕಾರ್ಮಿಕರ ಚರಿತ್ರೆಯು ಕರ್ನಾಟಕ ಏಕೀಕರಣ ನಂತರದ ಅವಧಿಯಲ್ಲಿ ಕಾರ್ಮಿಕ ಕಾರ್ಮಿಕ ಚರಿತ್ರೆ ರಚನೆ, ಪ್ರಾಮುಖ್ಯತೆ ಪಡೆದುಕೊಂಡಿದೆ. ಪಂಚವಾರ್ಷಿಕ ಯೋಜನೆಗಳ ಮೂಲಕ ಕೈಗಾರಿಕೆ ಅಭಿವೃದ್ಧಿಯ ಹಿನ್ನಲೆಯಲ್ಲಿ ಬೃಹತ್ ಉದ್ಯಮಗಳ ಜೊತೆಗೆ ಹಲವಾರು ಗುಡಿಕೈಗಾರಿಕೆಗಳು ಬೆಳವಣಿಗೆ ಗೊಂಡವು. ಅವುಗಳಲ್ಲಿ ದುಡಿಯುವ ಜನರ ಅಥವಾ ಕಾರ್ಮಿಕರ ಸ್ಥಿತಿಗತಿಯ ಬಗ್ಗೆ ಸಮಾಜಶಾಸ್ತ್ರಜ್ಞರು, ಅರ್ಥಶಾಸ್ತ್ರಜ್ಞರು ಮತ್ತು ಚರಿತ್ರೆಕಾರರು ಕಾರ್ಮಿಕ ಒಳಗೊಂಡ ಬರವಣಿಗೆಗಳು ಕಂಡುಬರುತ್ತವೆ. ಅಲ್ಲದೆ ಕಮ್ಯುನಿಸ್ಟ್ ಸಂಘಟನೆಗಳು, ಕಾರ್ಮಿಕ ಸಂಘಟನೆಗಳು ಬೆಳವಣಿಗೆಯ ಹಿನ್ನೆಲೆಯಲ್ಲಿ ಚರಿತ್ರೆ ಲೇಖನಶಾಸ್ತ್ರ ವಿಸ್ತಾರವಾಯಿತು. ಈ ಹಿನ್ನೆಲೆಯಲ್ಲಿ ಗುಲಬರ್ಗಾ ಪ್ರದೇಶದ ಕಾರ್ಮಿಕ ಚರಿತ್ರೆಯನ್ನು ವಿವರಿಸುವಾಗ ಅಧ್ಯಯನ ನಡೆದಿರುವುದು ಅಲ್ಪವಾಗಿ ಕಂಡುಬರುತ್ತದೆ. ಆದರೂ ಕೆಲ ಕೃತಿಗಳು ಕಾರ್ಮಿಕ ಚರಿತ್ರೆ ಕುರಿತು ಅಧ್ಯಾಯನಕ್ಕೆ ಸಹಾಯಕವಾಗಿದೆ.

ಸೂರ್ಯನಾಥ ಕಾಮತ್ ಅವರು ಸಂಪಾದಿಸಿದ ಕರ್ನಾಟಕ ರಾಜ್ಯ ಗ್ಯಾಸೆಟಿಯರ್ (೧೯೮೪), ಷೇಕ್ ಅಲಿ ಅವರು ಸಂಪಾದಿಸಿದ ಕರ್ನಾಟಕ ಚರಿತ್ರೆ (೧೯೯೭), ಪಾಟೀಲ ಅವರ ಸಂಪಾದಿತ 'ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್' (೧೯೯೭), ಕುಮಾರ್ ಅವರ 'ದಾವಣಗೆರೆ ಹತ್ತಿಗಿರಣಿ ಕಾರ್ಮಿಕರ ಚಳವಳಿಗಳು' (೨೦೦೭), ಮೋಹನಕೃಷ್ಣ ರೈ ಅವರ 'ವಸಾಹತುಶಾಹಿ ಮತ್ತು ನಗರಿಕರಣ' (೨೦೦೭:೫೧-೬೮) ಬೈರಪ್ಪ ಅವರ 'ಸಮಗ್ರ ಗ್ರಾಮೀಣ ಸಮಾಜ ಮತ್ತು ಅಭಿವೃದ್ಧಿ' (೨೦೦೬), ಬೋರಲಿಂಗಯ್ಯ ಅವರು ಸಂಪಾದಿತ '೫೦ ಸುವರ್ಣ ಕರ್ನಾಟಕ ಅಭಿವೃದ್ಧಿ ಪಂಥ' (೨೦೦೭), ಶಂಕರನಾರಾಯಣರಾವ್ 'ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು' (೨೦೦೮:೨೨೧:೨೩೮) ಮುಂತಾದ ಕೃತಿಗಳು ಅಧ್ಯಯನಕ್ಕೆ ಅಧ್ಯಯನಕ್ಕೆ ಸಹಕಾರಿಯಾಗಿದೆ. ಅಲ್ಲದೆ ಅಪ್ರಕಟಿತ ನಿಬಂಧ ಮತ್ತು ಪ್ರಬಂಧಗಳನ್ನು ಗಮನಿಸಿದಾಗ

ಮಹೇಶ್‌ಕುಮಾರ್ ಸಂಕನೂರ ಅವರ ಗುಲಬರ್ಗಾ ಎಂ.ಎಸ್.ಕೆ.ಮಿಲ್:ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಅಧ್ಯಾಯನ (೨೦೦೬), ಮುಂತಾದ ಆಧಾರಗಳು ಪ್ರಮುಖವಾಗಿವೆ. ಇವುಗಳಿಂದ ಪ್ರಸ್ತುತ ಅಧ್ಯಯನದಲ್ಲಿ ಕಾರ್ಮಿಕರ ಪರಿಸ್ಥಿತಿ ಹಾಗೂ ಹೋರಾಟಗಳ ಕುರಿತು ಕಿರುಪ್ರಯತ್ನಿಸಲಾಗಿದ್ದು ಈ ಕೆಳಕಂಡಂತೆ ವಿವರಿಸಲು ಯತ್ನಿಸಲಾಗಿದೆ.

ಗುಲಬರ್ಗಾದಲ್ಲಿ ೧೮೮೬ಕ್ಕೂ ಪೂರ್ವದಲ್ಲಿ ಬೃಹತ್ ಪ್ರಮಾಣದ ಕೈಗಾರಿಕೆಗಳಿರಲಿಲ್ಲ. ಎಂ.ಎಸ್.ಕೆ.ಮಿಲ್ ಹೆಸರಿನ ಬಟ್ಟೆ ಗಿರಿಣಿಯು ೧೮೮೪ ರಲ್ಲಿ ನೊಂದಣಿಗೊಂಡು ೧೮೮೬ ರಲ್ಲಿ ಕಾರ್ಯರಂಭಗೊಂಡಿತು. ೧೯೨೫ ರಲ್ಲಿ ಶಹಾಬಾದಿನಲ್ಲಿ ಬೃಹತ್ ಪ್ರಮಾಣದ ಸಿಮೆಂಟ್ ಕಾರ್ಖಾನೆ ಸ್ಥಾಪನೆಗೊಂಡಿತು. ಗುಲಬರ್ಗಾದ ನಗರದ ವ್ಯಾಪ್ತಿಯಲ್ಲಿಯೇ ಸುಮಾರು ೫೦-೬೦ ಬೇಳೆ ಮಾಡುವ ಗಿರಿಣಿಗಳು ಇರುವುದಲ್ಲದೇ ಶಹಬಾದ್, ಗಾಣಗಾಪುರ, ಚಿತ್ತಾಪುರ, ಸೇಡಂ, ಜೀವರ್ಗಿಗಳಲ್ಲಿ ಬೇಳೆಗಿರಣಿಗಳು ಕಂಡುಬರುತ್ತವೆ. ಗೃಹ ಕೈಗಾರಿಕೆಗಳಾದ ಬಟ್ಟೆ ನೇಯ್ಗೆಯು ಪ್ರಮುಖವಾಗಿದ್ದು ಬಹಳಷ್ಟು ಜನರಿಗೆ ಉದ್ಯೋಗವನ್ನು ಕಲ್ಪಿಸಿಕೊಟ್ಟಿತು. ಜಿಲ್ಲೆಯಲ್ಲಿ ನೇಯ್ಗೆಯವರ ವೃತ್ತಿ ಸಂಘಗಳಿದ್ದವು. ಇತರ ಕೈಗಾರಿಕಾ ಘಟಕಗಳು ವ್ಯಾಪ್ತಿಗೆ ಸೇರಿದ ಚರ್ಮ ಹದ ಮಾಡುವುದು ಮತ್ತು ಚರ್ಮೋದ್ಯಮ, ಇಂಜಿನಿಯರಿಂಗ್ ಕೆಲಸ, ಸ್ವಯಂ ಚಾಲಿತ ಯಂತ್ರಗಳ ಕಾರ್ಯಗಾರ, ಸೋಪು ತಯಾರಿಕೆ, ಬೀಡಿಕಾರ್ಖಾನೆಗಳು ಜಿಲ್ಲೆಯ ಪ್ರಮುಖ ಪಟ್ಟಣಗಳಲ್ಲಿ ಕಾರ್ಯ ನಿರ್ವಹಿಸುತ್ತವೆ. ಸಾವಿರಾರು ಜನರಿಗೆ ಉದ್ಯೋಗವನ್ನೊದಗಿಸಿದೆ. ಪಾಟೀಲ (೧೯೯೭:೨೨೫-೨೨೬), ಮೋಹನ ಕೃಷ್ಣರೈ (೨೦೦೭:೬೦) ಕೃತಿಗಳಲ್ಲಿ ತಿಳಿಸಿದ್ದಾರೆ.

ಗುಲಬರ್ಗಾ ಜಿಲ್ಲೆಯಲ್ಲಿ ಹೆಚ್ಚಾಗಿ ಕೈಗಾರಿಕೆಗಳಲ್ಲಿ ಕಾರ್ಮಿಕರು ಹಳ್ಳಿ ಪ್ರದೇಶಗಳಿಂದ ಬಂದವರಾಗಿದ್ದು ವ್ಯವಸಾಯ ಪ್ರಧಾನವಾಗಿರುವುದರಿಂದ ಅಧಿಕ ಪ್ರಮಾಣದ ಕಾರ್ಮಿಕರು ವ್ಯವಸಾಯವಲಂಬಿಗಳಾಗಿಯೂ ಮತ್ತು ವ್ಯವಸಾಯ ಕಾರ್ಮಿಕರಾಗಿಯೂ ದುಡಿಯುತ್ತಿರುವರು. ಒಟ್ಟು ಕೆಲಸಗಾರರ ಪೈಕಿ ವ್ಯವಸಾಯಾವಲಂಬಿಗಳ ಸಂಖ್ಯೆ ಅಧಿಕವಾಗಿರುವುದರಿಂದ ಅವರ ಸರಾಸರಿ ದುಡಿಮೆಯು ಬಹಳ ಕಡಿಮೆ ಇರುವುದು. ೧೯೯೫-೯೬ರಲ್ಲಿ ವ್ಯವಸಾಯ ಕಾರ್ಮಿಕರು ೪,೬೦,೮೩೬ ಗುಲಬರ್ಗಾ ಜಿಲ್ಲೆಯಲ್ಲಿ ಹೊಂದಿದೆ (ಆಗ್ರೋ ಬ್ಯಾಂಕ್ ರಿಪೋರ್ಟ್ ೧೯೯೫-೯೬ ಗುಲಬರ್ಗಾ). ಹೆಚ್ಚಾಗಿ ಕಾರ್ಮಿಕರ ಸಾಕ್ಷರತೆಯ ಪ್ರಮಾಣ ತುಂಬಾ ಕಡಿಮೆ ಇದ್ದು ಪುರುಷರು ೨೦% ಸಾಕ್ಷರತೆಯಿಂದ ಬಳಲುತ್ತಿರುವ ಕಾರ್ಮಿಕ ವರ್ಗದವರು ಹತ್ತಾರು ಸಮಸ್ಯೆಗಳಿಗೆ ಮೂಲ ಕಾರಣವಾಗಿವೆ. ಕುಟುಂಬದಲ್ಲಿ ಮಕ್ಕಳ ಶಿಕ್ಷಣದ ಪ್ರಮಾಣ ೪೭.೩೭ ರಷ್ಟಿದ್ದು ಹೆಚ್ಚಾಗಿ ಪ್ರಾಥಮಿಕ ಮಟ್ಟದವರೆಗೆ ಶಿಕ್ಷಣ ಪಡೆದುಕೊಂಡಿದ್ದಾರೆ ಮಹೇಶ್‌ಕುಮಾರ್ (೨೦೦೬:೫೦-೫೭) ತಮ್ಮ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

ಗುಲಬರ್ಗಾ ಜಿಲ್ಲೆಯಲ್ಲಿ ೧೯೯೬ ಮಾರ್ಚ್ ಅಂತ್ಯದಲ್ಲಿ ಒಟ್ಟು ೧೫ ಮಾಧ್ಯಮ ಮತ್ತು ಬೃಹತ್ ಪ್ರಮಾಣದ ಕೈಗಾರಿಕೆಗಳಿದ್ದು ೬,೦೨೫ ಕಾರ್ಮಿಕರು ಕೆಲಸ ನಿರ್ವಹಿಸುತ್ತಿದ್ದಾರೆ. ಮತ್ತು ಸಣ್ಣ ಪ್ರಮಾಣದ ಕೈಗಾರಿಕೆಗಳು ೫,೫೦೩ ಇದ್ದು ಒಟ್ಟು ಕಾರ್ಮಿಕರ ಸಂಖ್ಯೆ ೩೦,೭೫೪ ಒಳಗೊಂಡಿದೆ (ಜಿಲ್ಲಾ ಕೈಗಾರಿಕೆ ಕೇಂದ್ರ ಗುಲಬರ್ಗಾ). ಹೀಗೆ ಕಾರ್ಮಿಕರು ಗುಲಬರ್ಗಾ ಜಿಲ್ಲೆಯಲ್ಲಿ ಹೊಂದಿದ್ದು ತಮ್ಮದೆಯಾದಂತಹ ಜೀವನವನ್ನು ಸರಳವಾಗಿ ನಡೆಸಿಕೊಂಡು ಹೋಗುತ್ತಿದ್ದರು. ಒಂದು ಕಾಲದಲ್ಲಿ ತಮ್ಮ ಸರಳ ಜೀವನ ಮಾಡುತ್ತಿದ್ದ ಕಾರ್ಮಿಕರು ಇಂದಿನ ಆಧುನೀಕರಣ, ಜಾಗರೀಕರಣ ಹಿನ್ನೆಲೆಯಲ್ಲಿ ತಮ್ಮ ವೃತ್ತಿಯನ್ನು ಕಳೆದುಕೊಂಡು ನಿರುದ್ಯೋಗಿಗಳಾಗಿ ಅಲೆದಾಡಿದರೆ ಮತ್ತೊಂದು ಕಡೆ ಬೆಲೆ ಏರಿಕೆ, ಬಡತನ, ಮಾಲಿಕರ ಶೋಷಣೆ, ಮುಂತಾದ ಸಮಸ್ಯೆಗಳಿಗೆ ಕಾರ್ಮಿಕರು ಎದುರಿಸಬೇಕಾಯಿತು.

ಕೇಂದ್ರ ಸರಕಾರ ಹಾಗೂ ರಾಜ್ಯ ಸರಕಾರಗಳು ಕೈಗೊಂಡ ಪಂಚವಾರ್ಷಿಕ ಯೋಜನೆಯ ಅಡಿಯಲ್ಲಿ ಅನೇಕ ಗುಡಿ ಕೈಗಾರಿಕೆಗಳಿಗೆ ಮತ್ತು ಬೃಹತ್ ಕೈಗಾರಿಕೆಗಳೊಂದಿಗೆ ಕಾರ್ಮಿಕರ ಸಂಖ್ಯೆಯು ಹೆಚ್ಚಾಯಿತು. ವಿವಿಧ ಕಾರಣಗಳಿಂದ ಕಾಲಕ್ರಮೇಣ ಕಾರ್ಮಿಕ ಸಮಸ್ಯೆಗಳು ಬೇಡಿಕೆಗಳು ಹೆಚ್ಚಾದಂತೆ ಅವುಗಳ ನಿವಾರಣೆಗಾಗಿ ಸಂಘಟನೆಗಳು ಬೆಳವಣಿಗೆಗೊಂಡು ಹೋರಾಟಗಳು ಪ್ರಾರಂಭಿಸಿದವು. ಗುಲಬರ್ಗಾ ಎಂ.ಎಸ್. ಕೆ. ಮಿಲ್ ನಾಲ್ಕು ಕಾರ್ಮಿಕ ಸಂಘಟನೆ ಕಂಡು ಬಂದಿದ್ದು ಕಾರ್ಮಿಕರ ಹಿತರಕ್ಷಣೆಗೆ ಸತತವಾಗಿ ಹೋರಾಟವನ್ನು ನಡೆಸಿತು.[೧೬] ಗಂಗಾಧರ ನಮೋಶಿಯವರು ಕಾರ್ಮಿಕರ ಹಿತರಕ್ಷಣೆಗಾಗಿ ಎಂ.ಎಸ್.ಕೆ. ಮಿಲ್ ಕಾರ್ಯರಂಭ ಮಾಡಿದ ದಿನದಿಂದಲೂ ಕಾರ್ಮಿಕರ ಸಮಸ್ಯೆಗೆ ಸ್ಪಂದಿಸುತ್ತಾ ಬಂದಿದ್ದಾರೆ. ಪ್ರತಿಶತ ೨೫ರಷ್ಟು ವೇತನ ಕಡಿತ ಮಾಡಲು ಸರಕಾರ ಆದೇಶಿಸಿದ ಸಂದರ್ಭದಲ್ಲಿ ನಮೋಶಿಯವರು ಪ್ರತಿಭಟಿಸಿ ತಡೆ ಹಿಡಿಯುವಲ್ಲಿ ಯಶಸ್ವಿಯಾದರು. ೧೯೭೩ ರಲ್ಲಿ ಕಾರ್ಮಿಕರ ತುಟಿಭತ್ಯೆಯ ೧೫ ರೂಪಾಯಿಗಳಿಂದ ೨೪ ರೂಪಾಯಿಗಳಿಗೆ ಹೆಚ್ಚಿಸಿದರು. ೧೯೭೪ ರಲ್ಲಿ ಕಾರ್ಖಾನೆಯ ಕೆಲವು ಕಾರ್ಮಿಕರನ್ನು ದುರ್ನಡತೆಯ  ಆಧಾರದ ಮೇಲೆ ಅಮಾನತ್ತಿನಲ್ಲಿಡಲಾಗಿತ್ತು. ಪುನಃ ಸೇವೆಯನ್ನು ಸೇರುವಂತೆ ಪ್ರಯತ್ನ ಮಾಡಿದರು. ಎಂ.ಎಸ್.ಕೆ. ಮಿಲ್ ಟೆಕ್ಸ್‌ಟೈಲ್  ಲೇಬರ್  ಯುನಿಯನ್ ೧೯೮೦ ರಲ್ಲಿ ಪ್ರಾರಂಭಗೊಂಡಿತು. ಪ್ರಥಮವಾಗಿ ಕಾರ್ಮಿಕರ ಸಂಬಳವನ್ನು ೨೫ ರೂಪಾಯಿ ಇದ್ದದನ್ನು ೬೫ ರೂಪಾಯಿ ವೇತನ ಪಡೆದುಕೊಳ್ಳು ಹೋರಾಟ ಮಾಡಲಾಯಿತು. ಬೋನಸ್ ನೀಡಿಕೆಯ ವಿಷಯದಲ್ಲಿ ೧೯೮೨ ರಲ್ಲಿ ಹೋರಾಟಗಳಾದವು. ಎಂ.ಎಸ್.ಕೆ. ಮಿಲ್ ನೌಕರ ಸಭಾ ಸಂಘಟನೆಯ ೧೯೯೧ ರಲ್ಲಿ ಕಾರ್ಮಿಕರಿಗೆ ನೀಡುವ ೮ ತಿಂಗಳ ಸಂಬಳ ನಿಂತುಹೋಗಿತ್ತು. ಲೇಬರ್‌ಕೋರ್ಟ್ ಮತ್ತು ಹೈಕೋರ್ಟ್‌ಗಳಲ್ಲಿ ಎಸ್.ಕೆ. ಕಾಂತ ಮತ್ತು ದಿಲೀಪ್ ಕಾಲಗಿಕರ್ ರವರು ರಿಟ್ ಹಾಕಿದರು ಮತ್ತು ಉಗ್ರಹೋರಾಟ ಮೂಲಕ ಕಾರ್ಮಿಕರಿಗೆ ಕೊಡಬೇಕಾಗಿದ್ದ ಒಂದು ಕೋಟಿ ರೂಪಾಯಿ ದೊರಯುವಂತೆ ಮಾಡಿದರು. ಹಾಗೆಯೇ ೬-೫-೨೦೦೨ರಂದು

ಮುಚ್ಚಲ್ಪಟ್ಟ ಎಂ.ಎಸ್.ಕೆ.ಮಿಲ್ ಪುನರ್ ಪ್ರಾರಂಭಿಸಬೇಕು ಎಂದು ೧೮-೮-೨೦೦೩ ರಂದು ಉಗ್ರ ಹೋರಾಟ ಮಾಡಲಾಯಿತು. ಕೌಂಟಿ (೨೦೦೧:೧೨೦-೧೨೨), ಪಾಟೀಲ (೧೯೯೭:೨೨೫-೨೨೬) ಕೃತಿಕಾರರು ತಮ್ಮ ಕೃತಿಗಳಲ್ಲಿ ತಿಳಿಸಸಿದ್ದಾರೆ.

ಗುಲಬರ್ಗಾ ಜಿಲ್ಲೆಯಲ್ಲಿ ಕೈಗಾರಿಗಳಲ್ಲಿ ಕಾರ್ಮಿಕರನ್ನು ಶೋಷಣೆಗೆ ಒಳಪಟ್ಟಿರುವುದು ಸ್ಪಷ್ಟ. ಈ ಸಂದರ್ಭದಲ್ಲಿ ಕಾರ್ಮಿಕರು ತಮ್ಮ ಉದ್ಯೋಗ ಭದ್ರತೆಗೆ ಕಾಯಿದೆಗಳನ್ನು ಜಾರಿಗೆ ತರುವುದರ ಮುಖಾಂತರ ಕಾರ್ಮಿಕ ಹಿತ ಸಂರಕ್ಷಣೆ ಮಾಡಲು ಸಹಾಯಕವಾಗಿವೆ. ಕಾರ್ಖಾನೆ ಕಾಯಿದೆಯಿಂದ ಕಾರ್ಮಿಕರು ೮ ಗಂಟೆಗಿಂತ ಹೆಚ್ಚು ದುಡಿಯುವಂತಿರಲಿಲ್ಲ. ಮತ್ತು ರಾತ್ರಿ ನಿಷೇಧಿಸಲಾಗಿತ್ತು. ೮ ಗಂಟೆಗಿಂತ ಹೆಚ್ಚು ಸಮಯ ದುಡಿದರೆ ಹೆಚ್ಚವರಿ ವೇತನ ನಿಯಮಗಳು ಜಾರಿಗೊಳಿಸಲಾಯಿತು. ಮುಂತಾದ ಕಾಯ್ದೆಗಳನ್ನು ಜಾರಿಗೆ ತರುವುದರ ಮುಖಾಂತರ ಕಾನೂನಿನ ರಕ್ಷಣೆ ಕಾರ್ಮಿಕರಿಗೆ ದೊರೆತಿದೆ.[೧೭] ಕುಮಾರ್ (೨೦೦೭:೧೪೯) ಕಾಯ್ದೆಯ ಬಗ್ಗೆ ವಿವರಿಸಿದ್ದಾರೆ.

ಇಷ್ಟೆಲ್ಲ ಕಾನೂನಿನ ಸುರಕ್ಷಾ ಒದಗಿಸಿದರು ಮಾಲಿಕರ ದಬ್ಬಾಳಿಕೆ ವಿರುದ್ಧ ನಿರಂತರವಾಗಿ ಹೋರಾಡುತ್ತಾ ಕಾರ್ಮಿಕರಿಗೆ ಅವಶ್ಯಕವಾದ ಮೂಲಭೂತ ಸೌಕರ್ಯಗಳಾದ ವಸತಿ, ನೀರು, ವಿದ್ಯುತ್, ಸಂಬಳ, ಬೋನಸ್, ವೇತನ ಹೆಚ್ಚಳ ಹೀಗೆ ಮುಂತಾದ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಕಾರ್ಮಿಕರ ನಿರಂತರ ಹೋರಾಟವನ್ನು ಮುಂದುವರಿಸಿಕೊಂಡು ಬಂದಿವೆ.

## ಮೌಖಿಕ ಇತಿಹಾಸ

ಪ್ರಸ್ತುತ ಇತಿಹಾಸ ರಚನೆ ಕ್ರಮದಲ್ಲಿ ಮೌಖಿಕ ಚರಿತ್ರೆಯು ಅತ್ಯಂತ ಮಹತ್ವದ ವಿಷಯವನ್ನು ಹೊರಹಾಕಲು ಸಹಾಯಕವಾಗಿದೆ. ಪ್ರಾಚೀನ ಕಾಲದಿಂದಲೂ ಪ್ರಸ್ತುತದವರೆಗೆ ಹೆಚ್ಚಾಗಿ ಲಿಖಿತ ಆಧಾರದ ಮೇಲೆ ಚರಿತ್ರೆ ರಚನೆಗೊಂಡಿರುವುದನ್ನು ಕಂಡು ಬರುತ್ತದೆ. ಆದರೆ ಲಿಖಿತ ಆಧಾರಗಳು ಎಲ್ಲಾ ಸಂದರ್ಭದಲ್ಲಿ ದೊರಕುವುದಿಲ್ಲ. ದೊರಕಿದರು ಸಂಪೂರ್ಣ ವಿಷಯವನ್ನು ಒಳಗೊಂಡಿರುವುದಿಲ್ಲ. ಮತ್ತು ಸ್ಪಷ್ಟವಾದ ರೂಪದಲ್ಲಿ ಇರುವುದಿಲ್ಲ. ಹೀಗೆ ಅನೇಕ ಸಮಸ್ಯೆಗಳು ಎದುರಿಸುವಂತಹ ಸಂದರ್ಭದಲ್ಲಿ ಮೌಖಿಕ ಚರಿತ್ರೆ ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತದೆ. ಲಿಖಿತ ಆಧಾರಗಳು ರಾಜ, ರಾಜ ಪ್ರಭುತ್ವ ಮತ್ತು ಶ್ರೀಮಂತ ವರ್ಗಗಳಿಗೆ ಹೆಚ್ಚಾಗಿ ಸೀಮಿತಗೊಂಡಿವೆ. ಇಂತಹ ಸಂದರ್ಭದಲ್ಲಿ ಜನಸಾಮಾನ್ಯದ ಚರಿತ್ರೆ ತಿಳಿದುಕೊಳ್ಳಲು ಮೌಖಿಕ ಆಧಾರಕ್ಕೆ ಮೊರೆ ಹೋಗಲೇಬೇಕಾಗುತ್ತದೆ. ಗುಲಬರ್ಗಾ ಪ್ರದೇಶಕ್ಕೆ ಸಂಬಂಧ ಪಟ್ಟಂತೆ ಹೆಚ್ಚಾಗಿ ಮೌಖಿಕ ಚರಿತ್ರೆ ರಚನೆಗೊಂಡಿರುವುದು ಕಂಡುಬರದಿದ್ದರು, ಕೆಲವೊಂದು ಕೃತಿಗಳಲ್ಲಿ ಗುಲಬರ್ಗಾ ಪ್ರದೇಶಕ್ಕೆ ಸಂಬಂಧಿಸಿದಂತೆ ಒಂದು ಅಧ್ಯಾಯ ಮತ್ತು ಒಂದು ಲೇಖನಗಳಲ್ಲಿ ಒಳಗೊಂಡಿವೆ.[೧೮] ಹಾಗೂ ಎಂ.ಫಿಲ್. ನಿಬಂಧಗಳು ಮತ್ತು ಪಿಎಚ್.ಡಿ ಪ್ರಬಂಧ ರಚನೆಗೊಂಡಿವೆ. ಅವುಗಳನ್ನು ಅಧ್ಯಯನ ಈ ಭಾಗದಲ್ಲಿ ಅಭ್ಯಸಿಸಲು ಪ್ರಯತ್ನಿಸಲಾಗಿದೆ.

ಗುಲಬರ್ಗಾ ಪ್ರದೇಶಕ್ಕೆ ಸಂಬಂಧಿಸಿದಂತೆ ಪ್ರಮುಖ ಪ್ರಕಟಿತ ಮತ್ತು ಅಪ್ರಕಟಿತ ಆಧಾರಗಳೆಂದರೆ ಸೂರ್ಯನಾಥ ಕಾಮತ್ ಅವರು ಸಂಪಾದಿಸಿದ ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು (೧೯೮೦), ಬಸವರಾಜ ಹಿರೇಮಠರವರ ಗುಲಬರ್ಗಾ ಜಿಲ್ಲೆಯ ಬೈಲು ಪತ್ತಾರರು(೨೦೦೩), ಶ್ರೀನಾಥ ಸುಭಾಷ ಅವರ 'ಅಲೆಮಾರಿ ಸಮುದಾಯಗಳ ಸಾಮಾಜಿಕ ಅಧ್ಯಯನ ಶಹಪೂರ ಪಟ್ಟಣವನ್ನು ಅನುಲಕ್ಷಿಸಿ' (೨೦೦೯), ಪರಮೇಶ್ವರ ಸಿ. ಜಾನೆ ಅವರ 'ಮಂಗಾರವಾಡಿ ಮಹಿಳಾ ಅಧ್ಯಯನ ಗುಲಬರ್ಗಾ ಜಿಲ್ಲೆ ಅನುಲಕ್ಷಿಸಿ' (೨೦೦೭-೦೮), ಸೂರೆ ಸಾವಿತ್ರಿಬಾಯಿ ಅವರ 'ಬೀದರ ಜನಪದ ಹಾಡುಗಳು ಒಂದು ಅಧ್ಯಯನ' (೨೦೦೮), ಚನ್ನಮಲ್ಲಪ್ಪ ಜುಬೇರ್ ಅವರ 'ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ ಅಧ್ಯಯನ' (೨೦೦೧), ಸುಧೀರ್ ಡಿ. ಘುಲೆ ಅವರ 'ಗುಲಬರ್ಗಾ ನಗರದ ಅಂತರ್ಜಾತಿ ವಿವಾಹಿತರು ಒಂದು ಸಮಾಜ ಶಾಸ್ತ್ರೀಯ ಅಧ್ಯಯನ' (೨೦೦೧), ಎಸ್. ಕೊಟ್ರೇಶ್ ಅವರ 'ಹೈದ್ರಾಬಾದ ಕರ್ನಾಟಕದ ವೈಸ್ಯರ ಜಾನಪದ ಅಧ್ಯಯನ' (೨೦೦೮), ಇಸ್ಮಾಯಿಲ್ ಜಬೀರ್ ಬಾವಾಜಿ ಅವರ 'ಮೌಖಿಕ ಪರಂಪರೆ ಮತ್ತು ಚರಿತ್ರೆ' (೨೦೦೯), ಎಸ್. ನಿಂಗಪ್ಪ ಅವರ 'ಕಲಬುರ್ಗಿ ಜಿಲ್ಲೆಯ ಜಾತ್ರೆಗಳು-ಬಂದು ಜಾನಪದೀಯ ಅಧ್ಯಯನ' (೨೦೦೭) ಮುಂತಾದ ಕೃತಿಗಳನ್ನು ಅವಲೋಕಿಸುವುದರ ಮೂಲಕ ಸೈದ್ಧಾಂತಿಕವಾಗಿ ಅಭ್ಯಾಸಿಸಲಾಗಿದೆ.

ಈ ಅಧ್ಯಯನವನ್ನು ಸುಲಭವಾಗಿ ಅರ್ಥೈಸಿಕೊಳ್ಳಲು ಮೂರು ಭಾಗವಾಗಿ ವಿಭಾಗಿಸಿ ಕೊಳ್ಳಲಾಗಿದೆ. ಮೊದಲನೆಯ ಭಾಗದಲ್ಲಿ ನೇರ ಗುಲಬರ್ಗಾಕ್ಕೆ ಸಂಬಂಧ ಪಟ್ಟಂತಹ ವಿಷಯವನ್ನು ಹೊಂದಿದೆ. ಎರಡನೆಯ ಭಾಗದಲ್ಲಿ ಹಲವು ಪ್ರದೇಶಗಳ ಜೊತೆಗೆ ಗಲಬರ್ಗಾ ಪ್ರದೇಶವು ಒಂದಾಗಿ ಅಧ್ಯಾಯನ ಮಾಡಲಾಗಿದೆ. ತೃತೀಯ ಹಂತದಲ್ಲಿ ಗುಲಬರ್ಗಾ ಜಿಲ್ಲೆಯ ಜೊತೆ ಸಾಮ್ಯತೆ ಹೊಂದಿರುವ ಕಲ ಅಧ್ಯಾಯನಗಳ ಅಭ್ಯಾಸಿಸಲಾಗಿದೆ. ಈ ರೀತಿ ವಿಭಾಗಿಸುವುದರ ಮೂಲಕ ಗುಲಬರ್ಾ ಪ್ರದೇಶದ ಮೌಖಿಕ ಚರಿತ್ರೆ ಲೇಖನ ಶಾಸ್ತ್ರವನ್ನು ಅಭ್ಯಾಸಿಸಲಾಗಿದೆ.

ಸುಧೀರ್ ಡಿ. ಘುಲೆ ಅವರು ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ವಿಭಾಗಕ್ಕೆ (೨೦೦೧)ರಲ್ಲಿ ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧ 'ಗುಲಬರ್ಗಾ ನಗರದ ಅಂತರ್ಜಾತಿ ವಿವಾಹಿತರು ಒಂದು ಸಮಾಜಶಾಸ್ತ್ರೀಯ ಅಧ್ಯಯನ' ಅಪ್ರಕಟಿತವಾಗಿದ್ದು ಇದರಲ್ಲಿ ಎಂಟು ಅಧ್ಯಾಯನ ಮಾಡಿಕೊಳ್ಳಲಾಗಿದೆ. ಗುಲಬರ್ಗಾ ಜಿಲ್ಲೆ ಭೌಗೋಳಿಕ, ರಾಜಕೀಯ ಐತಿಹಾಸಿಕ ಹಿನ್ನೆಲೆಯನ್ನು ತಿಳಿಸುವುದರ ಮೂಲಕ ಗುಲಬರ್ಗಾ ಪ್ರದೇಶದ ಸಂಕ್ಷಪ್ತ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ವಿವಾಹ ಸಂಸ್ಥೆಯ ಇತಿಹಾಸ, ಅಂತರ್ಜಾತಿ ವಿವಾಹದಿಂದ ಸಮಾಜದಲ್ಲಿ ಜನರು ನೋಡುವ ದೃಷ್ಟಿಕೋನ, ಮನೆಯವರು ಮತ್ತು ಸಂಬಂಧಿಕರ ಪ್ರತಿಕ್ರಿಯೆ ತಿಳಿಸಿದ್ದಾರೆ. ವಿವಾಹದ ನಂತರ ಎದುರಿಸುತ್ತಿರುವ ಸಮಸ್ಯೆಗಳು ಆರ್ಥಿಕ, ವಸತಿ ಬಗ್ಗೆ ವಿವರಣೆಯನ್ನು

ನೀಡಿದ್ದಾರೆ. ಇವರುಗಳ ಶೈಕ್ಷಣಿಕ ಮಟ್ಟದ ಬಗ್ಗೆ ಕೋಷ್ಟಕದ ಮೂಲಕ ಅಂಕಿ ಅಂಶವನ್ನು ನೀಡಿದ್ದಾರೆ. ಅಂತರ್ಜಾತಿ ವಿವಾಹಕ್ಕೆ ಪ್ರೇರಣೆ ನೀಡಿದ ಅಂಶಗಳ ಬಗ್ಗೆ ತಿಳಿಸಿದ್ದಾರೆ. ವೈವಾಹಿಕ ಸಂಬಂಧ ಮತ್ತು ಮದುವೆಯ ನಂತರ ವಧವಿನ ಜೀನವ ಶೈಲಿಯಲ್ಲಿ ಆದ ಬದಲಾವಣೆಯ ಬಗ್ಗೆ ಉಲ್ಲೇಖಿಸಿದ್ದಾರೆ. ವಿವಾಹಿತರ ಎದುರಿಸುತ್ತಿರುವ ಸಮಸ್ಯೆಗಳಲ್ಲಿ ತಿಳಿಸಿದ್ದಾರೆ. ಹೀಗೆ ಅಂತರ್ಜಾರಿ ವಿವಾಹಿತರ ಸಮಸ್ಯಗಳೂ, ಸವಾಲುಗಳು, ಸಂಬಂಧಗಳು, ಮುಂದಿನ ಜೀವನದ ಯೋಜನೆಯ ಬಗ್ಗೆ ಸಂದರ್ಶಿಸುವುದರ ಮೂಲಕ ಅಂಕಿ ಸಂಖ್ಯೆಯಲ್ಲಿ ಮಾಹಿತಿಯನ್ನು ನೀಡಿದ್ದಾರೆ.

ಚನ್ನಮಲ್ಲಪ ಜುಬೀರ್ ಅವರು ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ೨೦೦೧ರಲ್ಲಿ ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧ 'ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ ಅಧ್ಯಯನ' ಅಪ್ರಕಟಿತವಾಗಿದ್ದು ಆರು ಅಧ್ಯಾಯನಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಭಾರತ, ಕರ್ನಾಟಕ ಮತ್ತು ಗುಲಬರ್ಗಾ ಜಿಲ್ಲೆಗಳಿಗೆ ಸಂಬಂಧಿಸಿದಂತೆ ಬುಡಕಟ್ಟು ಸಮುದಾಯದ ಬಗ್ಗೆ ರಾಜಕೀಯ ಹಿನ್ನೆಲೆಯನ್ನು ನೀಡಿದ್ದರೆ. ಸ್ವತಂತ್ರ ಪೂರ್ವದ ಬುಡಕಟ್ಟು ಸಂಸ್ಥಾನಕ್ಕೆ ಸೇರಿದ ಸುರಪೂರ ಸಂಸ್ಥಾನದ ರಾಜಕೀಯ ಸಾಧನೆ, ಸಾಂಸ್ಕೃತಿಕ ಕೊಡುಗೆಗಳನ್ನು ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ ಬಗ್ಗೆ ತಿಳಿಸಿದ್ದಾರೆ. ಸಂಸ್ಥಾನದ ನಾಯಕರ ವ್ಯಕ್ತಿ ಅಧ್ಯಯನದ ಜೊತೆಗೆ ಹೈದರಾಬಾದ್ ಕರ್ನಾಟಕ ವಿಮೋಚನೆ ಮತ್ತು ಬುಡಕಟ್ಟು ನಾಯಕರ ವ್ಯಕ್ತಿ ಅಧ್ಯಯನ ಕೈಗೊಂಡಿದ್ದಾರೆ. ಸ್ಥಳೀಯ ಸಂಸ್ಥೆಗಳು ಮತ್ತು ಬುಡಕಟ್ಟು ರಾಜಕೀಯ ಪಾಲ್ಗೊಳ್ಳುವಿಕೆ, ರಾಜಕೀಯ ಪ್ರಜ್ಞೆ, ಶೈಕ್ಷಣಿಕ ಮಟ್ಟ, ಕುಟುಂಬದ ವೈವಾಹಿಕ ಸ್ಥಿತಿಗತಿ ಮುಂತಾದ ವಿಷಯದ ಬಗ್ಗೆ ವಿವರಣೆಯನ್ನು ನೀಡಿದ್ದಾರೆ. ಬುಡಕಟ್ಟು ಮತ್ತು ಬುಡಕಟ್ಟೇತರ ರಾಜಕೀಯ ಬಗ್ಗೆ ಪ್ರಸ್ತುತವನ್ನು ಮಾಡಿದ್ದಾರೆ.

ಬಸವರಾಜ ಹಿರೇಮಠ ಅವರು ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ೨೦೦೩ರಲ್ಲಿ ಸಲ್ಲಿಸಿದ ಎಂ.ಫಿಲ್. ಮಹಾಪ್ರಬಂಧ 'ಗುಲಬರ್ಗಾ ಜಿಲ್ಲೆಯ ಬೈಲು ಪತ್ತಾರರು, ಸಮಾಜಶಾಸ್ತ್ರೀಯ ಅಧ್ಯಯನ'. ಇದರಲ್ಲಿ ಏಳು ಅಧ್ಯಾಯನಗಳನ್ನು ವಿಭಜನೆ ಮಾಡಿಕೊಳ್ಳಲಾಗಿದೆ. ಬೈಲು ಪತ್ತಾರರ ಮೂಲ ಮತ್ತು ಪ್ರಸಾರದ ಬಗ್ಗೆ ತಿಳಿಸಿದ್ದಾರೆ. ತಮ್ಮ ಕೌಟುಂಬಿಕ ಜೀವನದಲ್ಲಿ ಅವಿಭಕ್ತಕುಟುಂಬಗಳು ಹೆಚ್ಚಾಗಿದ್ದವು. ಅನಕ್ಷರತೆಯ ಹೆಚ್ಚಾಗಿದ್ದು ನ್ಯಾಯ ಸಂಚಾಯ್ತಿ ನಡೆಸುವುದರ ಮೂಲಕ ತಪ್ಪಿಸ್ಥರಿಗೆ ಸಮುದಾಯವೇ ಶಿಕ್ಷೆಯನ್ನು ನೀಡುತ್ತದೆ. ತಮ್ಮ ಉಪಜೀವನಕ್ಕಾಗಿ ಕೃಷಿಕೂಲಿ, ಬೇವಿನ ಬೀಜ ಆರಿಸುವಿಕೆ, ವೃತ್ತಿಕೂಲಿ, ಕಾಗದ ಆರಿಸುವಿಕೆ ಮುಂತಾದ ಕೆಲಸ ಕಾರ್ಯ ನಿರ್ವಹಿಸುತ್ತಿದ್ದರು. ಹೀಗೆ ಸಮಾಜಿಕ ಮತ್ತು ಆರ್ಥಿಕ ಜೀವನದ ಬಗ್ಗೆ ತಿಳಿಸಿದ್ದಾರೆ. ಸಮಾನ್ಯವಾಗಿ ಸಮುದಾಯದಲ್ಲಿ ಜನನದಿಂದ ಮರಣದವರೆಗೆ

ನಡೆಸುವಂತಹ ಸಂಸ್ಕಾರಗಳು ಹಬ್ಬ ಹರಿದಿನಗಲು, ದೈವತ್ವದಲ್ಲಿ ನಂಬಿಕೆ ಹೊಂದಿದ್ದರು ಎಂದು ಸಮುದಾಯದ ಆಚರಣೆಯನ್ನು ತಿಳಿಸಿದ್ದಾರೆ. ಊರಿನಿಂದ ಊರಿಗೆ ವಲಸೆಹೋಗುವುದರಿಂದ ವಿವಿಧ ಪ್ರದೇಶಗಳ ಭಾಷೆ ತಮ್ಮ ಭಾಷೆಯ ಮೇಲೆ ಆದ ಪ್ರಭಾವವನ್ನು ಪದಗಳು, ಶಬ್ದಗಳು, ವಾಕ್ಯಗಳಲ್ಲಿ, ಉದಾಹರಿಸುವುದರ ಮೂಲಕ ಬೈಲು ಪತ್ತಾರರ ಭಾಷೆ ಮತ್ತು ಸಾಹಿತ್ಯದ ಬಗ್ಗೆ ತಿಳಿಸಿದ್ದಾರೆ. ಹೀಗೆ ಬೈಲು ಪತ್ತಾರರ ಅಲೆಮಾರಿ ಜನಾಂಗದ ಕುರಿತು ಒಂದು ಸಮಗ್ರವಾದ ಚಿತ್ರಣವನ್ನು ನೀಡಿದ್ದಾರೆ.

ಪರಮೇಶ್ವರ ಪಿ. ಜಾನೆ, ಅವರು ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ ೨೦೦೭-೦೮ರಲ್ಲಿ ಸಲ್ಲಿಸಿದ ಎಂ.ಫಿಲ್. ಮಹಾಪ್ರಬಂಧ 'ಮಂಗಾರವಾಡಿ ಮಹಿಳಾ ಅಧ್ಯಯನ' ಏಳು ಅಧ್ಯಾಯಗಳಲ್ಲಿ ವಿಭಜನೆಯನ್ನು ಮಾಡಲಾಗಿದ್ದು, ಮಂಗಾರವಾಡಿಗರ, ಮೂಲ ಮತ್ತು ವಲಸೆಯನ್ನು ತಿಳಿಸಿದ್ದಾರೆ. ಇವರ ಕಳ್ಳತನ ಮಾಡುತ್ತಾರೆ. ಎಂಬ ವದಂತಿ ಇದೆ ಎಂಬ ವಿಷಯವನ್ನು ಪ್ರಸ್ತಾಪಿಸುವುದರ ಮೂಲಕ ಖಚಿತತೆಯನ್ನು ನೀಡಿಲ್ಲ. ಇನ್ನುಳಿದ ಕಸುಬು ಪ್ಲಾಸ್ಟಿಕ್ ಆರಿಸುವಿಕೆ ಆಗಿದೆ. ಈ ಸಮುದಾಯವು ಮಾತೃ ಪ್ರಧಾನ ಕುಟುಂಬವಾಗಿದ್ದು, ವಿವಾಹ, ಉದ್ಯೋಗ ಶಿಕ್ಷಣ, ಹಬ್ಬ ಮತ್ತು ಆಚರಣೆ, ನಂಬಿಕೆ ಮತ್ತು ಸಂಪ್ರದಾಯಗಳ ಬಗ್ಗೆ ತಿಳಿಸಿದ್ದಾರೆ. ಸಮಕಾಲೀನ ಸ್ಥಿತಿಯಲ್ಲಿ ಮಹಿಳೆಯ ಸ್ಥಿತಿಗತಿಯನ್ನು ತಿಳಿಸಿದ್ದಾರೆ. ಆರ್ಥಿಕ ಜೀವನ, ಸಾಮಾಜಿಕ ಜೀವನ, ಧಾರ್ಮಿಕ ಜೀವನ, ಸಾಂಸ್ಕೃತಿಕ ಜೀನವ ಬಗ್ಗೆ ವಿವರವಾಗಿ ತಿಳಿಸಿದ್ದಾರೆ.

ಶ್ರೀನಾಥ ಸುಭಾಷ ಅವರು ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ೨೦೦೯ರಲ್ಲಿ ಸಲ್ಲಿಸಿದ ಎಂ.ಫಿಲ್. ಮಹಾಪ್ರಬಂಧ 'ಅಲೆಮಾರಿ ಸಮುದಾಯಗಳ ಸಾಮಾಜಿಕ ಅಧ್ಯಯನ:ಶಹಾಪುರ ಪಟ್ಟಣವನ್ನು ಅನುಲಕ್ಷಿಸಿ' ಇದರಲ್ಲಿ ಐದು ಅಧ್ಯಾಯಗಳನ್ನು ಹೊಂದಿದ್ದು ಶಹಾಪುರ ಪರಿಸರ ಮತ್ತು ಅಲೆಮಾರಿಗಳ ಜೀವನ ಕುರಿತು ತಿಳಿಸಿದ್ದಾರೆ. ಇದರಲ್ಲಿ ಸಮಾಜಿಕ, ಆರ್ಥಿಕ ಸ್ಥಿತಿಗತಿಯ ಬಗ್ಗೆ ಉಪಜೀವನಕ್ಕಾಗಿ ಕೃಷಿಕೂಲಿ, ಸಣ್ಣವ್ಯಾಪಾರ, ಕುಲಕಸುಬು, ಬಿಕ್ಷಾಟನೆ, ಅವಲಂಬನೆಯನ್ನು ಹೊಂದಿದ್ದರು. ಅಲೆಮಾರಿ ಸಮುದಾಯಗಳ ಬಗ್ಗೆ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಈ ಸಮುದಾಯಗಳ ಧಾರ್ಮಿಕ ಜೀವನ, ಸಾಂಸ್ಕೃತಿಕ, ರಾಜಕೀಯ, ಶಿಕ್ಷಣದ ಸ್ಥಿತಿಗತಿಯ ಬಗ್ಗೆ ಉಲ್ಲೇಖಿಸಿದ್ದಾರೆ. ಅಲೆಮಾರಿ ಸಮುದಾಯವು ಇತರ ಸಮುದಾಯಗಳೊಂದಿಗಿನ ಸಂಬಂಧ ಕುರಿತು ತಿಳಿಸಿದ್ದಾರೆ. ಹಾಗೂ ಸಮುದಾಯಗಳ ಸಮಸ್ಯೆಗಳು ಮತ್ತು ಪರಿಹಾರೋಪಾಯಗಳು ತಿಳಿಸಿದ್ದಾರೆ.

ನಾನಾಗೌಡ ಜಿ. ಮಾಲಿಪಾಟೀಲ್ ಅವರು ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ೧೯೯೪-೯೫ರಲ್ಲಿ ಸಲ್ಲಿಸಿದ ಎಂ.ಫಿಲ್. ಮಹಾಪ್ರಬಂಧ 'ಗುಲಬರ್ಗಾ

ಜಿಲ್ಲೆಯ ಜನಪದ ವೃತ್ತಿಗಾಯಕರು ಒಂದು ಅಧ್ಯಯನ' ಇದರಲ್ಲಿ ಏಳು ಅಧ್ಯಯನಗಳನ್ನು ವಿಭಾಗಿಸಲಾಗಿದ್ದು ಜನಪದ ವೃತ್ತಿ ಗಾಯಕರ ಹುಟ್ಟು ಮತ್ತು ಬೆಳವಣಿಗೆಯ ಬಗ್ಗೆ ತಿಳಿಸಲಾಗಿದೆ. ಗುಲಬರ್ಗಾ ಜಿಲ್ಲೆಯಲ್ಲಿ ಸಿಗುವ ವೃತ್ತಿಗಾಯಕರ ಜೀವನ ವಿಧಾನ ಮತ್ತು ಕಸುಬುಗಳ ಪರಿಚಯಿಸಿದ್ದಾರೆ. ಹಾಡುಗಾರಿಕೆಯಲ್ಲಿ ವೈಶಿಷ್ಟತೆಯನ್ನು ಮತ್ತು ಜನ ಸ್ಪಂಧನ ಸ್ಥಳ ಸಮಯದ ಬಗ್ಗೆ ಉಲ್ಲೇಖಿಸಿದ್ದಾರೆ. ಜನಪದ ಸಾಹಿತ್ಯಕ್ಕೆ, ವೃತ್ತಿಗಾಯಕರ ಕೊಡುಗೆ, ಗಾಯನದ ವಸ್ತು, ಭಾಷೆ, ತಂತ್ರ, ಛಂದಸ್ಸು ಅಲಂಕುರಗಳಿಂದ ಕೂಡಿದ್ದು ರಸವತ್ತಾಗಿ ಹಾಡುಗಳ ಬಗ್ಗೆ ವಿವೇಚಿಸಲಾಗಿದೆ. ಸಮಾಜವು ಅತೀ ವೇಗದಲ್ಲಿ ಬದಲಾವನೆ ಹೊಂದುತ್ತಿರುವ ಆಧುನಿಕ ಸಮಾಜದಲ್ಲಿ ಅವರ ಜೀವನದ ಸ್ಥಿತಿಗತಿಗಳ ಬಗ್ಗೆ ವಿವರಿಸಲಾಗಿದೆ.

ಸುಭಾಷ ಜಿ. ಪಾರ ಅವರು ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ೧೯೯೯ರಲ್ಲಿ ಸಲ್ಲಿಸಿದ ಎಂ.ಫಿಲ್. ಮಹಾಪ್ರಬಂಧ 'ಗುಲಬರ್ಗಾ ಜಿಲ್ಲೆಯ ಬಯಲಾಟಗಳು' ಇದರಲ್ಲಿ ಕರ್ನಾಟಕ ಜನಪದ ರಂಗ ಭೂಮಿ ಜನಪದ ರಂಗದ ಪ್ರಕಾರಗಳು, ಹಸ್ತ ಪ್ರತಿಗಳ ಸಂಗ್ರಹ, ಬಯಲಾಟ ಕವಿಗಳ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ಬಯಲಾಟದಲ್ಲಿಯ ಶೈಲಿ, ಭಾಷೆ, ಮಾತುಗಾರಿಕೆ ವೇಷಭೂಷಣ, ಪಾತ್ರಗಳ ಬಗ್ಗೆ ವಿವರವಾಗಿ ತಿಳಿಸಿದ್ದಾರೆ. ಆಚರಣೆಯಾಗಿ ಬಯಲಾಟದ ಬಗ್ಗೆಯ ವಿಷಯವನ್ನು ಪ್ರಸ್ತಾಪಮಾಡಿದ್ದಾರೆ.

ನಿಂಗಪ್ಪ ಎಸ್. ಅವರು ಗುಲಬರ್ಗಾ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ೨೦೦೭ರಲ್ಲಿ ಸಲ್ಲಿಸಿದ ಎಂ.ಫಿಲ್. ಮಹಾಪ್ರಬಂಧ 'ಕಲಬುರ್ಗಿ ಜಿಲ್ಲೆಯ ಜಾತ್ರೆಗಳು:ಒಂದು ಜಾನಪದೀಯ ಅಧ್ಯಯನ' ಇದರಿಂದ ಗುಲಬರ್ಗಾ ಪ್ರದೇಶದ ಜಾತ್ರೆಗಳ ಮಾಹಿತಿಯನ್ನು ನೀಡಲಾಗಿದೆ. ಶರಣಬಸವೇಶ್ವರ ಜಾತ್ರಾ ಮಹೋತ್ಸವದ ಬಗ್ಗೆ ಹೆಚ್ಚಿನ ವಿಷಯವನ್ನು ತಿಳಿಸಿ ಇನ್ನುಳಿದ ಹಳ್ಳಿಗಳ ಮತ್ತು ನಗರಗಳ ಜಾತ್ರೆಯ ಬಗ್ಗೆ ತಿಳಿಸಿದ್ದಾರೆ. ಜಾತ್ರೆಯಲ್ಲಿ ನಡೆಯುವಂತಹ ಉತ್ಸವಗಳು, ಕಾರ್ಯಕ್ರಮಗಳು, ವ್ಯಾಪಕ ವಹಿವಾಟು ಮಕ್ಕಳ ಸಂಭ್ರಮ ಬಗ್ಗೆ ಪ್ರಸ್ತಾಪವನ್ನು ಮಾಡಿದ್ದಾರೆ. ಜನಸಾಮಾನ್ಯರು ಈ ಜಾತ್ರೆಗಳ ಪ್ರಭಾವವನ್ನು ಕುರಿತು ವಿವರಿಸಿದ್ದಾರೆ.

ಕೊಟ್ರೇಶ್ ಅವರು ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ ೨೦೦೮ರಲ್ಲಿ ಸಲ್ಲಿಸಿದ ಎಂ.ಫಿಲ್. ಮಹಾಪ್ರಬಂಧ 'ಹೈದರಾಬಾದ್ ಕರ್ನಾಟಕದ ವೈಶ್ಯರ ಜಾನಪದ ಅಧ್ಯಯನ' ಇದರಲ್ಲಿ ೮ ಅಧ್ಯಾಯಗಳನ್ನಾಗಿ ವಿಂಗಡಿಸುವುದರ ಮೂಲಕ ವಿವರಣೆಯನ್ನು ನೀಡಲಾಗಿದೆ. ವೈಶ್ಯರ ಪದದ ಅರ್ಥ, ಪ್ರಾಚೀನತೆ, ಪೂರ್ವಕಾಲಿಕ ಇತಿಹಾಸ, ಐತಿಹಾಸಿಕ ಆಧಾರ ರಾಜರು ಈ ಜನಾಂಗಕ್ಕೆ ಸೇರಿದವರ ಬಗ್ಗೆ ವೈಶ್ಯ ಜನಾಂಗದ ಪರಿಚಯ ನೀಡಲಾಗಿದೆ. ಕುಟುಂಬ ಮನೆಗಳ ರಚನೆ, ಒಳಪಂಗಡಗಳೂ ಆಹಾರ ಪದ್ಧತಿ, ಆರ್ಥಿಕತೆ,

ನ್ಯಾಯ ಪದ್ಧತಿ, ಜನಸಾಮಾನ್ಯರ ಉಡುಗೆ ತೊಡುಗೆಗಳು ಹೀಗೆ ವಿವರವಾಗಿ ಸಾಮಾಜಿಕ ಬದುಕು ಬಗ್ಗೆ ವಿವರಿಸಿಲಾಗಿದೆ. ಮುಂದೆ ಆಚರಣೆಗಳಾದ, ಹುಟ್ಟಿನಿಂದ ಮರಣದವರೆಗೆ ಸಂಸ್ಕಾರಗಳ ಬಗ್ಗೆ ಉಲ್ಲೇಖಿಸಲಾಗಿದೆ. ಹಬ್ಬಹರಿದಿನಗಳು, ವ್ರತಗಳು, ನಂಬಿಕೆ, ಆರಾಧನೆಯನ್ನು ವೈಶ್ಯರ ವೈವಿದ್ಯತೆಯನ್ನು ತಿಳಿಸಲಾಗಿದೆ. ವೈಶ್ಯರ ಕುಲೋದ್ಧಾರಕರು, ಕತೆ, ಗಾದೆ. ಪುರಾಣ, ಒಳಗೊಂಡ ಸಾಹಿತ್ಯವನ್ನು ನಮೂದಿಸಿದ್ದಾರೆ. ಅವರ ಜೀವನೋಪಾಯಕ್ಕೆ ಸಂಪ್ರದಾಯಿಕ ಮತ್ತು ಅವಲಂಬಿತ ವೃತ್ತಿ ಮಾಡುತ್ತಿದ್ದರು ಎಂದು ತಿಳಿಸಿದ್ದಾರೆ. ಹೀಗೆ ವೈಶ್ಯರು ಶ್ರೇಷ್ಠರು ಎಂಬ ಭಾವನೆ ಮತ್ತು ಜಿಪುಣ ಧೋರಣೆ ಹೊಂದಿದವರಾಗಿದ್ದರು ಎಂಬುದನ್ನು ತಿಳಿದುಬರುತ್ತದೆ.

ಅಜ್ಜಯ್ಯ ಸಿ. ಅವರು ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ೨೦೦೬ರಲ್ಲಿ ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧ 'ಹೈದರಾಬಾದ್ ಕರ್ನಾಟಕದ ಅಲೆಮಾರಿಗಳ ಸಮಜೋ ಆರ್ಥಿಕ ವ್ಯವಸ್ಥೆ' ಇದರಲ್ಲಿ ಆರು ಅಧ್ಯಯನಗಳನ್ನು ಹೊಂದಿದ್ದು, ಹೈದರಾಬಾದ್ ಕರ್ನಾಟಕ ಪರಿಚಯ ಅಲೆಮಾರಿ ಪದ, ಸಮುದಾಯಗಳ ಮೂಲ ಪರಿಚಯವನ್ನು ಮಾಡಿಕೊಡಲಾಗಿದೆ. ಹೈದರಾಬಾದ್ ಕರ್ನಾಟಕದ ಅಲೆಮಾರಿ ಜನಾಂಗದ ಸಾಮಾಜಿಕ ವ್ಯವಸ್ಥೆಯಲ್ಲಿ ಕುಟುಂಬ ಸದಸ್ಯರು ನಡುವಿನ ಸಂಬಂಧ, ಜೀವನ ಪದ್ಧತಿ, ವಿವಾಹ ಪದ್ಧತಿ, ದೇವತೆ ಆರಾಧನೆ, ನಂಬಿಕೆ, ಆಚರಣೆಗಳು, ಉಪಜಾತಿಗಳು, ಲಿಂಗ ಸಂಬಂಧಿತ ಕೆಲಸಗಳು, ಗುಣ ಮತ್ತು ಅವಗುಣಗಳು ಬಗ್ಗೆ ವಿವರವಾಗಿ ತಿಳಿಸಲಾಗದೆ. ಸಾಮಾನ್ಯವಾಗಿ ಇವರು ವಾರ ಹೊರಗಿನ ದೇವಸ್ಥಾನ, ಮಸಿದೆ ಪಾಳು ಬಿದ್ದ ಕಟ್ಟಡ, ಮುಂತಾದ ಸ್ಥಳಗಳಲ್ಲಿ ವಾಸಿಸುತ್ತಾರೆ ಎಂದು ಹೇಳಿದ್ದಾರೆ. ಜೀವನಕ್ಕಾಗಿ ಬಿಕ್ಷಾಟನೆ, ಚಿಂದಿ ಆರಿಸುವುದು, ನಾಟಿಔಷಧ, ಕಲಾಪ್ರದರ್ಶನ, ವ್ಯಾಪಾರ ಮುಂತಾದ ಕಸುಬು ನಿರ್ವಹಿಸುತ್ತಿದ್ದರು. ನಾರಿನ ಹಗ್ಗ, ಚಾಪೆ, ಜರಡಿ, ಡಬ್ಬಗಳು, ಗುದ್ದಲಿ, ಹಾರೆ, ಸಲಿಕೆ, ಪೊರಕೆ, ವಿಗ್ರಹ ಬುಟ್ಟಿ ಮುಂತಾದ ವಸ್ತುಗಳನ್ನು ತಯಾರಿಸುತ್ತಿದ್ದರು ಎಂದು ಅಲಿಮಾರಿಗಳ ಆರ್ಥಿಕ ರಚನೆ ತಿಳಿಸಿದ್ದಾರೆ. ಸರಕಾರ ಯೋಜನಾಕ್ರಮಗಳು ಮತ್ತು ಅಲೆಮಾರಿಗಳು ಇದರಲ್ಲಿ ಇವರ ಅಭಿವೃದ್ಧಿಯ ಬಗ್ಗೆ, ಮೂಲ ಸೌಕರ್ಯಗಳ ಬಗ್ಗೆ ಜೀವನ ಮಟ್ಟ ಸುಧಾರಿಸುವಲ್ಲಿ ಸರಕಾರ ಕೈಗೊಂಡಿರುವ ಕ್ರಮದ ಬಗ್ಗೆ ಪ್ರಸ್ತಾಪಿಸಲಾಗಿದೆ.

****

ಅಧ್ಯಯನ ಮೂರನೆ ಭಾಗದಲ್ಲಿ ಗುಲಬರ್ಗಾ ಪ್ರದೇಶದ ಮತ್ತು ಅಕ್ಕ ಪಕ್ಕದ ಜಿಲ್ಲೆಗಳ ನಡುವೆ ಸಾಮ್ಯತೆ ಇರುವಂತ ಕೆಲ ಅಧ್ಯಾಯವನ್ನು ಈ ಹಂತದಲ್ಲಿ ಅಭ್ಯಾಸಿಸಲಾಗಿದೆ. ಇದರ ಮೂಲಕ ಗುಲಬರ್ಗಾ ಪ್ರದೇಶದ ಮೌಖಿಕ ಚರಿತ್ರೆ ಲೇಖನಶಾಸ್ತ್ರವನ್ನು ಗಮನಿಸಲಾಗಿದ.

ದೀಪಾ ತಂದೆ ಮಾಣಿಕ್‌ರಾವ್ ಅವರು ಕನ್ನಡ ವಿಶ್ವವಿದ್ಯಾಲಯದ ೨೦೦೮ರಲ್ಲಿ ಸಲ್ಲಿಸಿದ ಎಂ.ಫಿಲ್. ಮಹಾಪ್ರಬಂಧ 'ಮದುವೆ – ಜಾನಪದೀಯ ಅಧ್ಯಯನ' ಇದರಲ್ಲಿ

ಐದು ಅಧ್ಯಾಯಗಳಾಗಿ ವಿಂಗಡಿಸಲಾಗಿದೆ. ಮದುವೆಯ ಉಗಮ, ಸ್ವರೂಪ, ಲಕ್ಷಣ ಮತ್ತು ವಿವಾಹದ ಪ್ರಯೋಜನದ ಬಗ್ಗೆ ತಿಳಿಸಿದ್ದಾರೆ. ಬ್ರಹ್ಮ ವಿವಾಹ, ದೈವ ವಿವಾಹ, ಗಾಂಧರ್ವ ವಿವಾಹ ರಾಕ್ಷಸ ವಿವಾಹ ಮುಂತಾದ ವಿವಾಹ ನಡುವಿನ ವ್ಯತ್ಯಾಸ ವಿವರಿಸಲಾಗಿದೆ. ಸಮಾಜಶಾಸ್ತ್ರದ ಹಿನ್ನೆಲೆಯಲ್ಲಿ ವಿವಾಹಗಳ ಪ್ರಕಾರದ ಬಗ್ಗೆ ಉಲ್ಲೇಖಿಸಿ ಇವುಗಳ ನಡುವಿನ ವ್ಯತ್ಯಾಸದ ಬಗ್ಗೆ ತಿಳಿಸಿದ್ದಾರೆ. ಕನ್ಯೆಯನ್ನು ಹುಡುಕುವ ಸಂಧರ್ಭದಿಂದಲೂ ಮದುವೆ ಆಗುವವರೆಗಿನ ಶಾಸ್ತ್ರಗಳ ಆಚರಣೆಯ ಬಗ್ಗೆ ತಿಳಿಸಿದ್ದಾರೆ.

ಸೂರೆ ಸಾವಿತ್ರಿಬಾಯಿ ಕಾಶಪ್ಪ ಅವರು ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ ೨೦೦೮ರಲ್ಲಿ ಸಲ್ಲಿಸಿದ ಎಂ.ಫಿಲ್. ಮಹಾಪ್ರಬಂಧ 'ಬೀದರ ಜಾನಪದ ಹಾಡುಗಳು:ಒಂದು ಅಧ್ಯಯನ' ಇದರಲ್ಲಿ ನಾಲ್ಕು ಅಧ್ಯಾಯನಗಳನ್ನಾಗಿ ವಿಭಾಗಿಸಿ ಅಭ್ಯಾಸಿಸಲಾಗಿದೆ. ಇವುಗಳಲ್ಲಿ ಬೀದರ ಜನತೆಯ ಜೀವನ ಸಂಪ್ರದಾಯ, ಭಾಷೆಯ ಭಿನ್ನತೆಯ ಜೀವನೋಪಾಯಗಳು ಜನಪದ ಸಂಪತ್ತು ಹೀಗೆ ಬೀದರ ವೈರಷ್ಯವನ್ನು ಗುರುತಿಸಿದ್ದಾರೆ. ಜನಪದ ಹಾಡುಗಳಾದ ಕಟ್ಟುವ ಹಾಡು, ಬೀಸುವ ಹಾಡು, ಜೋಗುಳ ಹಾಡು, ಹರಿತಿ ಹಾಡು, ಭೋತೇರ ಹಾಡು, ಮದುವೆ ಹಾಡು, ಜೋಕುಮಾರ ಹಾಡು, ಗೊಂದಲಿಗರ ಹಾಡು ಮುಂತಾದವುಗಳ ಯಾವ ಸಂದರ್ಭದಲ್ಲಿ ಹಾಡಲಾಗುತ್ತದೆ. ಯಾವ ಜನಾಂಗಗಳು ಯಾವ ಹಾಡುಗಳ ಹಾಡುತ್ತಾರೆ ಎಂಬ ವಿಷಯವನ್ನು ಜನಪದ ಹಾಡುಗಳು ಸಂಸ್ಕೃತಿಕ ಅಧ್ಯಾಯನದಲ್ಲಿ ತಿಳಿಸಿದ್ದಾರೆ.

ಈ ರೀತಿಯಾಗಿ ಏಕೀಕರಣ ಚಳವಳಿ ಮತ್ತು ಏಕೀಕರಣ ನಂತರ ಹೋರಾಟಗಳು ಗುಲಬರ್ಗಾ ಪ್ರದೇಶದಲ್ಲಿ ಕಂಡುಬಂದಿವೆ. ಏಕೀಕರಣಗೊಂಡು ಅನೇಕ ವರ್ಷಗಳು ಗತಿಸಿದರು ಇಂದಿಗೂ ಸಹ ಗಡಿವಿವಾದಗಳು ನಮ್ಮ ಮುಂದೆ ನಡೆಯುತ್ತಿವೆ. ಜನರಲ್ಲಿಯೇ ವಿವಿಧ ವರ್ಗಗಳು ಗುಂಪುಗಳು ನಡುವೆ ಸಂಘಟನೆಗಳು ಬೆಳವಣಿಗೆಗೊಂಡು ಸಮಸ್ಯೆಗಳ ವಿರುದ್ಧ ಹೋರಾಟ ಮಾಡುವುದರ ಮೂಲಕ ತಮ್ಮ ಬೇಡಿಕೆಗಳು ಪೂರೈಸಿಕೊಳ್ಳುತ್ತಿದೆ. ಹಾಗೂ ಸಂವಿಧಾನಾತ್ಮಕ ಕಾನೂನು ಜಾರಿಗೆ ತರುವುದರ ಮೂಲಕ ಸೌಲಭ್ಯ ಕಲ್ಪಿಸಲಾಗುತ್ತಿದೆ. ಈ ಮೇಲಿನ ಅಧ್ಯಯನದಿಂದ ವ್ಯಕ್ತವಾಗಿದೆ.

ಭಾರತದ ಸ್ವಾತಂತ್ರ್ಯ ಪಡೆದ ನಂತರದ ವಸಾಹತ್ತೋತ್ತರ ಕಾಲದಲ್ಲಿ ಏಕೀಕರಣಕ್ಕೆ ಸಂಬಂಧಿಸಿದಂತೆ ಹಾಗೂ ಅಲಕ್ಷಿತ ವರ್ಗಗಳಾದ ದಲಿತರು, ಕೆಳವರ್ಗಗಳ, ರೈತರ, ಕಾರ್ಮಿಕರ ಕುರಿತು ಕೃತಿಗಳು ರಚನೆಗೊಂಡವು. ಅದರಲ್ಲಿ ಸ್ಥೂಲವಾಗಿ ಕರ್ನಾಟಕ ಸಂಬಂಧಿಸಿದರೆ ಕೆಲವು ಹೈದರಾಬಾದ್ ಕರ್ನಾಟಕ ವಿಷಯವನ್ನು ಒಳಗೊಂಡ ಕೃತಿಗಳು ರಚನೆಗೊಂಡವು.

ಗುಲಬರ್ಗಾ ಪ್ರದೇಶವನ್ನು ಆಧಾರವಾಗಿಟ್ಟುಕೊಂಡು ಪ್ರತ್ಯೇಕವಾಗಿ ರಚನೆಯಾದ ಕೃತಿಗಳು ನಮಗೆ ಕಂಡುಬರುವುದಿಲ್ಲ. ೧೯೬೭ರಲ್ಲಿ ಪ್ರಕಟಣೆಯಾದ ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್,

ಶಹಾಪುರ ದರ್ಶನ, ಕಲಬುರ್ಗಿ ಜಿಲ್ಲಾ ದರ್ಶನ, ಮುಂತಾದವು ಸ್ಥಳೀಯವಾಗಿ ಕೆಲವೊಂದು ವಿಷಯಗಳ ಮೇಲೆ ಬೆಳಕು ಚಲ್ಲುತ್ತವೆ. ಅದು ಸಹ ಸಮಗ್ರವಾದ ವಿಷಯವನ್ನು ಒಳಗೊಂಡಿರುವುದಿಲ್ಲ. ಅಂತಹ ಸಂದರ್ಭದಲ್ಲಿ ಬೇರೆ ಕೃತಿಯ ಸಹಾಯ ಪಡೆಯಬೇಕಾಗುತ್ತದೆ.

ಕರ್ನಾಟಕ ಏಕೀಕರಣಕ್ಕೆ ಸಂಬಂಧಿಸಿದಂತೆ ಹೈದರಾಬಾದ್ ಕರ್ನಾಟಕದ ಒಂದು ಭಾಗವಾದ ಗುಲಬರ್ಗಾ ಪ್ರದೇಶವು ಅನೇಕ ಸಮಸ್ಯೆಗಳು ಎದುರಿಸಬೇಕಾಯಿತು. ಏಕೆಂದರೆ ಹಿಂದುಳಿದ ಪ್ರದೇಶ ಎಂಬ ಹಣೆಪಟ್ಟಿಕಟ್ಟಿಕೊಂಡು ಅಭಿವೃದ್ಧಿ ಹೊಂದಿದ ಸಂಸ್ಥಾನವು ಎಂದು ಹೆಸರು ಪಡೆದು ಮೈಸೂರು ಸಂಸ್ಥಾನವು ಜೊತೆಗೆ ಒಂದುಗೂಡಲು ಹೋರಾಟಗಳು, ಸಮಿತಿಗಳು ರಚನೆಗೊಂಡಿರುವುದನ್ನು ಕಂಡುಬರುತ್ತದೆ. ಈ ವಿಷಯವನ್ನು ಎಚ್.ಎಸ್.ಗೋಪಾಲರಾವ್ ಅವರ ಕರ್ನಾಟಕದ ಏಕೀಕರಣ ಇತಿಹಾಸ (೨೦೦೮), ನಾಯಕರ ಸಂದರ್ಶನದ ಮಾಹಿತಿಯನ್ನು ಸಹ ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ. ಆರ್.ಆರ್.ದಿವಾಕರ್ ಅವರ ಕರ್ನಾಟಕದ ಪರಂಪರೆ (೨೦೦೬), ಕರ್ನಾಟಕ ಏಕೀಕರಣ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಿದ್ದಾರೆ. ಮೈಸೂರು ಏಕೀಕರಣ ಮುಂಚೆ ಮತ್ತು ಅನಂತರದ ಸ್ಥಿತಿಗತಿಗಳನ್ನು ತಿಳಿಸುವುದರ ಮೂಲಕ ಮೈಸೂರಿಗೆ ಹೆಚ್ಚು ಆದ್ಯತೆಯನ್ನು ಕೊಟ್ಟಿರುವುದನ್ನು ಕಂಡುಬರುತ್ತದೆ. ಕೋ. ಚನ್ನಬಸಪ್ಪ ಕರ್ನಾಟಕದ ಏಕೀಕರಣವನ್ನು ಬಳ್ಳಾರಿ ಜಿಲ್ಲೆ ಹಿನ್ನೆಲೆ ಒಳಗೊಂಡ ಕೃತಿಯು ರಚನೆಗೊಂಡಿದೆ. ಕೆ.ರಾಮು ಕರ್ನಾಟಕ ಏಕೀಕರಣ (೧೯೯೭), ನರಸಿಂಹಶೆಟ್ಟಿ ಅವರ ಎತ್ತಸಾಗಿದೆ ನಮ್ಮ ನಾಡು (೨೦೦೦), ಪಾಟೀಲ ಕಲ್ಲನಗೌಡ ಅವರ ಕರ್ನಾಟಕ ಏಕೀಕರಣ ಹಾದಿಯಲ್ಲಿ (೧೯೮೬) ಮುಂತಾದ ಏಕೀಕರಣ ಕುರಿತು ಹಿಂದಿನ ವಿಷಯಗಳು ಪ್ರಸ್ತಾಪಿಸುತ್ತವೆ ಹೊರತು ಯಾವುದೇ ಹೊಸ ವಿಷಯಗಳ ಕಡೆಗೆ ಗಮನ ನೀಡಲಿಲ್ಲ. ಶ್ರೀಮತಿ ರತ್ನಶೀಲಾ ಶಿವಲಿಂಗಪ್ಪ ಗುಂಡಿ ಅವರು ಕರ್ನಾಟಕ ಏಕೀಕರಣ ಹೋರಾಟ ಮತ್ತು ಮಹಿಳೆ (೨೦೦೪) ಎಂಬ ಕೃತಿಯಲ್ಲಿ ಮಹಿಳೆಯರ ಪಾತ್ರವನ್ನು ಕುರಿತು ವಿವರಣೆಯನ್ನು ನೀಡಿದ್ದಾರೆ. ಆದರೆ ಇದು ಸಂಪೂರ್ಣವಾಗಿ ಮಹಿಳೆ ಹೋರಾಟದ ಬಗ್ಗೆ ತಿಳಿಸಿಕೊಡಲು ವಿಫಲವಾಗಿದೆ.

ಸಿ.ಆರ್.ಗೋವಿಂದರಾಜು ಅವರ ಕರ್ನಾಟಕ ಏಕೀಕರಣ ಮತ್ತು ನಾಮಕರಣ (೨೦೦೫) ಕೃತಿಯಲ್ಲಿ ಸರಳವಾಗಿ, ನೇರವಾಗಿ ವಿಷಯವನ್ನು ತಿಳಿಸಿದ್ದಾರೆ. ಹೆಚ್ಚಿನ ಕೃತಿಗಳ ಏಕೀಕರಣದವರೆಗೆ ಸೀಮಿತಗೊಂಡಿದ್ದು, ನಂತರ ನಡೆಯುವಂತಹ ಗಡಿಸಮಸ್ಯೆಗಳ ಬಗ್ಗೆ ಯಾವುದೇ ವಿಷಯದ ಪ್ರಸ್ತಾಪವನ್ನು ಕಂಡುಬರುವುದಿಲ್ಲ. ಎನ್. ಚಿನ್ನಸ್ವಾಮಿ ಸೋಸಲೆ ಅವರು ಗಡಿ ಚಳವಳಿ ಕೃತಿಯಲ್ಲಿ ಈ ಬಗೆಯ ಪ್ರಯತ್ನ ಕಂಡುಬರುತ್ತದೆ. ಹೆಚ್ಚಾಗಿ ಏಕೀಕರಣ ಸಂಬಂಧಿಸಿದ ಕೃತಿಗಳ ಬಗ್ಗೆ ನಾಡುನುಡಿ, ಪ್ರಾಚೀನತೆಯಿಂದ ಬಗ್ಗೆ ವೈಭವಿಕರಿಸುವುದನ್ನು ಕಂಡುಬರುತ್ತದೆ. ಕನ್ನಡವನ್ನು ಎಲ್ಲ ಭಾಷೆಗಳಿಕ್ಕಿಂತಲೂ ವೈಶಿಷ್ಟ್ಯತೆಯಿಂದ ಕೂಡಿದೆ ಎಂದು ಸಾಬೀತುಪಡಿಸಲು

ಅರಸರ ಮನೆತನಗಳ ಆಳ್ವಿಕೆ ಬಳಸಿಕೊಂಡರು. ಹೀಗೆ ವೈಭವೀಕರಣಗಳು ಕೃತಿಗಳಲ್ಲಿ ಒಳಗೊಂಡಿರುವುದನ್ನು ಕಂಡುಬರುತ್ತವೆ. ಈ ರೀತಿಯಾಗಿ ಕರ್ನಾಟಕ ಏಕೀಕರಣ ಚಳವಳಿಯಲ್ಲಿ ವಿವಿಧ ನೆಲೆಗಳು ಮತ್ತು ವಿಷಯಗಳನ್ನೊಳೊಂಡ ಅಂಶಗಳನ್ನು ಪ್ರಸ್ತಾಪಿಸಿರುವುದನ್ನು ಕಂಡುಕೊಳ್ಳಬಹುದಾಗಿದೆ.

ದಮನಿತರ ಹೋರಾಟಗಳು ಸರ್ವೇಸಾಮಾನ್ಯವಾಗಿ ಒಂದೇ ತರಹದ ರೂಪವನ್ನು ಹೊಂದಿರುವುದು ಕಂಡುಬರುತ್ತದೆ. ಚಳವಳಿ, ಸತ್ಯಾಗ್ರಹ, ಉಪವಾಸಗಳ ಮೂಲಕ ತಮ್ಮ ಬೇಡಿಕೆಗಳನ್ನು ಪೂರೈಸಿಕೊಳ್ಳುತ್ತಿದ್ದಾರೆ. ಕೆಲವೊಂದು ಸಂದರ್ಭದಲ್ಲಿ ಸಂಪತ್ತು, ಪ್ರಾಣಹಾನಿ, ಸಂಭವಿಸಿರುವುದನ್ನು ಗಮನಿಸಬಹುದು. ಆದರೆ ಇವರ ಸಮಸ್ಯೆಗಳು ಸರ್ವಸಾಮಾನ್ಯವಾಗಿ ಒಂದೇ ರೀತಿ ಇರುವುದರಿಂದ ದಮನಿತರ ಹೋರಾಟಕ್ಕೆ ಸಂಬಂಧಿಸಿದಂತೆ ಸಮಗ್ರ ಕರ್ನಾಟಕ ಒಳಗೊಂಡ ಕೃತಿಗಳು ಹೆಚ್ಚಾಗಿ ಕಂಡುಬರುತ್ತವೆ. ದಲಿತರು ತಮ್ಮ ಹೋರಾಟದ ಶಕ್ತಿಯು ಹೆಚ್ಚಿಸಲು ಘೋಷಣೆ ಮತ್ತು ಹಾಡುಗಳ ಮೂಲಕ ಸ್ಫೂರ್ತಿಯನ್ನು ತುಂಬುತ್ತಿದ್ದರು. ಇದಕ್ಕೆ ದಲಿತ ಸಾಹಿತ್ಯವು ಬಲಿಷ್ಠವಾಗಿ ಬೆಳೆದು ದಲಿತರ ಸಾಮಾಜಿಕ ನೋವು, ನಲಿವುಗಳ ಬಗ್ಗೆ ದಲಿತ ಸಾಹಿತ್ಯದಲ್ಲಿ ಕಂಡುಕೊಳ್ಳಬಹುದು. ವ್ಹಿ.ಜಿ.ಪೂಜಾರ್ ಅವರ ಸಂಶೋಧನ ಲೇಖನಗಳು (೨೦೦೪), ಟಿ.ಎಂ.ಭಾಸ್ಕರ್ ಅವರ ಕಲಬುರ್ಗಿ ಜಿಲ್ಲಾ ದರ್ಶನ (೨೦೦೫) ಕೃತಿಯಲ್ಲಿ ದಲಿತ ಸಾಹಿತ್ಯ ಮತ್ತು ಮಹಿಳೆ ಶೋಷಣೆ, ಮಹಿಳೆ ಕಾವ್ಯಗಳ ಬಗ್ಗೆ ವಿಷಯವನ್ನು ಪ್ರಸ್ತಾಪಿಸಿದ್ದಾರೆ.

ಕಾರ್ಮಿಕ ಮತ್ತು ರೈತರ ಹೋರಾಟದ ಬಗ್ಗೆ ಗುಲಬರ್ಗಾ ಪ್ರದೇಶಕ್ಕೆ ಸಂಬಂಧಿಸಿದಂತೆ ಕೃತಿಗಳ ರಚನೆಯು ಅಲ್ಪ ಪ್ರಮಾಣದಲ್ಲಿ ಕಂಡುಬರುತ್ತವೆ. ಕೆ.ಎಂ.ಕುಮಾರ ಅವರ ಕರ್ನಾಟಕದಲ್ಲಿ ರೈತ ಚಳವಳಿ (೨೦೦೮), ಎಂ.ಜಿ.ನಾಗರಾಜ್ ಅವರ ಕರ್ನಾಟಕ ರೈತ ಚಳವಳಿ–ಸತ್ಯಾಗ್ರಹಗಳು ಸಂಪುಟಗಳು (೨೦೦೬) ಗುಲಬರ್ಗಾ ಪ್ರದೇಶಕ್ಕೆ ಸಂಬಂಧಿಸಿದಂತೆ ಕೆಲವು ಹೋರಾಟಗಳು ಪ್ರಸ್ತಾಪಿಸಿದ್ದಾರೆ ಹೊರತು ಸಮಗ್ರವಾದ ವಿಷಯವನ್ನು ಹೊಂದಿಲ್ಲ.

ಸಮಕಾಲೀನ ಸಂದರ್ಭದಲ್ಲಿ ಸ್ಥಳೀಯ ಚರಿತ್ರೆಯ ಅಧ್ಯಯನ ಕೈಗೊಳ್ಳುತ್ತಿರುವುದನ್ನು ಕಂಡುಬರುತ್ತದೆ. ಇದರಲ್ಲಿ ಜನಸಾಮಾನ್ಯರಿಗೆ ಆಧ್ಯತೆಯನ್ನು ನೀಡಿ ಸಂದರ್ಶನ ಮಾಡುವುದರ ಮೂಲಕ ಮೌಖಿಕ ಆಕಾರ ಉಪಯೋಗಿಸಿ ವಿಷಯ ಸಂಗ್ರಹಣೆ ಮಾಡಲಾಗುತ್ತದೆ. ಇದಕ್ಕೆ ಸಂಬಂಧಿಸಿದಂತೆ ಪಿಎಚ್.ಡಿ ಪ್ರಬಂಧಗಳು ಮತ್ತು ಎಂ.ಫಿಲ್. ನಿಬಂಧಗಳು ಈ ಕ್ರಮಗಳು ಅನುಸರಿಸುತ್ತಿರುವುದು ಗಮನಿಸಬಹುದು. ಇದರಿಂದಾಗಿ ಗುಲಬರ್ಗಾ ಪ್ರದೇಶದಲ್ಲಿ ಅಲಕ್ಷಿಸಿಲ್ಪಟ್ಟ ವಿಷಯಗಳಾದ ದಲಿತರ, ಕಾರ್ಮಿಕರ, ರೈತರ, ಕೆಳವರ್ಗಗಳ, ಮಹಿಳೆಯರ ಬಗ್ಗೆ ಹೆಚ್ಚಿನ ಬೆಳಕನ್ನು ಚೆಲ್ಲುತ್ತವೆ.

ಹೀಗೆ ಏಕೀಕರಣ ನಂತರ ಚರಿತ್ರೆಯ ಸ್ವರೂಪ ಹಲವು ಕವಲುಗಳಾಗಿ ವಿಂಗಡಿಸಿಕೊಂಡು ಜನರಲ್ಲಿಯೇ ವಿವಿಧ ವರ್ಗಗಳ, ಗುಂಪುಗಳ ನಡುವೆ ಸಂಘಟನೆಗಳು ಬೆಳವಣಿಗೆಗೊಂಡು ಅವುಗಳದೇ ಆದ ಸಮಸ್ಯೆಗಳ ವಿರುದ್ಧ ಮತ್ತು ಬೇಡಿಕೆಗಳ ಪೂರೈಕೆಗಾಗಿ ಹೋರಾಟಗಳಲ್ಲಿ ಸದಾ ನಿರತರಾಗಿರುವುದು ಈ ಮೇಲಿನ ಕೃತಿಗಳಲ್ಲಿ ಕಂಡುಬರುತ್ತವೆ. ಇದರಿಂದ ಚರಿತ್ರೆಗೆ ಹೊಸ ಆಯಾಮ ಒದಗಿ ಬಂದು ಹೊಸ ಅರ್ಥ, ಹೊಸ ರೂಪ ಪಡೆದುಕೊಂಡಿತು. ವಿವಿಧ ಸಮಾಜಶಾಸ್ತ್ರಜ್ಞರು ಏಕೀಕರಣ ನಂತರ ಹೊಸ ದೃಷ್ಟಿಕೋನಗಳು ಬೆಳೆಸಿಕೊಂಡು ಚಿಂತಿಸಿ ಬರೆಯುವುದರಲ್ಲಿ ವಿವಿಧ ಜನರ ನಡುವಿನ ಸಮಸ್ಯೆಯನ್ನು ಗಮನಿಸಿದ್ದಾರೆ. ಈ ನಡುವೆ ದಮನಿತರ ಬದುಕು ಬವಣೆಯನ್ನು ಚರಿತ್ರೆಯ ಸಂದರ್ಭದಲ್ಲಿ ಗುರುತಿಸುವಂತಾಗಿದೆ. ಈ ದಮನಿತರ ಚರಿತ್ರೆ ಪ್ರಸ್ತುತ ಯುಗದಲ್ಲಿ ಪ್ರಾಮುಖ್ಯತೆ ಪಡೆದುಕೊಂಡಿದೆ. ಚರಿತ್ರೆಕಾರರು, ವಿದ್ವಾಂಸರು ಮಾಡಿರುವ ಈ ಕೆಲವು ಪ್ರಯತ್ನಗಳು ಬೇರೆ ಆದರ್ಶಗಳ, ಸೈದ್ಧಾಂತಿಕ ಹಿನ್ನೆಲೆಗಳಲ್ಲಿನ ಆಧಾರದಿಂದ ಬಂದರೂ ಅವುಗಳ ಆಶಯಗಳು ಇಲ್ಲಿ ಮುಖ್ಯವಾಗಿವೆ. ಈ ಬಗೆಯ ಆಶಯಗಳು ಚರಿತ್ರೆಯ ಬರವಣಿಗೆಯಲ್ಲಿನ ವಿವಿಧ ಮಾದರಿಗಳನ್ನು ಅರ್ಥಮಾಡಿಕೊಳ್ಳಲು ಸಹಾಯಕವಾಗಿವೆ.

**ಟಿಪ್ಪಣಿಗಳು**

೧. ೧.ಮದರಾಸ್ ಪ್ರಾತ್ಯ, ೨.ಮುಂಬಯಿ ಪ್ರಾಂತ್ಯ, ೩.ಹೈದರಾಬಾದ್ ಸಂಸ್ಥಾನ, ೪.ಕೊಡುಗು ಜಿಲ್ಲೆ ೫.ಕೊಲ್ಲಾಪುರ ಸಂಸ್ಥಾನ, ೬.ಸಾಂಗಲಿ ಸಂಸ್ಥಾನ, ೭.ಮೀರಜ್ ಸಂಸ್ಥಾನ ಮತ್ತು ಲಕ್ಷ್ಮೇಶ್ವರ, ೮.ಕಿರಿ ಮೀರಜ್ ಸಂಸ್ಥಾನ ೯.ಹಿರಿ ಕುರಂದವಾಡ ೧೦.ಕಿರಿ ಕುರಂದವಾಡ ಸಂಸ್ಥಾನ, ೧೧.ಜಮಖಂಡಿ ಸಂಸ್ಥಾನ ೧೨.ಮುಧೋಳ್ ಸಂಸ್ಥಾನ ೧೩.ಜತ್ ಸಂಸ್ಥಾನ, ೧೪.ಅಕ್ಕಲಕೋಟೆ ಸಂಸ್ಥಾನ, ೧೫.ಔಂಧ್ ಸಂಸ್ಥಾನ ೧೬.ರಾಮದುರ್ಗ ಸಂಸ್ಥಾನ, ೧೭.ಸೊಂಡೂರು ಸಂಸ್ಥಾನ, ೧೮.ಸವಣೂರು ಸಂಸ್ಥಾನ, ೧೯.ಬೆಂಗಳೂರು, ಬೆಳಗಾವಿ ಮತ್ತು ಬಳ್ಳಾರಿ ದಂಡು ಪ್ರದೇಶಗಳು ೨೦.ಮೈಸೂರು ಸಂಸ್ಥಾನ.

೨. ಮೈಸೂರು ಸಂಸ್ಥಾನದಲ್ಲಿ ೧೧, ಮುಂಬಯಿ ಪ್ರಾಂತದಲ್ಲೂ ೧೩, ಮದ್ರಾಸ್ ಪ್ರಾಂತದಲ್ಲೂ ೫. ಹೈದರಾಬಾದ್ ಸಂಸ್ಥಾನದಲ್ಲೂ ೪, ಕೊಡಗಿನಲ್ಲಿ ೧, ಮುಂಬಯಿಯಲ್ಲಿ ೨, ಮದ್ರಾಸ್ ಮತ್ತು ಹೈದರಾಬಾದ್‌ನಲ್ಲಿ ತಲಾಒಂದೊಂದು ಸಮ್ಮೇಳನ ನಡೆದಿವೆ.

೩. ಈ ಸಮ್ಮೇಳನದಲ್ಲಿ ಪೂಜ್ಯ ದೊಡ್ಡಪ್ಪ ಅಪ್ಪ, ಸ್ವಾಮಿರಮಾನಂದ ತೀರ್ಥ, ಎಸ್ ನಿಜಲಿಂಗಪ್ಪ, ಜಿನರಾಜಿ ಹೆಗಡೆ, ಜನಾರ್ಧನ್ ರಾವ್ ದೇಸಾಯಿ, ಜಿ.ವಿ.ಹಳ್ಳಿಕೇರಿ, ಜಯದೇವತಾಯಿ, ಭಾಲ್ಕೀಯ ಚನ್ನಬಸವ ಪಟ್ಟಣದೇವರು, ಅಂಬಲಿ ಚನ್ನ ಬಸಪ್ಪ,

ಎಂ.ವಿ.ಪಾಟೀಲ, ಎಸ್.ಆರ್, ಕಂಠಿ, ಅಲವಂಡಿ ಶಿವಮೂರ್ತಿಸ್ವಾಮಿ ಚಂದ್ರಶೇಖರ್ ಪಾಟೀಲ್, ಪ್ರಭುರಾವ್ ಕಂಬ್ಳಿವಾಲೆ, ಸ್ವಾಗತ ಸಮಿತಿಯ ಅಧ್ಯಕ್ಷರಾಗಿದ್ದ ಸರದಾರ್ ಶರಣಗೌಡ ಇನಾಂದಾರ್, ಸಿದ್ದಯ್ಯ ಪುರಾಣಿಕ್, ಕಪಟರಾಳ್ ಕೃಷ್ಣರಾವ್, ವ್ಯಾಕರಣ ತೀರ್ಥಚಂದ್ರಶೇಖರ್ ಶಾಸ್ತ್ರಿ, ಶಿರೂರು ವೀರಭದ್ರಪ್ಪ ಮುಂತಾದ ನಾಯಕರು ಭಾಗವಹಿಸಿದರು.

೪. ರಾಜ್ಯಪುನರ್ ವಿಂಗಡನಾ ಆಯೋಗದ ಅಧ್ಯಕ್ಷರಾಗಿ ನೇಮಕಗೊಂಡು ಸೈಯದ್ ಫಜಲ್ ಅಲಿ ಫೆಡರಲ್ ಕೋರ್ಟಿನ ನ್ಯಾಯ ಮೂರ್ತಿಗಳಾಗಿ ನಿವೃತ್ತಿ ಹೊಂದಿ ಓರಿಸ್ಸಾ ಪ್ರಾಂತದ ರಾಜ್ಯಪಾಲರಾಗಿದ್ದರು. ಆಯೋಗದ ಒಬ್ಬ ಸದಸ್ಯರಾದ ಕೆ.ಎಂ.ಪಣಿಕ್ಕರ್ ಅವರು ಖ್ಯಾತ ಇತಿಹಾಸಕಾರರಾಗಿದ್ದು ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದರು. ಕೆಲವುಕಾಲ ಬಿಕನೇರ್ ಸಂಸ್ಥಾನದ ಮುಖ್ಯ ಮಂತ್ರಿಯೂ ಆಗಿದ್ದ ಪಣಿಕ್ಕರ್, ಈಜಿಪ್ತ ದೇಶದಲ್ಲಿ ಭಾರತದ ರಾಯಭಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಮತ್ತೊಬ್ಬ ಸದಸ್ಯ ಹೃದಯನಾಥ ಕುಂಜ್ರೂ ಅವರು ರಾಜನೀತಿ ನಿಪುಣರೆಂದೂ ಮುತ್ಸದಿಗಳೆಂದೂ, ಉತ್ತಮ ಅರ್ಥಶಾಸ್ತ್ರಜ್ಞರಾಗಿದ್ದು ಶ್ರೇಷ್ಠ ಸಂಸದೀಯ ಪುಟವೆಂದೂ ಹೆಸರು ಪಡೆದಿದ್ದರೂ.

೫. ಬೆಂಗಳೂರಿನಲ್ಲಿ ನವೆಂಬರ್ ೧ರಂದು ರಾಷ್ಟ್ರಪತಿ ಬಾಬುರಾಜೇಂದ್ರ ಪ್ರಸಾದ್ ಅವರು ರಆಜ್ಯ ರಚನೆ ಬಗ್ಗೆ ಅಧಿಕೃತವಾಗಿ ಘೋಷಿಸಿದರು. ಈ ಸಮಾರಂಭದಲ್ಲಿ ಹೊಸ ಮುಖ್ಯ ಮಂತ್ರಿ ಎಸ್.ನಿಜಲಿಂಗಪ್ಪ ಹಾಗೂ ರಾಜ್ಯಪಾಲ ಜಯ ಚಾಮರಾಜೇಂದ್ರ ಒಡೆಯರು ಉಪಸ್ಥಿತರಿದ್ದರು. ಇದರಿಂದ ಛಿದ್ರವಾಗಿದ್ದ ಕನ್ನಡ ಆಡಳಿತ ಘಟಕಗಳು ಹಾಗೂ ಕನ್ನಡಿಗರು, ಒಂದೇ ಆಡಳಿತದ ತೆಕ್ಕೆಗೆ ಬಂದರು.

೬. ಶಹಾಪುರದವರಾದ ನಾಗಪ್ಪ ಶೆಟ್ಟರು ಈ ಏಕೀಕೃತ ರಾಜ್ಯಕ್ಕೆ ಕರ್ನಾಟಕ ಎಂದು ನಾಮಕರಣ ಆಗುವರೆಗೂ ಚಪ್ಪಲಿ, ಟೊಪ್ಪಿಗೆ ಹಾಗೂ ಊರುಗೋಲನ್ನು ತ್ಯಜಿಸಿದ್ದೇ ಅಲ್ಲದೇ ಸಿಹಿ ಪದಾರ್ಥಗಳನ್ನು ತಿನ್ನುವುದು ಸಹ ಬಿಟ್ಟಿದ್ದರೆಂದು ಹೇಳಲಾಗುತ್ತದೆ.

೭. ದಲಿತ ಪ್ರತಿಭಾನ್ವಿತ ವಿದ್ಯಾರ್ಥಿಯೊಬ್ಬನಿಗೆ ಮೇಲ್ಜಾತಿಯ ಉಪನ್ಯಾಸಕ ರ್‍ಯಾಂಕ್ ತಪ್ಪಿಸುವ ಸಲುವಾಗಿ ಪ್ರಾಕ್ಟಿಕಲ್ ಅಂಕ ಕಡಿಮೆ ನೀಡಿದ್ದನು.

೮. ವಿಚಾರ ಸಂಕಿರಣ, ಅಧ್ಯಾಯನ ಶಿಬಿರಗಳು, ಕಾಲ್ನಡಿಗೆಯ ಜಾಥಗಳು, ಕವಿಗೊಷ್ಠಿ ಮುಂತಾದವು ಏರ್ಪಡಿಸಿ ಬೆಂಗಳೂರು, ಮೈಸೂರು, ಮತ್ತು ನೆರೆಯ ರಾಜ್ಯಗಳಿಂದ ಕವಿಗಳನ್ನು, ಹೋರಾಟಗಾರರನ್ನು ಆಹ್ವಾನಿಸಿ ಯುವಕರಲ್ಲಿ ಚಟುವಟಿಕೆಯಿಂದ ತೊಡಗಿಸಿಕೊಳ್ಳುವ ಉದ್ದೇಶವಾಗಿತ್ತು.

೯. ಹೆಚ್ಚಿನ ವಿವರಣೆಯನ್ನು ಪಿ.ಕೆ.ಖಂಡೋಬಾ; ಕರ್ನಾಟಕದ ಲಂಬಾಣಿಗಳು ಅಧ್ಯಯನ, ತೇಜಸಿಂಗ್ ರಾಠೋಡ್ ಮೆಮೋರಿಯಲ್ ಟ್ರಸ್ಟ್ ಗುಲಬರ್ಗಾ (೧೯೯೧), ಸಣ್ಣರಾಮ; ಲಂಬಾಣಿ ಸಂಸ್ಕೃತಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು (೧೯೯೯), ವಿಜಯಲಕ್ಷ್ಮಿ ಆರ್; ಲಂಬಾಣಿಗರ ಸಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು ಎಂ.ಫಿಲ್ ನಿಬಂಧ ಕನ್ನಡವಿಶ್ವವಿದ್ಯಾಲಯ, ಹಂಪಿ.

೧೦. ಅಭಿವೃದ್ಧಿಗೆ ಸಂಬಂಧಿಸಿದ ಪ್ರಾದೇಶಿಕ ಅಸಮಾನತೆ ಹಾಗೂ ಅದರ ಪರಿಹಾರ ಕುರಿತಂತೆ ಅಧ್ಯಯನ ನಡೆಸಲು ಸರಕಾರವೂ ಪಿ.ಎಂ.ನಂಜುಂಡಪ್ಪ ಅವರ ಅಧ್ಯಕ್ಷತೆಯಲ್ಲಿ ಎನ್ನತಾಧಿಕಾರ ಸಮಿತಿಯೊಂದನು ನೇಮಿಸಿತು. ಅದನ್ನು ತನ್ನ ಬೃಹತ್ ವರದಿಯನ್ನು ೨೦೦೨ ರಲ್ಲಿ ಸರಕಾರಕ್ಕೆ ಸಲ್ಲಿಸಿತು. ಅಭಿವೃದ್ಧಿಯ ಮಟ್ಟವನ್ನು ಮಾಪನ ಮಾಡಲು ಸಮಿತಿಯ ಐದು ವಲಯಗಳಿಗೆ ಸಂಬಂಧಿಸಿದ ೩೫ ಸೂಚಿಗಳನ್ನು ಆಧರಿಸಿದ ಸಮಗ್ರ ಸಂಯುಕ್ತ ಅಭಿವೃದ್ಧಿ ಸೂಚ್ಯಂಕವನ್ನು ರೂಪಿಸಿತು. ಅದರ ಆಧಾರದ ಮೇಲೆ ಸಮಿತಿ ಹೈದರಾಬಾದ್ ಕರ್ನಾಟಕ ಪ್ರದೇಶದ ೩೧ ತಾಲೂಕುಗಳ ಪೈಕಿ ೨೯ ಅತ್ಯಂತ ಹಿಂದುಳಿದವೆಂದು ಘೋಷಿಸಿತು.

೧೧. ಕರ್ನಾಟಕ ಸರಕಾರದ ಯೋಜನಾ ಇಲಾಖೆಯು ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ ೧೯೯೯ ಎಂಬ ವರದಿಯನ್ನು ಪ್ರಕಟಿಸಿದೆ ಅದರಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕದ ಆಧಾರದ ಮೇಲೆ ಹೈದರಾಬಾದ್ ಕರ್ನಾಟಕ ಪ್ರದೇಶದ ಜಿಲ್ಲೆಗಳು ರಾಜ್ಯದಲ್ಲಿ ಅತ್ಯಂತ ಹಿಂದುಳಿದಿದ್ದವೆಂದು ದೃಢಪಡಿಸಿದೆ.

೧೨. ೧೯೫೬ ನೇ ಇಸವಿಯಲ್ಲಿ ಮೈಸೂರು ರಾಜ್ಯದ ಉಗಮದೊಂದಿಗೆ ಕರ್ನಾಟಕ ಪ್ರಾಂತ ರೈತ ಸಂಘವು ಹುಟ್ಟಿಕೊಂಡಿತು ಭಾರತೀಯ ಕಮ್ಯುನಿಸ್ಟ್ ಪಕ್ಷದ ಸಂಘ ಸಂಸ್ಥೆಯಾದ 'ಕಿಸಾನ್ ಸಬಾ' ಕರ್ನಾಟಕ ಪ್ರಾಂತ ರೈತ ಸಂಘದ ಮೂಲ ಎಂಬುದು ಗಮನಾರ್ಯವಾಗಿದೆ. ಪ್ರಾಂತ ರೈತ ಸಂಘವು ೧೯೫೦ ರಿಂದ ೧೯೭೦ ದಶಕದವರೆಗೂ ರೈತ ಹೋರಾಟಗಳಲ್ಲಿ ಬಹಳ ಮುಖ್ಯವಾದ ಪಾತ್ರವಹಿಸಿತು.

೧೩. ಕೈಗಾರಿಕೆ ಕಾರ್ಮಿಕರಲ್ಲಿದ್ದಷ್ಟು ಸಂಘಟನೆ ರೈತರಲ್ಲಿ ಇರುಳು ಸಾಧ್ಯವಿಲ್ಲ ರೈತರು ತಮ್ಮೊಳಗೆ ಒಡೆದು ಹೋಗಿದ್ದಾರೆ. ಮಾಧ್ಯಮ ರೈತರು, ಚಿಕ್ಕ ರೈತರು, ಭೂರಹಿತ ಕಾರ್ಮಿಕರು ಆದರಿಮದ ಹೋರಾಟದ ಸ್ವರೂಪಗಳಲ್ಲಿ ವ್ಯತ್ಯಾಸವಿರುತ್ತದೆ.

೧೪. ಖಾಸಗೀ ಕಬ್ಬಿನ ಕಾರ್ಖಾನೆಗಳಲ್ಲಿ ತೂಕದಲ್ಲಿ ಮೋಸ, ಬೆಲೆ ನಿರ್ಧರಿಸುವಲ್ಲಿ ಪ್ರಧಾನವಹಿಸುವ ಕಬ್ಬಿನ ರಸ ಪ್ರಮಾಣ ನಿರ್ದರಿಸುವಲ್ಲಿ ತಾರತಮ್ಯ ಮಾಡಲಾಗುತ್ತಿತ್ತು. ನಿಧಾನವಾಗಿ

ಹಣಪಾವತಿ ಮಾಡಲಾಗುತ್ತಿತ್ತು. ಅರೆಯುವ ಕಾಲ ಮುಗಿತಾ ಬಂದರು ಕಬ್ಬನ್ನು ಕೊಳ್ಳದೆ ಇರುವುದು.

೧೫. ರಾಗಿ, ಜೋಳ, ಮುಸುಕಿನ, ಜೋಳ, ಗೋಧಿ, ಸಜ್ಜೆ, ಕಡಲೆ. ನೆಲಗಡಲೆ, ಸೂರ್ಯಕಾಂತಿ, ಕುಸುಬೆ, ಬೆಳೆಗಳಿಗೆ ಯೋಜನೆ ಜಾರಿಯಲ್ಲಿದೆ.

೧೬. ೧.ಎಂ.ಎಸ್.ಕೆ ಮಿಲ್ ಕಾರ್ಮಿಕರ ಒಕ್ಕೂಟ ಸಂಘಟನೆ, ೨.ಎಂ.ಎಸ್.ಕೆ. ಮಿಲ್ ಟೆಕ್ಸ್‌ಟೈಲ್ಸ್ ಲೇಬರ್ಸ್ ಯೂನಿಯನ್, ೩. ಎಂ.ಎಸ್.ಕೆ.ಮಿಲ್ ನೌಕರ ಸಭಾ, ೪.ಕ್ಯಾಜ್‌ವೆಲ್ ಬರಲಿ ಕಾರ್ಮಿಕರ ಸಂಘ, ಈ ಸಂಘಗಳು ಕಾರ್ಮಿಕರ ಪ್ರಗತಿ ಮತ್ತು ಕಲ್ಯಾಣಕ್ಕಾಗಿ ಮಹತ್ತರ ಪಾತ್ರವಹಿಸಿವೆ.

೧೭. ಕಾರ್ಮಿಕ ನಷ್ಟ ಪರಿಹಾರ ಕಾಯಿದೆ ೧೯೨೩, ಕಾರ್ಮಿಕರ ಸಂಘಗಳ ಕಾಯಿದೆ ೧೯೨೬, ವೇತನ ಪಾವತಿ ಕಾಯಿದೆ ೧೯೩೬, ಕೈಗಾರಿಕಾ ವಿವಾದಗಳ ಕಾಯಿದೆ ೧೯೪೭ ಕನಿಷ್ಟ ಕೂಲಿಕಾಯಿದೆ ೧೯೪೮, ಕಾರ್ಮಿಕರ ರಾಜ್ಯ ವಿಮಾಕಾಯಿದೆ. (ಇ.ಎಸ್.ಪಿ) ೧೯೪೮, ಕಾರ್ಖಾನೆಗಳ ಅಧಿನಿಯಮ ೧೯೪೮, ಪ್ರಾವಿಡೆಂಟ್ ಫಂಡ್ ಕಾಯಿದೆ ೧೯೫೭, ಹೆರಿಗೆ ಭತ್ಯೆಕಾಯಿದೆ. ೧೯೬೧, ಬೋನಸ್ ಕಾಯಿದೆ ೧೯೬೫, ಸಮಾನ ವೇತನ ಕಾಯಿದೆ ೧೯೭೬, ಗ್ರಾಚ್ಯುಟಿ ಪಾವತಿ ಕಾಯಿದೆ ೧೯೭೨, ಬಾಲಕಾರ್ಮಿ ಕಾಯಿದೆ ೧೯೮೬.

೧೮. ಸೂರ್ಯನಾಥ ಕಾಮತ್ ಅವರ ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ಮೂರು ಸಂಪುಟಗಳು. ಈ ಕೃತಿಯು ಮೌಖಿಕ ಇತಿಹಾಸ ಸಂಗ್ರಹ ಕಾರ್ಯವನ್ನು ಹೋಲಿಸಲು ಉತ್ತಮ ಉದಾಹರಣೆಯಾಗಿದೆ. ಕೆಲವರು ತಮ್ಮ ಅನುಭವಗಳನ್ನು ಬರೆದುಕೊಟ್ಟಿದ್ದರೆ ಮತ್ತೆ ಕೆಲವರ ಬಾಯಿಂದ ಕೇಳಿ ಬರೆದುಕೊಳ್ಳಲಾಗಿದೆ. ಇಲ್ಲಿ ಯಾವುದೇ ಒಂದು ವಿಷಯದ ಬಗ್ಗೆ ಚರ್ಚೆಯನ್ನು ಕೇಂದ್ರೀಕರಿಸದಿರುವುದರಿಂದ ತಮಗೆ ಮುಖ್ಯವೆನಿಸಿದ್ದನ್ನು ಹೇಳುತ್ತಾ ಹೋಗಿದ್ದಾರೆ.

# ಅಧ್ಯಾಯ ೫

# ಸಮಾರೋಪ

ಪ್ರಾಚೀನ ಕಾಲದಿಂದಲೂ ಗುಲಬರ್ಗಾ ಪ್ರದೇಶವು ಐತಿಹಾಸಿಕವಾಗಿ ಮಹತ್ವವನ್ನು ಪಡೆದುಕೊಂಡಿದೆ. ಇದರಿಂದಾಗಿ ಗುಲಬರ್ಗಾ ಪ್ರದೇಶವನ್ನು ಒಳಗೊಂಡಂತೆ ಅನೇಕ ಲೇಖಕರು ಕೃತಿಗಳನ್ನು ರಚಿಸಿದ್ದಾರೆ. ಈ ಕೃತಿಗಳನ್ನು ಚರಿತ್ರೆ ರಚನಾಶಾಸ್ತ್ರದ ಹಿನ್ನೆಲೆಯಲ್ಲಿ ನೋಡುವ ಉದ್ದೇಶದಿಂದ ಪ್ರಸ್ತುತ ಅಧ್ಯಯನವನ್ನು ಕೈಗೆತ್ತಿಕೊಳ್ಳುವುದರ ಮೂಲಕ ಸಂಶೋಧಕನ ಪ್ರಯತ್ನ ಸಾಗಿದೆ. ಇತ್ತೀಚಿನ ದಿನಗಳಲ್ಲಿ ಸ್ಥಳೀಯ ಚರಿತ್ರೆಯ ಅಧ್ಯಯನ ಹೆಚ್ಚು ಮಹತ್ವ ಪಡೆಯುತ್ತಿದೆ. ಇದನ್ನು ಅಧ್ಯಯನ ನಡೆಸುವಲ್ಲಿ ಲಿಖಿತ ಮತ್ತು ಮೌಖಿಕ ಆಕರಗಳು ಸಹಕಾರಿಯಾಗಿವೆ. ಪ್ರತಿಯೊಂದು ಪ್ರದೇಶಕ್ಕೂ ತನ್ನದೇ ಆದ ಹಿನ್ನೆಲೆ ಮತ್ತು ಚರಿತ್ರೆ ಇದ್ದೇ ಇರುತ್ತದೆ. ಈ ಹಿನ್ನೆಲೆಯಲ್ಲಿ ಗುಲಬರ್ಗಾ ಪ್ರದೇಶದ ಚರಿತ್ರೆ ನಿರ್ಮಾಣಗೊಂಡ ಬಗೆಯನ್ನು ಕುರಿತು ವಿವರಿಸಲಾಗಿದೆ. ಚರಿತ್ರೆ ಬರವಣಿಗೆ ಮತ್ತು ವಿಶ್ಲೇಷಣೆಗೆ ಸಂಬಂಧಪಟ್ಟಂತೆ ಅನೇಕ ಪಂಥಗಳು ಹುಟ್ಟಿಕೊಂಡವು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ವಸಾಹತುಶಾಹಿ, ರಾಷ್ಟ್ರೀಯವಾದಿ, ಮಾರ್ಕ್ಸ್‌ವಾದಿ, ಸಬಾಲ್ಟರ್ನ ಪಂಥಗಳು. ಕರ್ನಾಟಕ ಚರಿತ್ರೆಯು ಈ ಪಂಥಗಳಿಂದ ನೇರವಾಗಿ ಪ್ರಭಾವಿತಗೊಂಡಿದೆ. ಅದರಲ್ಲೂ ಓರಿಯಂಟ್‌ಲಿಸ್ಟ್ ಮತ್ತು ರಾಷ್ಟ್ರೀಯವಾದಿ ಚಿಂತನೆಗಳ ಹಿನ್ನೆಲೆಯಿಂದ ರಚನೆಗೊಂಡ ಕೃತಿಗಳೇ ಹೆಚ್ಚು.

ಸಾಮ್ರಾಜ್ಯಶಾಹಿ ಹಾಗೂ ರಾಷ್ಟ್ರೀಯವಾದಿ ಚರಿತ್ರೆಕಾರರು ಅರಸು ಕೇಂದ್ರಿತ ಹಾಗೂ ಧರ್ಮಕೇಂದ್ರಿತ ವಿಚಾರಗಳಿಗೆ ಮನ್ನಣೆ ನೀಡಿ ಮೇಲ್ವರ್ಗವನ್ನು ವೈಭವೀಕರಿಸುವ ಪ್ರಯತ್ನ ನಡೆಸಿದರು. ಸಾಮಾನ್ಯವಾಗಿ ಚರಿತ್ರೆಯನ್ನು ಅರಸು ಮನೆತನಗಳಿಗಷ್ಟೇ ಸೀಮಿತಗೊಳಿಸಿ ಅದೊಂದು

ನಡೆದು ಹೋದ ಘಟನೆ ಎನ್ನುವ ತೀರ್ಮಾನವನ್ನು ಕೊಡುವ ಅಧ್ಯಯನಗಳ ಸಂಖ್ಯೆಯೇ ಹೆಚ್ಚು, ರಾಜನೆಂಬ ವ್ಯಕ್ತಿಕೇಂದ್ರಿತ ಹಾಗೂ ಅವನ ಯುದ್ಧ, ದಿಗ್ವಿಜಯ, ವಂಶಾವಳಿ ಮುಂತಾದ ಅಂಶಗಳು ಪ್ರಧಾನವಾಗಿರುವ ಚಿತ್ರಣವೇ ಕಂಡುಬರುತ್ತದೆ. ಹೆಚ್ಚಿನ ಚರಿತ್ರೆ ಕೃತಿಗಳಲ್ಲಿ ಶೇಕಡಾ ಎಪ್ಪತ್ತೈದರಷ್ಟು ಭಾಗ ರಾಜಕೀಯ ಚರಿತ್ರೆಯಿದ್ದು, ಇನ್ನುಳಿದ ಭಾಗ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಮುಂತಾದ ವಿಚಾರಗಳು ಅರಸಕೇಂದ್ರಿತವಾಗಿದಯೇ ಹೊರತು ಪ್ರಜಾ ಕೇಂದ್ರಿತವಾಗಿರುವುದನ್ನು ಕಾಣಲು ಕಷ್ಟಸಾಧ್ಯ.

ಗುಲಬರ್ಗಾ ಪ್ರದೇಶದ ಚರಿತ್ರೆಗೆ ಸಂಬಂಧಪಟ್ಟ ವಿವಿಧ ಕೃತಿಗಳನ್ನು ಅವಲೋಕಿಸುವುದರ ಮೂಲಕ ಅಧ್ಯಯನ ಮಾಡಲಾಗಿದೆ. ಈ ಪ್ರದೇಶವು ಪ್ರಾಗೈತಿಹಾಸಿಕ ಕಾಲದ ಮಾನವ ನೆಲೆಯಾಗಿತ್ತು ಎಂಬುದನ್ನು ಪತ್ತೆ ಹಚ್ಚಲಾಗಿದ್ದು, ಚರಿತ್ರೆಕಾರರು ತಮ್ಮ ಕೃತಿಗಳಲ್ಲಿ ದಾಖಲಿಸಿದ್ದಾರೆ. ಕೇಂದ್ರ ಸರಕಾರ ಪುರಾತತ್ವ ಇಲಾಖೆಯು ನಡೆಸಿದ ಉತ್ಖನನಗಳಿಂದ ಪ್ರತಿಯೊಂದು ಹಳ್ಳಿಯಲ್ಲೂ ಇರುವಂತಹ ಶಿಲಾಯುಗದ ಪ್ರಕಾರಗಳನ್ನು ಸಂಶೋಧನೆಗೆ ಒಳಪಡಿಸಲಾಗಿದೆ. ರಾಬರ್ಟ್ ಬ್ರೂಸ್‌ಫೂಟ್, ಅ.ಸುಂದರ, ಎಂ.ಶೇಷಾದ್ರಿ, ಕೆ.ಪದ್ದಯ್ಯ, ಪಿ.ಬಿ.ದೇಸಾಯಿ, ಎಂ.ಎಸ್. ನಾಗರಾಜ ರಾವ್, ಕಪಟರಾಳ ಕೃಷ್ಣರಾಯರು ಮುಂತಾದವರು ಶಿಲಾಯುಗ ಸಂಸ್ಕೃತಿಯ ಮಾನವ ನೆಲೆಗಳನ್ನು ಪತ್ತೆ ಹಚ್ಚಿದ್ದಾರೆ. ಕೆ.ಬಿ.ಶಿವತಾರಕ್ ಅವರ ಕರ್ನಾಟಕ ಪುರಾತತ್ವ ನೆಲೆಗಳು ಎಂಬ ಕೃತಿಯಲ್ಲಿ ಪುರಾತತ್ವ ನೆಲೆಗಳ ಬಗ್ಗೆ ಮಾಹಿತಿಯನ್ನು ನೀಡಿದ್ದಾರೆ. ಶಿಲಾಯುಗದ ಮಾನವನು ಬಳಸುತ್ತಿದ್ದ ಉಪಕರಣಗಳಲ್ಲಿ ಮಾಡಿಕೊಂಡ ಬದಲಾವಣೆಗಳು ಮತ್ತು ಜೀವನ ಶೈಲಿಯಲ್ಲಿ ಆದ ಬದಲಾವಣೆ ಸಂಸ್ಕೃತಿಯ ವಿಸ್ತರಣೆಯನ್ನು ತಿಳಿಯಲು ಸಹಾಯಕವಾಗಿದೆ. ಈ ಶಿಲಾಯುಗ ಸಂಸ್ಕೃತಿಯನ್ನು ಹಳೆಯ ಶಿಲಾಯುಗ, ಮಧ್ಯ ಶಿಲಾಯುಗ, ನೂತನ ಶಿಲಾಯುಗ, ಸೂಕ್ಷ್ಮ ಶಿಲಾಯುಗ ಹಾಗೂ ಕಬ್ಬಿಣ ಶಿಲಾಯುಗ ಎಂದು ವಿಂಗಡಿಸಲಾಗಿದೆ. ಈ ಹಂತದ ಕಾಲಮಾನವನ್ನು ನಿರ್ಧರಿಸುವುದು ಕಷ್ಟವಾಗಿದ್ದು, ಸ್ಪಷ್ಟತೆಯನ್ನು ಕಾಣಲು ಬಲು ಕಠಿಣವಾಗಿದೆ.

ಗುಲಬರ್ಗಾ ಪ್ರದೇಶವು ಪ್ರಾಚೀನ ಕಾಲದಿಂದಲೂ ಹಲವು ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿರುವುದನ್ನು ಹಲವು ಚಾರಿತ್ರಿಕ ಕೃತಿಗಳಲ್ಲಿ ದಾಖಲಾಗಿದೆ. ಈ ಭಾಗದಲ್ಲಿ ದೊರೆತ ಶಾಸನಗಳು, ದೇವಾಲಯಗಳು, ಕೋಟೆಗಳು, ನಾಣ್ಯಗಳು, ಹಸ್ತಪ್ರತಿಗಳು, ವೀರಗಲ್ಲು ಮತ್ತು ಮಹಾಸತಿಗಲ್ಲು ಮುಂತಾದ ಐತಿಹಾಸಿಕ ಆಧಾರಗಳು ಚರಿತ್ರೆಕಾರನಿಗೆ ಅಧ್ಯಯನ ಮಾಡಲು ಸಹಾಯಕವಾಗಿವೆ. ಭಾರತದ ಇತಿಹಾಸ ಆರಂಭ ಕಾಲ ಮೌರ್ಯರು ಮತ್ತು ಶಾತವಾಹನ ಆಳ್ವಿಕೆಯಿಂದ ಪ್ರಧಾನ ಭೂಮಿಕೆಯನ್ನು ಕಂಡಿದ್ದು, ಗುಲಬರ್ಗಾ ಪ್ರದೇಶಗಳಲ್ಲಿಯೂ ಇವರು ಆಳ್ವಿಕೆ ನಡೆಸಿದ್ದರು ಎಂಬುದಕ್ಕೆ ಕುರುಹುಗಳು ಸಿಕ್ಕಿವೆ. ೧೯೯೦ರ ದರ್ಶಕವು ಗುಲಬರ್ಗಾ ಜಿಲ್ಲೆಯ ಇತಿಹಾಸ ಸಂಶೋಧನೆಯಲ್ಲಿಯೇ ಮಹತ್ವದ ಕಾಲಘಟ್ಟ, ಶಾತವಾಹನ ಅರಸರ

ಬೌದ್ಧಸ್ತೂಪ. ಶಿಲ್ಪ ಹಾಗೂ ಶಾಸನಗಳಿಗೆ ಪ್ರಸಿದ್ಧವಾಗಿರುವ ಸನ್ನತಿಯಲ್ಲಿ ಸಂಶೋಧನೆಯಲ್ಲಿ ನಡೆದವು. ಅಲ್ಲದೆ ಅಶೋಕನ ಲಘುಶಾಸನಗಳು, ನಾಣ್ಯಗಳು ಕಂಡುಬಂದಿರುವುದು ಈ ಪ್ರದೇಶದಲ್ಲಿಯೇ ಸುವರ್ಣ ಗಿರಿ ಬಗ್ಗೆ ವಿದ್ವಾಂಸರಲ್ಲಿ ಅನೇಕ ಭಿನ್ನಾಭಿಪ್ರಾಯಗಳು ಹಾಗೂ ಚರ್ಚೆಗಳಾಗಿರುವುದನ್ನು ಕಾಣುತ್ತೇವೆ. ಹೆಚ್.ಕೃಷ್ಣಶಾಸ್ತ್ರೀ ಮತ್ತು ಹುಲ್ಷ್ ಅವರು ಸನ್ನಿತಿಯನ್ನೇ ಸುವರ್ಣಗಿರಿ ಎಂದು ಕರೆದಿದ್ದಾರೆ. ಎಂ.ಬಿ.ಪಾಟೀಲ ಅವರ ಗುಲಬರ್ಗಾ ಜಿಲ್ಲೆ ಗ್ಯಾಸೆಟಿಯರ್, ತೆಲಗಾವಿ ಅವರ ಮೌರ್ಯರು ಮತ್ತು ಶಾತವಾಹನರು ಎಂಬ ಕೃತಿಯಲ್ಲಿ ತಿಳಿಸಿದ್ದಾರೆ. ಗುಲಬರ್ಗಾ ಪ್ರದೇಶದಲ್ಲಿ ಇವರ ಆಳ್ವಿಕೆಯ ಸ್ಥಳಗಳು ಕಂಡುಬಂದಿದ್ದು, 'ಸನ್ನತಿ'ಯು ಮೌರ್ಯರ ಆಳ್ವಿಕೆ ಕಾಲದ ಪ್ರಮುಖ ಆಡಳಿತ ಕೇಂದ್ರ ಮತ್ತು ಪಟ್ಟಣವಾಗಿತ್ತೆಂದು ಕಂಡುಬರುತ್ತದೆ. ನಂತರ ಗುಲಬರ್ಗಾ ಪ್ರದೇಶದ ಬಾದಾಮಿ ಚಾಲುಕ್ಯರ ಆಳ್ವಿಕೆ ಒಳಪಟ್ಟಿದ್ದು ತಿಳಿದುಬಂದಿದೆ. ರಾಷ್ಟ್ರಕೂಟರು ಗುಲಬರ್ಗಾದ ಮಾನ್ಯಖೇಟವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆಯನ್ನು ನಡೆಸಿದರು. ಅನೇಕ ಸಾಮಂತ ಅರಸರನ್ನು ಹೊಂದಿದ್ದು ವಿಶಾಲವಾದ ಸಾಮ್ರಾಜ್ಯ ವಿಸ್ತರಿಸಿತು. ಇವರ ಕಲೆ ಮತ್ತು ವಾಸ್ತುಶಿಲ್ಪ ಹೆಚ್ಚಾಗಿ ಕಂಡುಬರುವುದಿಲ್ಲ. ಈ ಮೇಲಿನ ಅಂಶಗಳು ಆರ್.ಆರ್.ದಿವಾಕರ, ಸೂರ್ಯನಾಥ ಕಾಮತ್, ಎ.ಎಸ್. ನಂಜುಂಡಸ್ವಾಮಿ ಮುಂತಾದ ಲೇಖಕರ ಕೃತಿಗಳಲ್ಲಿ ರಚನೆಗೊಂಡಿವೆ. ನಂತರ ಕಲ್ಯಾಣ ಚಾಲುಕ್ಯರು, ಕಲ್ಯಾಣದ ಕಲಚೂರಿಗಳು, ದೇವಗಿರಿಯ ಸೇವುಣರು ಆಳ್ವಿಕೆ ಮಾಡುವುದರ ಮೂಲಕ ಗುಲಬರ್ಗಾದ ಪ್ರದೇಶದ ಚರಿತ್ರೆಯಲ್ಲಿ ಸ್ಥಾನ ಪಡೆದಿವೆ.

ಇವರ ಆಳ್ವಿಕೆಯನ್ನು ಸಮಗ್ರ ಚಿತ್ರಣ ನೀಡುವಂತಹ ಕೃತಿ ರಚನೆಯಾಗಿಲ್ಲ ಎನ್ನಬಹುದು. ಎ.ಎಸ್.ನಂಜುಂಡಸ್ವಾಮಿ, ಅವರ ರಾಷ್ಟ್ರಕೂಟರ ಇತಿಹಾಸ, ಷೇಕ್ ಅಲಿ ಅವರ ಕರ್ನಾಟಕ ಚರಿತ್ರೆ ಸಂಪುಟ, ಸೂರ್ಯನಾಥ ಕಾಮತ್ ಕರ್ನಾಟಕ ಸಂಕ್ಷಿಪ್ತ ಇತಿಹಾಸ ಮುಂತಾದ ಹಲವು ಕೃತಿಗಳು ರಾಷ್ಟ್ರಕೂಟ ಆಳ್ವಿಕೆಗೆ ಒಳಗೊಂಡಂತೆ ಗುಲಬರ್ಗಾ ಪ್ರದೇಶಗಳಲ್ಲಿ ಆಡಳಿತ ವಿಸ್ತರಿಸಿದ ಕಲ್ಯಾಣ ಚಾಲುಕ್ಯರು, ಕಲಚೂರಿಗಳು, ದೇವಗಿರಿ ಸೇವುಣರು ಕುರಿತು ವಿವರಣೆಯನ್ನು ನೀಡುತ್ತವೆ. ಆದರೆ ಈ ಕೃತಿಗಳು ರಾಜಕೀಯ ಕೇಂದ್ರಿತ ವಿಚಾರಗಳಿಗೆ ಹೆಚ್ಚಿನ ಮನ್ನಣೆಯನ್ನು ನೀಡಲಾಗಿದೆ.

ಚರಿತ್ರೆ ಅಧ್ಯಯನದ ಎರಡನೆಯ ಹಂತವಾಗಿ ಕಂಡುಬಂದಿರುವ ಮಧ್ಯಕಾಲೀನ ಚರಿತ್ರೆಯು ವಿಜಯನಗರ ಆಳ್ವಿಕೆಯೊಂದಿಗೆ ಪ್ರಾರಂಭವಾಗುತ್ತದೆ. ನಂತರ ಇದೇ ಕಾಲಘಟ್ಟದಲ್ಲಿ ಬಿಜಾಪುರ ಸುಲ್ತಾನರು, ಆದಿಲ್‌ಶಾಹಿಗಳು, ಮೊಗಲರು, ಸುರಪುರದ ನಾಯಕರು ಆಳ್ವಿಕೆ ನಡೆಸಿರುವುದನ್ನು ಕಂಡುಬರುತ್ತದೆ. ಗುಲಬರ್ಗಾವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಬಹಮನಿ ಸುಲ್ತಾನರು ಅಧಿಕಾರಕ್ಕೆ ಬಂದರು. ಇದರಿಂದ ಇಲ್ಲಿ ಮುಸ್ಲಿಮ್ ಪ್ರಭಾವ ಹೆಚ್ಚಾಗಿದ್ದು, ಕೋಟೆ ಮಸೀದೆ,

ದರ್ಗಾ, ಮದರಾಸ್, ಗುಂಬಜ್ ಮುಂತಾದ ಕಟ್ಟಡಗಳು ರಚನೆಗೊಂಡವು. ಉರ್ದು ಮತ್ತು ಅರಬ್ಬಿ ಭಾಷೆಗಳ ಪ್ರಭಾವ ಈ ಪ್ರದೇಶದ ಜನರ ಮೇಲೆ ಬೀರಿತು. ನಿರಂತರ ವಿಜಯನಗರ ಸಾಮ್ರಾಜ್ಯದೊಂದಿಗೆ ದೋ-ಅಬ್ ಪ್ರದೇಶಕ್ಕಾಗಿ ಹೋರಾಟವನ್ನು ನಡೆದವು. ನಂತರ ಶಾಹಿ ಮನೆತನವಾಗಿ ಒಡೆದು ಬಿಜಾಪುರ ಆದಿಲ್‌ಶಾಹಿ ಆಳ್ವಿಕೆ ವ್ಯಾಪ್ತಿಗೆ ಒಳಪಟ್ಟಿತ್ತು. ಇದನ್ನು ಒಳಗೊಂಡಂತೆ ಷೇಕ್ ಅಲಿ ಅವರ ಕರ್ನಾಟಕ ಚರಿತ್ರೆ ಸಂಪುಟಗಳು, ಆರ್.ಆರ್. ದಿವಾಕರ ಕರ್ನಾಟಕದ ಪರಂಪರೆ, ಬಾ.ರ.ಗೋಪಾಲರಾವ್ ಅವರ ಕರ್ನಾಟಕ ಇತಿಹಾಸ, ಆಲೂರು ವೆಂಕಟರಾಯರು ಕರ್ನಾಟಕ ಗತವೈಭವ, ಎ.ವಿ. ನರಸಿಂಹಮೂರ್ತಿ ಅವರ ದೆಹಲಿ ಸುಲ್ತಾನರ ಅಧಿಪತ್ಯ, ಧ್ರುವನಾರಾಯಣ ಅವರ ಸುರಪುರ ಸಂಸ್ಥಾನ ಮುಂತಾದ ಕೃತಿಗಳು ಅಧ್ಯಯನಕ್ಕೆ ನೇರವಾಗಿವೆ. ಈ ಕೃತಿಗಳೆಲ್ಲ ಹೆಚ್ಚಾಗಿ ರಾಜಕೀಯ ಅಂಶಕ್ಕೆ ಸಂಬಂಧಪಟ್ಟಿವೆ. ಸುರಪುರ ಸಂಸ್ಥಾನವು ಮೊಗಲರ ದಕ್ಷಿಣ ಭಾರತದ ನೀತಿಗೆ ನಿರಂತರ ತಡೆಯನ್ನು ಒಡ್ಡಲಾಗುತ್ತಿತ್ತು. ಇದರಿಂದ ಸುರಪರ ಸಂಸ್ಥಾನದ ನಾಯಕರು, ಧೀರ, ಶೂರರಿಂದ ಕೂಡಿತ್ತು ಎಂಬುದಕ್ಕೆ ಔರಂಗಜೇಬನ 'ಹಸ್ತಮುದ್ರೆ'ಯಿಂದೆ ತಿಳಿದುಬಂದಿದೆ.

ವಿಜಯನಗರ ಸಾಮ್ರಾಜ್ಯದ ಚರಿತ್ರೆಯನ್ನು ಬ್ರಿಟಿಷರ ವಿಭಜಿಸಿ ಆಳುವ ನೀತಿಗೆ ಹಾಗೂ ಕೋಮುವಾದಿ ಬೆಳವಣಿಗೆಗಳಿಗೆ ಬಳಕೆಯಾಯಿತು. ರಾಷ್ಟ್ರೀಯವಾದಿಗಳ ಸುವರ್ಣ ಯುಗದ ಪ್ರತಿಪಾದನೆಗೆ ಹಾಗೂ ರಾಷ್ಟ್ರೀಯ ಪ್ರಜ್ಞೆಯನ್ನು ಮುಸ್ಲಿಂ ವಿರೋಧಿ ನೆಲೆಯಿಂದ ಮೂಡಿಸುವ ಪ್ರಯತ್ನಕ್ಕೆ ವಿಜಯನಗರ ಚರಿತ್ರೆ ನೇರವಾಗಿ ಬಳಕೆಯಾಯಿತು. ವಿಜಯನಗರವನ್ನು ಹಿಂದೂ ಸಾಮ್ರಾಜ್ಯ, ವೈಭವಯುತ ಸಾಮ್ರಾಜ್ಯ ಮುಂತಾಗಿ ಕೊಂಡಾಡಿ ಮುಸಲ್ಮಾನರ ದಾಳಿಯನ್ನು ಎದುರಿಸಲು ಸ್ಥಾಪನೆಗೊಂಡ ಸಾಮ್ರಾಜ್ಯ ಎನ್ನುವ ಮತಿಯ ಒಲವು ಕಂಡುಬರುತ್ತದೆ.

ಅಧ್ಯಾಯ ಮೂರರಲ್ಲಿ ನಿಜಾಮನ ಕಾಲದ ಚರಿತ್ರೆಗೆ ಸಂಬಂಧಿಸಿದಂತೆ ಚರಿತ್ರೆ ಲೇಖನಶಾಸ್ತ್ರವು ಪೂರ್ವಗ್ರಹ ಪೀಡಿತದಿಂದ ಕೂಡಿದ್ದು, ಕೋಮುವಾದದಿಂದ ಕೂಡಿದ್ದು, ಅನೇಕ ಕೃತಿಗಳು ಮುಸ್ಲಿಮ್ ವಿರೋಧಿ, ಹಿಂದೂಗಳನ್ನು ಬೆಂಬಲಿಸುವಂತಹ ಕೃತಿಗಳು ರಚನೆಗೊಂಡಿವೆ. ಬ್ರಿಟಿಷರು ಭಾರತದಲ್ಲಿ ತಮ್ಮ ಸಾರ್ವಭೌಮತ್ವವನ್ನು ಸ್ಥಾಪಿಸಲು ಒಡೆದು ಆಳುವ ನೀತಿಯನ್ನು ಜಾರಿಗೆ ತರುವುದರ ಮೂಲಕ ಹಿಂದೂ ಮುಸ್ಲಿಮ್‌ರಲ್ಲಿ ಭೇದಭಾವವನ್ನು ಹುಟ್ಟಿ ಕೋಮುವಾದಕ್ಕೆ ಬೆಂಬಲವನ್ನು ನೀಡಿದರು. ಬಿ.ಸಿ.ಮಹಾಬಲೇಶ್ವರಪ್ಪ ಅವರ ಹೈದರಾಬಾದ್ ಕರ್ನಾಟಕ ರಾಜಕೀಯ ಚಳವಳಿಗಳು, ಗೋಪಾಲರಾವ್ ಹೇಜೀಬ್ ಅವರ ಹೈದರಾಬಾದ್ ಮುಕ್ತಿ ಸಂಘರ್ಷ, ಬಾಲಚಂದ್ರ ಜಯಶೆಟ್ಟಿ ಅವರ ಹೈದರಾಬಾದ್ ಕರ್ನಾಟಕ ವಿಮೋಚನಾ ಚಳವಳಿ ಮುಂತಾದ ಕೃತಿಗಳು ಅಧ್ಯಯನಕ್ಕೆ ಸಹಾಯಕವಾಗಿವೆ. ಈ ಸಂಸ್ಥಾನದಲ್ಲಿ ಹೆಚ್ಚಿನ ಜನತೆಯು ಹಿಂದೂಗಳಾಗಿದ್ದು ನಿಜಾಮನು ನಿರಂತರ ದಬ್ಬಾಳಿಕೆ ನಡೆಸುತ್ತಿದ್ದನೆಂದು, ಹಿಂದುಗಳ

ಅವನತಿ ಇವರ ಧ್ಯೇಯೋದ್ದೇಶವಾಗಿತ್ತು ಎಂದು ನಿರೂಪಿಸಲು ನಿಜಾಮನ ಋಣಾತ್ಮಕ ಕೆಲಸ ಕಾರ್ಯಗಳನ್ನು ಹೇಳುತ್ತಲೇ ಅವನ ಆಳ್ವಿಕೆಯ ನೀತಿಯನ್ನು ವಿರೋಧಿಸುವಂತಹ ಇತಿಹಾಸ ರಚನೆ ಹೊಂದಿತ್ತು. ಹಿಂದೂಗಳ ಮೇಲೆ ಮಾಡಿದ ದಬ್ಬಾಳಿಕೆ, ಕೊಲೆ, ಸುಲಿಗೆ, ಅತ್ಯಾಚಾರವನ್ನು ಮಾತ್ರ ವೈಭವೀಕರಿಸಿ ಚರಿತ್ರೆಯನ್ನು ರಚಿಸಿದರು. ನಿಜಾಮನನ್ನು ದೇಶದ್ರೋಹಿ ಹಿಂದೂಗಳ ಶತ್ರುವೆಂಬ ನಿಲುವನ್ನು ವ್ಯಕ್ತಪಡಿಸಿದ್ದಾರೆ. ಈ ಸಂಸ್ಥಾನದಲ್ಲಿ ಗೌಡರು, ಕುಲಕರ್ಣಿ, ಶಾನುಭೋಗರು ಮುಂತಾದವರು ಅನೇಕ ಜನರ ಮೇಲೆ ದಬ್ಬಾಳಿಕೆ ನಡೆಸಿದಂತಹ ಒಂದು ಪ್ರಸಂಗಗಳು ತಮ್ಮ ಕೃತಿಗಳಲ್ಲಿ ಉಲ್ಲೇಖಿಸಲಿಲ್ಲ.

ಸ್ವಾತಂತ್ರ್ಯ ಹೋರಾಟದ ಚಳವಳಿಯು ಗುಲಬರ್ಗಾ ಪ್ರದೇಶ ಒಳಗೊಂಡ ಚರಿತ್ರೆ ಲೇಖನಶಾಸ್ತ್ರವು ವಸಾಹತುಶಾಹಿ ಹಿನ್ನೆಲೆಯಿಂದ ರಚನೆಗೊಂಡ ಕೃತಿಗಳನ್ನು ಸಮರ್ಥವಾಗಿ ಎದುರಿಸಲು ರಾಷ್ಟ್ರೀಯವಾದಿ ಚರಿತ್ರೆ ರಚನೆಗೊಂಡಿತು. ರಾಷ್ಟ್ರೀಯತೆ ಉಗಮ ಹತ್ತೊಂಬತ್ತನೆಯ ಶತಮಾನದ ಹಿಂದೂ ಪುನರುಜ್ಜೀವನಕ್ಕೆ ತಳಕು ಹಾಕಿಕೊಳ್ಳುತ್ತವೆ. ತಿಲಕರು, ಆಲೂರು ವೆಂಕಟರಾಯರು, ಗಂಗಾಧರರಾವ್, ದೇಶಪಾಂಡೆ, ವೆಂಕಟಕೃಷ್ಣಯ್ಯ, ವಿ.ಡಿ.ಸಾವರಕರ್ ಮೊದಲಾದವರು ಪ್ರಾರಂಭ ಕಾಲದ ರಾಷ್ಟ್ರೀಯವಾದಿಗಳಾಗಿದ್ದರೆ ಜನರಲ್ಲಿ ರಾಷ್ಟ್ರಪ್ರಜ್ಞೆಯನ್ನು ಜಾಗೃತಿಗೊಳಿಸಲೆಂದು ಉಪಯೋಗಿಸಿದ ಪ್ರಾದೇಶಿಕ, ಧಾರ್ಮಿಕ ಮತ್ತು ಜಾತೀಯ ಉಪಾಯಗಳನ್ನು ಇಂದಿಗೂ ಹಾಡಿಹೋಗಳಲಾಗುತ್ತದೆ. ಸೂರ್ಯನಾಥ ಕಾಮತ್ ಅವರ ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಎಂ.ಬಿ.ಪಾಟೀಲ ಅವರ ಗುಲಬರ್ಗಾ ಜಿಲ್ಲೆ ಗ್ಯಾಸಟಿಯರ್, ರಮಾನಂದ ತೀರ್ಥರ ಹೋರಾಟದ ನೆನಪುಗಳು, ಷೇಕ್ ಅಲಿ ಕರ್ನಾಟಕ ಚರಿತ್ರೆ, ಮುಂತಾದ ಕೃತಿಗಳು ಸ್ವಾತಂತ್ರ್ಯ ಹೋರಾಟ ಕುರಿತು ರಚನೆಗೊಂಡಿವೆ. ಸೂರ್ಯನಾಥ ಕಾಮತ್ ಅವರ ಕರ್ನಾಟಕ ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ೩ ಸಂಪುಟಗಳಲ್ಲಿ ಅನೇಕ ಹೋರಾಟಗಾರರನ್ನು ಸಂದರ್ಶಿಸುವುದರ ಮೂಲಕ ವಿಷಯವನ್ನು ಸಂಗ್ರಹಿಸಿದ್ದಾರೆ. ಅಸಹಕಾರ ಚಳವಳಿ, ಕಾನೂನುಭಂಗ ಚಳವಳಿ, ಕ್ವಿಟ್ ಇಂಡಿಯಾ ಚಳವಳಿಯ ಪ್ರಭಾವವನ್ನು ಕುರಿತು ಗಮನಿಸಲಾಗಿದೆ. ಸುರಪುರ ಸಂಸ್ಥಾನದ ನಾಯಕರು ಬ್ರಿಟಿಷರ ವಿರೋಧಿಸುವುದು ಸುರಪುರ ಸಂಸ್ಥಾನದ ಇತಿಹಾಸ ಕೃತಿಯಲ್ಲಿ ತಿಳಿಸಿದ್ದಾರೆ. ಭಾರತ ಸ್ವಾತಂತ್ರ್ಯಗೊಂಡರೂ ಹೈದರಾಬಾದ ಕರ್ನಾಟಕ ಜನತೆ ಸ್ವಾತಂತ್ರ್ಯ ಹೊಂದಲಿಲ್ಲ. ನಿಜಾಮನು ಬ್ರಿಟಿಷರಿಗೆ ಸತತವಾಗಿ ಬೆಂಬಲ ಸೂಚಿಸುವುದರ ಮೂಲಕ ಚಳವಳಿಗಳ ದಮನಕ್ಕೆ ಸೂಕ್ತ ಕ್ರಮ ಕೈಗೊಂಡನು. ಇಂತಹ ಸಂದರ್ಭದಲ್ಲಿ ಗುಲಬರ್ಗಾ ಪ್ರದೇಶದ ಜನತೆಯು ದ್ವಿಮುಖ ಹೋರಾಟದಲ್ಲಿ ಜನರು ಪರಿಶ್ರಮವನ್ನು ಪಡೆಯಬೇಕಾಯಿತು. ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧಿಸಿದಂತೆ ರಾಷ್ಟ್ರೀಯವಾದಿ ನೆಲೆಯಲ್ಲಿ ಚರಿತ್ರೆ ರಚನೆಗೊಂಡಿತು. ಕರ್ನಾಟಕ ಚರಿತ್ರೆಯನ್ನು ವೈಭವೀಕರಿಸುವುದರ ಮೂಲಕ ತಮ್ಮ

ಶ್ರೇಷ್ಠತೆಯನ್ನು ಹೇಳುವತ್ತಾ ಹೆಚ್ಚು ಒತ್ತನ್ನು ನೀಡಿದರು. ಇದಕ್ಕೆ ವಿಜಯನಗರ ಸಾಮ್ರಾಜ್ಯವನ್ನು ಸತತವಾಗಿ ಬಳಸಿಕೊಂಡರು. ಹಾಗೆ ದೇಸೀಯ ಅರಸ ಮತ್ತು ಬ್ರಿಟಿಷರ ನಡುವೆ ನಡೆದ ಹೋರಾಟವನ್ನು ಸ್ವಾತಂತ್ರ್ಯದ ಲೇಪವನ್ನು ಹಚ್ಚಲಾಯಿತು.

ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಕಷ್ಟ ಕಾರ್ಪಣ್ಯಗಳನ್ನು ಅನುಭವಿಸಿದ ಅಸಂಖ್ಯಾತ ಸಾಮಾನ್ಯ ಜನರ ಬಗ್ಗೆ ಚಕಾರವೆತ್ತದಿರುವುದು, ರೈತರು, ಕಾರ್ಮಿಕರು, ಸ್ತ್ರೀಯರು, ವಿದ್ಯಾರ್ಥಿ, ಯುವಜನರ ಪಾತ್ರ ಇಲ್ಲಿ ಗೌಣಗೊಂಡಿದೆ. ಕೆಲವು ನಾಯಕರು ಘಟನೆಗಳು ಮಾತ್ರ ವಿಜೃಂಭಣೆಗೊಂಡಿವೆ. ಈ ಬರವಣಿಗೆಯಲ್ಲಿ ಗುರುತಿಸಬಹುದಾದ ಮತ್ತೊಂದು ಅಂಶವೆಂದರೆ ಅವುಗಳ ಪ್ರಾದೇಶಿಕತೆ, ಪ್ರತಿಯೊಬ್ಬ ಲೇಖಕನೂ ಸ್ವಾತಂತ್ರ್ಯ ಚಳವಳಿಯಲ್ಲಿ ಕರ್ನಾಟಕವು ವಹಿಸಿದ ಪಾತ್ರವನ್ನು ಬೇರೆ ಯಾವ ರಾಜ್ಯಕ್ಕೂ ಕಡಿಮೆಯಿಲ್ಲವೆಂದು ತೋರಿಸಲು ಇತರರೊಂದಿಗೆ ಪೈಪೋಟಿ ನಡೆಸುತ್ತಾರೆ. ಮುಖ್ಯವಾಗಿ ಬಹುಜನ ಸಮುದಾಯದ ಭಾಗವಹಿಸುವಿಕೆಗೆ ಯಾವ ಮನ್ನಣೆಗೂ ದೊರೆತಿಲ್ಲ. ಅಸಹಕಾರ, ಕರನಿರಾಕರಣೆ, ಭಾರತ ಬಿಟ್ಟು ತೊಲಗಿ, ಅರಣ್ಯ ಸತ್ಯಾಗ್ರಹ ಮುಂತಾದ ನಿರ್ದಿಷ್ಟ ಕಾಂಗ್ರೆಸ್ ನಾಯಕರ ವಿಜಯಗಳೆಂದೆ ಪರಿಗಣಿಸಲಾಗಿದೆ. ಈ ಯಶಸ್ಸು ಜನ ಸಮುದಾಯದ ಕಡುಬಡತನದ ಆರ್ಥಿಕ ಸ್ಥಿತಿಯ ಚೌಕಟ್ಟಿನಲ್ಲಿ ಬೆಲೆ ಕಟ್ಟಲಾಗಿಲ್ಲ. ಕೋಮುವಾದ, ರಾಷ್ಟ್ರೀಯವಾದ, ಮುಂತಾದ ವಿಜ್ಞಾನಗಳನ್ನು ಅನ್ವಯಿಸಿ ನೋಡಿದಾಗ ಅವು ಸ್ವಾತಂತ್ರ್ಯ ಚಳವಳಿಯು ಇತಿಹಾಸದಲ್ಲಿ ವಿಭಿನ್ನ ಹಂತಗಳಿವೆಯೆಂಬ ಸಂಗತಿಯನ್ನು ಗುರುತಿಸುವುದೇ ಇಲ್ಲ. ಇದೇ ಚಳವಳಿಯು ಸಾರ್ವತ್ರಿಕವಾಗಿತ್ತೆಂದು, ವಿಕಸನ ರಹಿತವಾಗಿತ್ತೆಂದು ಚಿತ್ರಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಏಕೀಕರಣ ಚಳವಳಿ ಸಂದರ್ಭದಲ್ಲಿ ಗುಲಬರ್ಗಾ ಪ್ರದೇಶವು ಹೈದರಾಬಾದ್ ಸಂಸ್ಥಾನಕ್ಕೆ ಒಳಪಟ್ಟಿತ್ತು. ಎಚ್.ಎಸ್.ಗೋಪಾಲರಾವ್ ಅವರ ಕರ್ನಾಟಕ ಏಕೀಕರಣ ಇತಿಹಾಸ, ನರಸಿಂಹಶೆಟ್ಟಿ ಎತ್ತ ಸಾಗಿದೆ ನಮ್ಮ ನಾಡು, ಕೆ. ರಾಮು ಅವರ ಕರ್ನಾಟಕ ಏಕೀಕರಣ, ಪಾಟೀಲ ಪುಟ್ಟಪ್ಪ ಅವರ ಕರ್ನಾಟಕ ಏಕೀಕರಣ ಹಾದಿಯಲ್ಲಿ ಮುಂತಾದ ಏಕೀಕರಣ ಕುರಿತು ವಿಷಯವನ್ನು ಅಭ್ಯಾಸಿಸಿದ್ದಾರೆ. ಗುಲಬರ್ಗಾ ಪ್ರದೇಶದ ಕುರಿತು ಬಂದಿರುವ ಕೃತಿಗಳು ಹಾಗೂ ಲೇಖನಗಳ ಸಂಖ್ಯೆಯಲ್ಲಿ ಕಡಿಮೆ ಎಂದೆನಿಸಿದರೂ ಅವು ನೀಡುವ ವಿವರಣೆಗಳು ಮಹತ್ವದು. ರಾಷ್ಟ್ರೀಯವಾದಿ ಧೋರಣೆ ಹಿನ್ನೆಲೆಯಿರುವ ಕೃತಿಗಳೇ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುವುದರಿಂದ ಸಾಮಾಜಿಕ ಹಾಗೂ ಆರ್ಥಿಕ ಚರಿತ್ರೆ ಕುರಿತು ಮಾಹಿತಿಗಳನ್ನು ಕಡಿಮೆ ಪ್ರಮಾಣದಲ್ಲಿ ಸಿಗುತ್ತವೆ. ಸ್ಥಳೀಯ ಚರಿತ್ರೆ ನಿರ್ಮಾಣ ಇತ್ತೀಚಿನ ದಿನಗಳಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಂಡರೂ, ಈ ಅಧ್ಯಯನ ವಿಧಾನ ಪರಿಪೂರ್ಣವಾದ ಸ್ಥಳೀಯ ಚರಿತ್ರೆಯಾಗಿದೆ.

ನಿಜಾಮನಕ್ಕಿಂತಲೂ ಪೂರ್ವ ಗುಲಬರ್ಗಾ ಚರಿತ್ರೆ ಸಾಂಸ್ಕೃತಿ ಕೊಡುಗೆಗಳು ಬಹಳಷ್ಟು ಇದ್ದರೂ ಕೂಡ ಬಹಮನಿ ಮತ್ತು ಬಹಮನಿತಗಿಂತ ಪೂರ್ವ ಚರಿತ್ರೆ ಹೆಚ್ಚಾಗಿ ಕರ್ನಾಟಕ ಚರಿತ್ರೆಯಲ್ಲಿ ಬಿಂಬಿಸಲ್ಪಡಲಿಲ್ಲ. ಗುಲಬರ್ಗಾ ಪ್ರದೇಶವಾಗಿದ್ದುಕೊಂಡು ಬಹಮನಿ ಸಂಬಧಿಸಿದ ಚರಿತ್ರೆಯಲ್ಲಿ ತನ್ನ ಛಾಪನ್ನು ಒತ್ತಿದರು ಕೂಡಾ ಕರ್ನಾಟಕದ ಚರಿತ್ರೆ ಬರವಣಿಗೆ ಸಂದರ್ಭದಲ್ಲಿ ಬಹಮನಿ ಸಂಸ್ಥಾನಕ್ಕೆ ಸಂಬಂಧಿಸಿದ ಸಾಂಸ್ಕೃತಿಕ ಚರಿತ್ರೆಯನ್ನು ಬಹುತೇಕ ಚರಿತ್ರೆಕಾರರ ಮತ್ತು ವಿದ್ವಾಂಸರು ನಿರ್ಲಕ್ಷಿಸಿದ್ದನ್ನು ಕಾಣಬಹುದು.

ಬಹಮನಿಯ ಸಮಕಾಲೀನ ರಾಜ್ಯವಾದ ವಿಜಯನಗರಕ್ಕೆ ನೀಡಿದ ಪ್ರಾಶಸ್ತ್ಯವನ್ನು ಬಹಮನಿ ಸಂಸ್ಥಾನವಾಗಲಿ, ಗುಲಬರ್ಗಾಕ್ಕೆ ನಿರ್ಲಕ್ಷಿಸಿದ್ದನ್ನು ಬಹುತೇಕ ಬರವಣಿಗೆಗಳಲ್ಲಿ ಕಾಣಬಹುದು. ನಿಜಾಮನ ಕಾಲಕ್ಕೆ ಸಂಬಂಧಪಟ್ಟಂತೆ ಬರೆದ ಅನೇಕ ಕೃತಿಗಳಲ್ಲಿ ಕೂಡಾ ಹಿಂದುತ್ವ ಪರದ ದೋರಣೆಗಳು ಹೆಚ್ಚಾಗಿ ಕಂಡುಬಂದಿವೆ. ನಿಜಾಮ ತನ್ನ ಅರಸೊತ್ತಿಗೆ ಮೂಲಕ ಮತ್ತು ರಜಾಕಾರರ ಮೂಲಕ ಪ್ರಜಾಪಿಡನೆ ಮಾಡುತ್ತಿದ್ದ ವಿವರಗಳನ್ನು ಟೀಕಿಸುವ ಸಂದರ್ಭದಲ್ಲಿ ನಿಜಾಮನ ಧಾರ್ಮಿಕ ಶ್ರದ್ಧೆಯನ್ನು ಕೋಹಕ ಮಾಡಿರುವಂತಹದ್ದನ್ನು ನೋಡುಬಹುದಾಗಿದೆ. ಹಿಂದೂ ಮುಸ್ಲಿಂ ನಡುವಿನ ಘರ್ಷಣೆಗಳಿಗಿಂತ ನಿಜಾಮನ ಆಡಳಿತ ವ್ಯವಸ್ಥೆಯು ಕುಸಿದಿರುವ ಬಗ್ಗೆ ವೈಜ್ಞಾನಿಕವಾದ ಬರಹಗಳು ಕಡಿಮೆ ಇರುವುದನ್ನು ಈ ಸಂದರ್ಭದಲ್ಲಿ ಗಮನಿಸಬಹುದು. ಕೆಲವು ಬರಹಗಳಲ್ಲಿ ಹಿಂದೂ ಪರವಾದ ವಿಚಾರಗಳಿಲ್ಲದಿದ್ದರೂ ವ್ಯವಸ್ಥೆಯನ್ನು ವಿಮರ್ಶಿಸುವ ಪ್ರಯತ್ನಗಳು ಅಷ್ಟಾಗಿ ಕಂಡುಬರದಿರುವುದನ್ನು ಈ ಸಂದರ್ಭದಲ್ಲಿ ಗಮನಿಸಬಹುದಾಗಿದೆ.

## ಗ್ರಂಥಋಣ

### ಪ್ರಕಟಿತ ಆಕರಗಳು

೧. ಅಕ್ಕಿ ಡಿ.ಎನ್., ಸಗರನಾಡಿನ ಸಿರಿ, ರವಿಕುಂಚ ಪ್ರಕಾಶನ ಗೋಗಿ, ಗುಲಬರ್ಗಾ ಜಿಲ್ಲೆ, ೧೯೯೬.

೨. ಅಪ್ಪಾರಾವ್ ಅಕ್ಕೋಣಿ (ಸಂ.), ಗುಲಬರ್ಗಾ ಜಿಲ್ಲಾ ಕಥಾ ಸಂಕಲನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪.

೩. ಅಮರೇಶ ನುಗಡೋಣಿ, ಹೈದಾರಾಬಾದು ಕರ್ನಾಟಕ ಹಾಡುಪಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೪. ಅನಂತರಾಮ್‌ರಾವ್ ಕೆ. (ಸಂ.), ಸುವರ್ಣ ಕರ್ನಾಟಕ ದರ್ಶನ, ವಿದ್ಯಾಪಬ್ಲಿಷಿಂಗ್ ಹೌಸ್ ಶ್ರೀನಿಲಯ, ಮಂಗಳೂರು, ೨೦೦೬.

೫. ಆಲೂರು ವೆಂಕಟರಾಯರು, ಕರ್ನಾಟಕ ಗತವೈಭವ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬.

೬. ಇರ್ಫಾನ್ ಹಬೀಬ್, ಪ್ರದೀಪ್ ಬೆಳಗಲ್ (ಅನು.), ಪೂರ್ವೇತಿಹಾಸ, ಚಿಂತನ ಪುಸ್ತಕ ಜಯನಗರ, ಬೆಂಗಳೂರು, ೨೦೦೮.

೭. ಕರ್ನಾಟಕ ಕೈಪಿಡಿ, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಕರ್ನಾಟಕ ಸರ್ಕಾರ, ೧೯೯೬.

೮. ಕಲ್ಲೂರ್ ಎಂ.ಎಸ್., ಕೃಷಿ ಅರ್ಥಶಾಸ್ತ್ರ, ಕಲಾಪ್ರಕಾಶನ, ಬೆಂಗಳೂರು, ೨೦೦೦.

೯. ಕುಮಾರ್. ಕೆ.ಎಂ., ಕರ್ನಾಟಕದಲ್ಲಿ ರೈತ ಚಳವಳಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮.

೧೦. ಕೃಷ್ಣರಾವ್ ಎಂ.ವಿ. ಮತ್ತು ಕೇಶಭಟ್ಟ ಎಂ., ಕರ್ನಾಟಕದ ಇತಿಹಾಸ ದರ್ಶನ, ಪ್ರಕಾಶಕರು, ಕರ್ನಾಟಕ ಸಹಕಾರಿ, ಪ್ರಕಾಶನ ಮಂದಿರ ಚಾಮರಾಜಪೇಟೆ, ಬೆಂಗಳೂರು, ೧೯೭೦.

೧೧. ಕೃಷ್ಣಕೊಲ್ಹಾರ ಕುಲಕರ್ಣಿ, ಬಿಜಾಪುರ ಆದಿಲಶಾಹಿ, ಸಿಕ್ಯಾಬ್ ಆದಿಲ್‌ಶಾಹಿ, ಆದಿಲ್‌ಶಾಹಿ ಅಧ್ಯಯನ ಸಂಸ್ಥೆ, ಬಿಜಾಪುರ, ೨೦೦೨.

೧೨. ಕೃಷ್ಣಕೊಲ್ಹಾರ ಕುಲಕರ್ಣಿ, ಅಖಂಡ ಕರ್ನಾಟಕದ ಹೆಜ್ಜೆಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬.

೧೩. ಖಂಡೋಬರಾವ್ ಹೆಚ್., ನಾಣ್ಯ ಕರ್ನಾಟಕ, ಪ್ರಕಾಶಕರು ಮಗರ್ ಪಬ್ಲಿಕೇಷನ್ಸ್, ಸಹನಾ ಗಾಂಧಿನಗರ, ಮುಖ್ಯರಸ್ತೆ, ಶಿವಮೊಗ್ಗ, ೨೦೦೨.

೧೪. ಗವಿಸಿದ್ದಪ್ಪ ಎಚ್. ಪಾಟೀಲ (ಸಂ.), ಪುರಸ್ಕೃತ ಕೃತಿಗಳ ಸಮೀಕ್ಷೆ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫.

೧೫. ಗಿಲ್ಬರ್ಟ್ ಸಿಕ್ವೇರಾ, ಪೂರ್ವ ಪ್ರಾಚೀನ ಭಾರತ ಇತಿಹಾಸ, ಚೇತನ ಬುಕ್ ಹೌಸ್, ಮೈಸೂರು, ೨೦೦೪.

೧೬. ಗೋಪಾಲ್ ಆರ್. (ಸಂ.), ಗುಲಬರ್ಗಾ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಮೈಸೂರು, ೨೦೦೭.

೧೭. ಗೋಪಾಲರಾವ್ ಹೇಜೀಬ್, ಹೈದರಾಬಾದ್ ಮುಕ್ತಿ ಸಂಘರ್ಷ, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ೨೦೦೧.

೧೮. ಗೋಪಾಲರಾವ್ ಎಚ್.ಎಸ್. (ಸಂ.), ಕಲ್ಯಾಣ ಚಾಲುಕ್ಯರ ಶಿಲ್ಪಕಲೆ, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು-೧೯, ೨೦೦೮.

೧೯. ಗೋಪಾಲರಾವ್ ಎಚ್.ಎಸ್., ಕರ್ನಾಟಕ ಏಕೀಕರಣ ಇತಿಹಾಸ, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೮.

೨೦. ಗೋಪಾಲರಾವ್ ಎಚ್.ಎಸ್. (ಸಂ.), ನಮ್ಮ ಕನ್ನಡ ನಾಡು, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೭.

೨೧. ಗೋಪಾಲರಾವ್ ಎಚ್.ಎಸ್. (ಸಂ.), ಒಂದುಗೂಡಿದ ಕನ್ನಡ ನಾಡು, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೬.

೨೨. ಗೋಪಾಲ್ ಪಾ.ಚಾ.ರಾ., ಬಾದಾಮಿಯ ಚಾಲುಕ್ಯರು, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೭.

೨೩. ಗೋವಿಂದರಾಜು ಸಿ.ಆರ್., ಕರ್ನಾಟಕ ಏಕೀಕರಣ ಹಾಗೂ ನಾಮಕರಣ, ಕರ್ನಾಟಕ ವಿಧಾನಮಂಡಲ ಗ್ರಂಥಾಲಯ, ಸಮಿತಿ, ವಿಧಾನಸೌಧ, ಬೆಂಗಳೂರು, ೨೦೦೫.

೨೪. ಚಂದ್ರಶೇಖರ್ ಎಸ್., ವಸಾಹತು ಕಾಲೀನ ಕರ್ನಾಟಕ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬.

೨೫. ಚಂದ್ರಶೇಖರ್ ಎಸ್., ಆಧುನಿಕ ಕರ್ನಾಟಕದ ಆಂದೋಲನಗಳು, ನಮ್ಮ ಪ್ರಕಾಶನ, ಬಿಳಿಗೆರೆ, ತಿಪಟೂರು ತಾಲ್ಲೂಕು, ೨೦೦೨.

೨೬. ಚಕ್ರವರ್ತಿ ಸೂಲಿಬೆಲೆ, ಸ್ವಾತಂತ್ರ್ಯ ಮಹಾಸಂಗ್ರಾಮ, ೧೮೫೭, ಒಂದು ವಾಕ್ಚಿತ್ರ, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ೨೦೦೭.

೨೭. ಚನ್ನಕ್ಕ ಪಾವಟೆ, ರಾಷ್ಟ್ರಕೂಟ ಸಾಮಂತ ಚಲ್ಲಕೇತನರು, ಚನ್ನಗಂಗಾ ಪ್ರಕಾಶನ, ಧಾರವಾಡ, ೧೯೯೯.

೨೮. ಚನ್ನಬಸಪ್ಪಾ ಕೋ., ಕರ್ನಾಟಕ ಏಕೀಕರಣ (ಬಳ್ಳಾರಿ ಜಿಲ್ಲೆಯ ಹಿನ್ನೆಲೆಯಲ್ಲಿ), ೨೦೦೭.

೨೯. ಚಿನ್ನಸ್ವಾಮಿ ಸೋಸಲೆ ಎನ್., ಕರ್ನಾಟಕ ರಾಜಕೀಯ ಚರಿತ್ರೆ ಮತ್ತು ಸಾಹಿತ್ಯ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೧.

೩೦. ಚೆನ್ನಣ್ಣ ವಾಲೀಕಾರ, ಹೈದ್ರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಜಾನಪದೀಯ ಅಧ್ಯಯನ, ವಾಲೀಕಾರ ವಿರಸಾ ದಲಿತ ಬಂಡಾಯ ಸಾಹಿತ್ಯ, ಪ್ರಕಾಶನ ಕೇಂದ್ರ, ಬಂಡೇಪುರ ಕಾಲೋನಿ, ಗುಲಬರ್ಗಾ, ೧೯೯೮.

೩೧. ಜವರಯ್ಯ ಮ.ನ., ಪರಂಪರೆಯ ಹಾಗೂ ದಲಿತ ಬಂಡಾಯ ಸಾಹಿತ್ಯ ಸಮಗ್ರ ಅಧ್ಯಯನ, ಪ್ರಕಾಶಕರು, ಸಿದ್ಧಾರ್ಥ ಗ್ರಂಥಮಾಲೆ, ಕುವೆಂಪುನಗರ, ಮೈಸೂರು, ೧೯೯೪.

೩೨. ತಂಬಂಡ ವಿಜಯ್ ಪೂಣಚ್ಚ, ರೈತ ಚಳವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೩೩. ತಂಬಂಡ ವಿಜಯ್ ಪೂಣಚ್ಚ (ಸಂ.), ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ, ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೩೪. ತಿಪ್ಪೇರುದ್ರಸ್ವಾಮಿ ಎಚ್. (ಪ್ರ.ಸಂ.), ದಕ್ಷಿಣ ಭಾರತದ ಇತಿಹಾಸ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೮೪.

೩೫. ದಾಸನೂರು ಕೂಸಣ್ಣ, ರೈತರ ಆತ್ಮಹತ್ಯೆ ಮತ್ತು ದಲಿತರ ನವ ಬ್ರಾಹ್ಮಣಿಕೆ, ಮಾತಂಗ ಪ್ರಕಾಶನ, ಮೈಸೂರು, ೨೦೦೫.

೩೬. ದಿವಾಕರ ಆರ್.ಆರ್., ಕರ್ನಾಟಕದ ಪರಂಪರೆ, ಸಂ–೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬.

೩೭. ದಿವಾಕರ ಆರ್.ಆರ್., ಕರ್ನಾಟಕದ ಪರಂಪರೆ, ಸಂ–೨, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬.

೩೮. ದೀಕ್ಷಿತ್ ಜಿ.ಎಸ್., ಸಂಗಮರ ಕಾಲದ ವಿಜಯನಗರ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೯೧.

೩೯. ಧ್ರುವನಾರಾಯಣ (ಸಂ.), ಸುರಪುರ ಸಂಸ್ಥಾನದ ಇತಿಹಾಸ, ಕಪಟರಾಳ ಕೃಷ್ಣರಾಯರ ಸ್ಮಾರಕ ಸಮಿತಿಗಾಗಿ ಪುಸ್ತಕ, ಶಕ್ತಿ ಪ್ರಕಾಶನ, ಬೆಂಗಳೂರು, ೨೦೦೫.

೪೦. ದೇವೇಂದ್ರಗೌಡ ಮಾಲಿಪಾಟೀಲ, ಹೈದ್ರಾಬಾದ ಕರ್ನಾಟಕ, ಗಾಂಧಿ ಕೊಲೂರು ಮಲ್ಲಪ್ಪ ಪ್ರಕಾಶಕರು, ಶ್ರೀ ಸಂಗೋಳ್ಳಿ ರಾಯಣ್ಣ ಪ್ರಕಾಶನ, ಶಹಾಪುರ, ಜಿಲ್ಲೆ ಗುಲಬರ್ಗಾ, ೨೦೦೪.

೪೧. ನರಸಿಂಹಶೆಟ್ಟಿ, ಎತ್ತ ಸಾಗಿದೆ ನಮ್ಮ ನಾಡು, ಸಿರಿನಾಡು ಪ್ರಕಾಶನ, ಕೋರಮಂಗಲ ರಸ್ತೆ, ಅಡುಗೋಡಿ, ಬೆಂಗಳೂರು, ೨೦೦೦.

೪೨. ನರಸಿಂಹಮೂರ್ತಿ ಎ.ವಿ., ಕರ್ನಾಟಕ ನಾಣ್ಯ ಪರಂಪರೆ, ಕನ್ನಡ ಪುಸ್ತಕ ಪ್ರಾಧಿಕಾರ, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು, ೨೦೦೩.

೪೩. ನಾಗಯ್ಯ ಜೆ.ಎಂ., ಆರನೇ ವಿಕ್ರಮಾದಿತ್ಯನ ಶಾಸನಗಳ ಒಂದು ಅಧ್ಯಯನ, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ, ೧೯೯೨.

೪೪. ನಾಗರಾಜ್ ಎಂ.ಜಿ, ಕರ್ನಾಟಕ ರೈತ ಚಳವಳಿ-ಸತ್ಯಾಗ್ರಹಗಳು, ಪ್ರಕಟಣೆ ಕರ್ನಾಟಕ ವಿಧಾನ ಮಂಡಲದ, ಗ್ರಂಥಾಲಯ ಸಮಿತಿ, ವಿಧಾನಸೌಧ, ಬೆಂಗಳೂರು, ೨೦೦೬.

೪೫. ನಾಗಭೂಷಣ ಡಿ.ಎಸ್., ರೈತಭಾರತ : ಅವಸಾನದ ಅಂಚಿನಲ್ಲಿ, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೮.

೪೬. ನಾಯಕ ಡಿ.ಬಿ. (ಪ್ರಸಂ.), ಜ್ಞಾನಗಂಗಾ-೨, ಕನ್ನಡ ಸಾಹಿತ್ಯ ಸಂಘ, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫-೦೬

೪೭. ನಾರಾಯಣ ಎಂ., ಗ್ರಾಮೀಣ ಸಮಾಜಶಾಸ್ತ್ರ, ಚೇತನ್ ಬುಕ್ ಹೌಸ್, ಮೈಸೂರು, ೨೦೦೫.

೪೮. ಪಂಚಮುಖಿ ಆರ್.ಎಸ್., ಕರ್ನಾಟಕ ಇತಿಹಾಸ, ಸಂಪುಟ-೧, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೭.

೪೯. ಪ್ರಧಾನ ಗ.ಪ್ರ., ಸರಸ್ವತಿ ರಿಸಬೂಡ (ಅನು.), ಸ್ವಾತಂತ್ರ್ಯ ಸಂಗ್ರಾಮದ ಮಹಾಭಾರತ, ಮರಾಠಿ ಕನ್ನಡ ಸ್ನೇಹವರ್ಧನ ಕೇಂದ್ರ, ಪುಣೆ ಮತ್ತು ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೧೯೯೪.

೫೦. ಪಾಟೀಲ ಕಲ್ಲನಗೌಡ, ಕರ್ನಾಟಕ ಏಕೀಕರಣದ ಹಾದಿಯಲ್ಲಿ, ವಿವೇಕ ಪ್ರಕಾಶನ, ಹುಬ್ಬಳ್ಳಿ, ೧೯೮೬.

೫೧. ಪಾಟೀಲ ಎಂ.ಬಿ. (ಪ್ರಸಂ.), ಕರ್ನಾಟಕ ಕೈಪಿಡಿ, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಕರ್ನಾಟಕ ಸರ್ಕಾರ, ೧೯೯೬.

೫೨. ಪಾಟೀಲ ಎನ್.ಎಚ್. (ಸಂ.), ವಿಮೋಚನೆ, ಜಿಲ್ಲಾ ಆಡಳಿತ ಕೊಪ್ಪಳ, ೧೯೯೯.

೫೩. ಪಾಟೀಲ ಪುಟ್ಟಪ್ಪ, ಕರ್ನಾಟಕದ ಕಥೆ, ಎಸ್.ಬಿ.ಎಸ್. ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು, ೧೯೯೧.

೫೪. ಪಾಟೀಲ ಪುಟ್ಟಪ್ಪ, ಚೆಲುವ ಕನ್ನಡ ನಾಡು, ಸಾಹಿತ್ಯಪ್ರಕಾಶನ, ಕೊಪ್ಪೀಕರ್ ಬೀದಿ, ಹುಬ್ಬಳ್ಳಿ, ೨೦೦೭

೫೫. ಪಾರ್ಥಸಾರಥಿ ಕೆ.ಎಸ್., ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೯

೫೬. ಪೂಜಾರ ವ್ಹಿ.ಜಿ., (ಪ್ರಸಂ.), ಜ್ಞಾನಗಂಗಾ-೨, ಕನ್ನಡ ಸಾಹಿತ್ಯ ಸಂಘ, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೬-೦೭

೫೭. ಪೂಜಾರ ವ್ಹಿ.ಜಿ. (ಸಂಶೋಧನ ಲೇಖನಗಳು), ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫.

೫೮. ಫ್ಲೀಟ್ ಜೆ.ಎಫ್., ಸಿ.ಪಿ.ಕೆ. (ಅನು.), ಭಾರತೀಯ ಶಾಸನಶಾಸ್ತ್ರ ಪರಿಚಯ, ಲಕ್ಷ್ಮೀ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು, ೨೦೦೧.

೫೯. ಬಸವರಾಜ ಎನ್. ಅಕ್ಕಿ, ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿ, ಸೋಮೇಶ್ವರ ಪ್ರಕಾಶನ, ಧಾರವಾಡ, ೨೦೦೪.

೬೦. ಬೋರಲಿಂಗಯ್ಯ ಹಿ.ಜಿ. (ಸಂ.), ೫೦ ಸುವರ್ಣ ಕರ್ನಾಟಕ ಅಭಿವೃದ್ಧಿ ಪಂಥ, ಸುವರ್ಣ ಕರ್ನಾಟಕ ಸಂಪುಟ-೧, ೧೯೫೬-೨೦೦೬, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಮತ್ತು ಕರ್ನಾಟಕ ಗ್ಯಾಸೆಟೀಯರ್, ಬೆಂಗಳೂರು, ೨೦೦೭.

೬೧. ಭಂಡಾರಿ ಆರ್.ವಿ., ವರ್ಣದಿಂದ ವರ್ಗದ ಕಡೆಗೆ, ಕರ್ನಾಟಕ ಸರಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಚಾಮರಾಜಪೇಟೆ, ಬೆಂಗಳೂರು, ೨೦೦೩.

೬೨. ಭಾಸ್ಕರ್ ಟಿ.ಎಂ., ಮತ್ತು ಶ್ರೀರಾಜಶೇಖರ್ ಹತಗುಂದಿ (ಸಂ.), ಕಲಬುರ್ಗಿ ಜಿಲ್ಲಾ ದರ್ಶನ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫.

೬೩. ಭೈರಪ್ಪ ಕೆ., ಸಮಗ್ರ ಗ್ರಾಮೀಣ ಸಮಾಜ ಮತ್ತು ಅಭಿವೃದ್ಧಿ, ಸಪ್ನಬುಕ್ ಹೌಸ್, ಬೆಂಗಳೂರು, ೨೦೦೮.

೬೪. ಮಹದೇವ ಸಿ., ಕರ್ನಾಟಕ ಪುರಾತತ್ವ ಶೋಧ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೬೫. ಮಹಾದೇವಯ್ಯ ಪಿ. (ಸಂ.), ದಲಿತರು ಭಾಷೆ ಮತ್ತು ಸಮಾಜ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೬೬. ಮಹಾಬಲೇಶ್ವರಪ್ಪ ಬಿ.ಸಿ. (ಸಂ.), ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳವಳಿಗಳು (೧೯೪೬–೨೦೦೦), ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೮.

೬೭. ಮಹಾಲಿಂಗ ಯಾಳಗಿ (ಸಂ.), ಮುಂಡರಗಿನಾಡ ಸ್ವಾತಂತ್ರ್ಯ ಸಂಗ್ರಾಮ ಮತ್ತು ಹೈದರಾಬಾದ್ ವಿಮೋಚನಾ ಹೋರಾಟ, ಪ್ರಕಾಶಕರು ಮುಂಡರಗಿ ತಾಲೂಕು ಸ್ವಾತಂತ್ರ್ಯಯೋಧರ ಸಂಘ, ಮುಂಡರಗಿ, ೧೯೯೯.

೬೮. ಮುಡಬಿ ಗುಂಡೇರಾವ್, ಸೇಡಂ ತಾಲೂಕಿನ ಐತಿಹಾಸಿಕ ಸ್ಮಾರಕಗಳು, ಪ್ರಕಾಶನ ತಾಲೂಕು ಬಸವಕೇಂದ್ರ, ಸೇಡಂ, ೧೯೯೯.

೬೯. ಮುಜಾಫರ್ ಅಸ್ಸಾದಿ, ಕರ್ನಾಟಕದಲ್ಲಿ ಐಡೆಂಟಿಟಿ ರಾಜಕೀಯ ರೈತ, ರೈತ ಹೋರಾಟ ಹಾಗೂ ಸಾಮಾಜಿಕ ಚಳವಳಿ, ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್, ಕೃಷ್ಣಪುರದೊಡ್ಡಿ, ೨೦೦೯.

೭೦. ಮೋಹನ್‌ಕೃಷ್ಣ ರೈ ಕೆ., ವಸಾಹತುಶಾಹಿ ಮತ್ತು ನಗರೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೭೧. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೭೨. ಮೋಹನಕೃಷ್ಣ ರೈ ಕೆ., ಚರಿತ್ರೆ ಕಥನ, ಪಲ್ಲವ ಪ್ರಕಾಶನ, ಚನ್ನಪಟ್ಟಣ, ಬಳ್ಳಾರಿ, ೨೦೦೯.

೭೩. ಯಶೋಧರಾಶಾಸ್ತ್ರೀ ಬಿ., ಗುಲಬರ್ಗಾ ಜಿಲ್ಲೆಯ ಸಂಪ್ರದಾಯದ ಹಾಡುಗಳು, ಜ್ಯೋತಿರ್ಮಯ ಪ್ರಕಾಶನ, ಗುಲಬರ್ಗಾ, ೧೯೯೯.

೭೪. ಯೋಗೀಶ್ವರಪ್ಪ ಡಿ.ಎನ್., ಕನ್ನಡಿಗರ ಬ್ರಿಟಿಷ್ ವಿರೋಧಿ ಸಶಸ್ತ್ರ ಬಂಡಾಯಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೧.

೭೫. ಮುನ್ಷಿ ಕೆ.ಎಂ., ರಂಗರಾವ್ ಎ.ಆರ್. (ಅನು.), ಒಂದು ಯುಗದ ಅಂತ್ಯ, ಭಾರತೀಯ ವಿದ್ಯಾಭವನ, ಮೈಸೂರು ಕೇಂದ್ರ, ವಿಜಯನಗರ, ಮೈಸೂರು, ೨೦೦೭.

೭೬. ರಾಘವೇಂದ್ರ ಪ್ರಭು ಎಂ. **ಕರ್ನಾಟಕದ ಇತಿಹಾಸ,** ಜೂಪಿಟರ್ ಬುಕ್ಸ್, ಎಂ.ಸಿ.ಸಿ. ಪಬ್ಲಿಕೇಷನ್ಸ್, ಪಠ್ಯಪುಸ್ತಕ ವಿಭಾಗ, ಬೆಂಗಳೂರು, ೧೯೯೯.

೭೭. ರಾಘವೇಂದ್ರರಾವ್ ಕೆ., ಆರ್ಯ (ಅನು.), **ಕರ್ನಾಟಕ ಏಕೀಕರಣದ ನಾಲ್ವರು ಚಿಂತಕರು,** ಮನೋಹರ ಗ್ರಂಥಮಾಲಾ, ಲಕ್ಷ್ಮಿಭವನ ಸುಭಾಸ ರಸ್ತೆ, ಧಾರವಾಡ, ೨೦೦೫.

೭೮. ರಾಮಪ್ರಸಾದ್ ಎನ್.ಎಸ್., **ಪ್ರಾಚೀನ ಕರ್ನಾಟಕದಲ್ಲಿ ರಾಜ್ಯಾಡಳಿತ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ನೃಪತುಂಗ ರಸ್ತೆ, ಬೆಂಗಳೂರು, ೧೯೮೩.

೭೯. ರಾಮಸ್ವಾಮಿ ಎಸ್.ಆರ್. (ಸಂ.), **ಸ್ವಾತಂತ್ರ್ಯೋದಯದ ಮೈಲುಗಲ್ಲುಗಳು,** ರಾಷ್ಟ್ರೋತ್ಥಾನ ಸಾಹಿತ್ಯ ಪ್ರಕಟನೆ, ಬೆಂಗಳೂರು, ೧೯೯೮.

೮೦. ರಾಮು ಕೆ., **ಕರ್ನಾಟಕ ಏಕೀಕರಣ,** ಪ್ರಕಾಶಕರು, ಚೇತನ ಬುಕ್ ಹೌಸ್, ಮೈಸೂರು, ೧೯೯೭.

೮೧. ರಮೇಶ ನಾಯಕ (ಸಂ.), **ಕರ್ನಾಟಕ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರುಚಿಂತನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೮೨. ರಾಮೇಶ್ವರ ಎ.ಕೆ., **೧೮೫೭ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ,** ಸಿದ್ಧಲಿಂಗೇಶ್ವರ ಬುಕ್ ಡಿಪೋ, ಮತ್ತು ಪ್ರಕಾಶನ, ಗುಲಬರ್ಗಾ, ೨೦೦೭.

೮೩. ರತ್ನಶೀಲಾ ಶಿವಲಿಂಗಪ್ಪ ಗುರಡ್ಡಿ, **ಕರ್ನಾಟಕ ಏಕೀಕರಣ ಹೋರಾಟ ಮತ್ತು ಮಹಿಳೆ,** ಕನ್ನಡ ಜಾಗೃತಿ ಪುಸ್ತಕ ಮಾಲೆ, ಬೆಂಚಣಿ, ಚಿಕ್ಕೋಡಿ, ತಾ. ಬೆಳಗಾವಿ, ೨೦೦೪.

೮೪. ಲಕ್ಷ್ಮಣ್ ತೆಲಗಾವಿ (ಸಂ.), **ಸ್ಥಳೀಯ ಚರಿತ್ರೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೮೫. ಲಕ್ಷ್ಮಣ್ ತೆಲಗಾವಿ (ಸಂ.), **ಮೌರ್ಯ ಮತ್ತು ಶಾತವಾಹನ ಯುಗ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೮೬. ವಸು ಎಂ.ವಿ., **ಮೌಖಿಕ ಇತಿಹಾಸ,** ಅಂಕಿತ ಪುಸ್ತಕ, ಬಸವನಗುಡಿ, ಬೆಂಗಳೂರು, ೨೦೦೪.

೮೭. ವಸುಂಧರಾ ಫಿಲಿಯೋಜಾ, **ವಿಜಯನಗರ ಸಾಮ್ರಾಜ್ಯ ಸ್ಥಾಪನೆ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯.

೮೮. ವಿರೂಪಾಕ್ಷಿ ಪೂಜಾರಹಳ್ಳಿ, **ದಲಿತರು ಮತ್ತು ಚರಿತ್ರೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೮೯. ವಿರೂಪಾಕ್ಷಿ ಪೂಜಾರಹಳ್ಳಿ, ಬೇಡ ಬುಡಕಟ್ಟಿನ ಚರಿತ್ರೆ ಮತ್ತು ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೯೦. ವೆಂಕಟಸುಬ್ಬಯ್ಯ ಜಿ. (ಸಂ.), ಕರ್ನಾಟಕ ಏಕೀಕರಣದ ಅನುಭವಗಳು, ಸಪ್ನಬುಕ್ ಹೌಸ್, ಬೆಂಗಳೂರು, ೨೦೦೭.

೯೧. ವೆಂಕಟಾಚಲಶಾಸ್ತ್ರೀ ಟಿ.ವಿ., ನಮ್ಮ ಕರ್ನಾಟಕ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೯.

೯೨. ವೆಂಕಟೇಶ ಕೆ., ಹೈದ್ರಾಬಾದ್ ಕರ್ನಾಟಕ ವರ್ತಮಾನದ ತಲ್ಲಣಗಳು, ಪಲ್ಲವ ಪ್ರಕಾಶ, ಬಳ್ಳಾರಿ, ೨೦೦೬.

೯೩. ಶಂಕರನಾರಾಯಣರಾವ್ ಎನ್.ಪಿ., ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೮.

೯೪. ಶರ್ಮಾ ಆರ್.ಎಸ್., ಶಂಕರನಾರಾಯಣರಾವ್ ಎನ್.ಪಿ. (ಅನು.), ಪ್ರಾಚೀನ ಭಾರತ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೨.

೯೫. ಶಕುಂತಲಾ ದುರಗಿ, ಮಹಿಳಾ ಸಾಹಿತ್ಯ ಮತ್ತು ಸಮಸ್ಯೆಗಳು, ಉಜ್ವಲ ಪ್ರಕಾಶನ, ಗುಲಬರ್ಗಾ, ೧೯೮೮.

೯೬. ಶಿವತಾರಕ್ ಕೆ.ಬಿ., ಕರ್ನಾಟಕ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೯೭. ಶಿವರುದ್ರಸ್ವಾಮಿ, ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ, ಪೌರಸ್ತ್ಯ ಪ್ರಕಾಶನ ತಿಪಟೂರು, ಮೈಸೂರು, ೨೦೦೪.

೯೮. ಶಿವಾನಂದ ವಿ. (ಸಂ.), ಹೈದ್ರಾಬಾದ್ ಕರ್ನಾಟಕದ ಭಾಗದ ಕನ್ನಡ ಶಿಲಾಶಾಸನಗಳು, ಕನ್ನಡ ಪೀಠ ಬನಾರಸ, ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ, ೧೯೯೨.

೯೯. ಶಿವಸುಂದರ್, ರೈತರ ಆತ್ಮಹತ್ಯೆ, ಲಂಕೇಶ್ ಪ್ರಕಾಶನ, ಬಸವನಗುಡಿ, ಬೆಂಗಳೂರು, ೨೦೦೮.

೧೦೦. ಷೇಕ್ ಅಲಿ. ಬಿ. (ಪ್ರಸಂ.), ಕರ್ನಾಟಕ ಚರಿತ್ರೆ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

೧೦೧. ಸದಾನಂದ ಕನವಳ್ಳಿ (ಸಂ.), ಮಹಾಮಾರ್ಗ, ವೀರಶೈವ ಅಧ್ಯಯನ ಸಂಸ್ಥೆ, ಗದಗ, ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ, ೧೯೯೮.

೧೦೨. ಸ್ವಾಮಿನಾಥನ್ ಎಸ್. (ಸಂ.), ರಾಷ್ಟ್ರಕೂಟರ ತಮಿಳು ಶಾಸನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೧೦೩. ಸ್ಟೀವನ್ ಕ್ವಾಡ್ರಸ್, ಭಾರತದ ಇತಿಹಾಸ, ಲಕ್ಷ್ಮೀ ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು, ೨೦೦೬

೧೦೪. ಸ್ಟೀವನ್ ಕ್ವಾಡ್ರಸ್ (ಸಂ.), ಆಧುನಿಕ ಕರ್ನಾಟಕ, ಚೇತನ್ ಬುಕ್ ಹೌಸ್, ಮೈಸೂರು, ೨೦೦೫.

೧೦೫. ಸ್ಟೀವನ್ ಕ್ವಾಡ್ರಸ್ (ಸಂ.), ದಕ್ಷಿಣ ಭಾರತದ ಇತಿಹಾಸ, ಚೇತನ್ ಬುಕ್ ಹೌಸ್, ಮೈಸೂರು, ೨೦೦೫.

೧೦೬. ಸುಂದರ ಅ. ಇತಿಹಾಸ ಪೂರ್ವ ಕರ್ನಾಟಕ ಅಥವಾ ಕರ್ನಾಟಕದ ಪ್ರಾಗೈತಿಹಾಸ, ಐ.ಬಿ.ಎಚ್. ಪ್ರಕಾಶನ, ಗಾಂಧಿನಗರ, ಬೆಂಗಳೂರು, ೧೯೭೧.

೧೦೭. ಸೂಗಯ್ಯ ಹಿರೇಮಠ (ಸಂ.), ಶಹಾಪುರ ದರ್ಶನ, ಪ್ರಕಾಶಕರು ದರ್ಶನ ಪ್ರಕಾಶನ, ಗುಲಬರ್ಗಾ, ೧೯೯೪.

೧೦೮. ಸೂರ್ಯನಾಥ ಯು. ಕಾಮತ್, ಕರ್ನಾಟಕ ರಾಜ್ಯ ಗ್ಯಾಸೇಟಿಯರ್ ಸಂಪುಟ–೧. ಕರ್ನಾಟಕ ರಾಜ್ಯ ಸರ್ಕಾರ, ೧೯೮೪.

೧೦೯. ಸೂರ್ಯನಾಥ ಯು. ಕಾಮತ್, ಕರ್ನಾಟಕ ರಾಜ್ಯ ಗ್ಯಾಸೇಟಿಯರ್ ಸಂಪುಟ–೨. ಕರ್ನಾಟಕ ರಾಜ್ಯ ಸರ್ಕಾರ, ೧೯೮೪.

೧೧೦. ಸೂರ್ಯನಾಥ ಯು. ಕಾಮತ್, ಕರ್ನಾಟಕ ರಾಜ್ಯ ಗ್ಯಾಸೇಟಿಯರ್ ಸಂಪುಟ–೩. ಕರ್ನಾಟಕ ರಾಜ್ಯ ಸರ್ಕಾರ, ೧೯೮೪.

೧೧೧. ಸೂರ್ಯನಾಥ ಕಾಮತ್, ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಎಂ.ಸಿ.ಸಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫.

೧೧೨. ಸೂರ್ಯನಾಥ ಯು. ಕಾಮತ್, ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟಗಳು, ಗೀತಾಬುಕ್ ಹೌಸ್, ಮೈಸೂರು, ೧೯೮೦.

೧೧೩. ಸ್ವಾಮಿ ರಮಾನಂದತೀರ್ಥ, ಸೂರ್ಯನಾಥ ಕಾಮತ್ (ಅನು.), ಹೋರಾಟದ ನೆನಪುಗಳು, ಗೀತಾಬುಕ್ ಹೌಸ್, ಮೈಸೂರು, ೧೯೯೭.

೧೧೪. ಸೂರ್ಯನಾಥ ಯು. ಕಾಮತ್ (ಅನು.), ಗತಕಾಲದ ಬಗ್ಗೆ ಪೂರ್ವಗ್ರಹ, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ, ೧೯೭೫.

೧೧೫.ಸೂರ್ಯನಾಥ ಕಾಮತ್, ಸ್ವಾತಂತ್ರ್ಯ ಸೂರ್ಯೋದಯ, ಕನ್ನಡ ಸಾಹಿತ್ಯ ಪರಿಷತ್ತು, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು, ೨೦೦೫.

೧೧೬.ಸೂರ್ಯನಾಥ ಕಾಮತ್, ಕರ್ನಾಟಕ ಇತಿಹಾಸದ ಹಲವು ಮುಖಗಳು, ಸುಮುಖ ಪ್ರಕಾಶನ, ಟೋಲ್‌ಗೇಟ್, ಬೆಂಗಳೂರು, ೨೦೦೬.

೧೧೭. ಹನುಮಾಕ್ಷಿ ಗೋಗಿ (ಸಂ.), ಕಲಬುರ್ಗಿ ಜಿಲ್ಲೆಯ ಶಾಸನಗಳು, ಶಿವಚಂದ್ರ ಪ್ರಕಾಶನ, ನವನಗರ, ಹುಬ್ಬಳಿ, ೧೯೯೬.

೧೧೮.ಹಿರೇಮಠ ಎಸ್.ಎಂ., ಮಹಾದಾಸೋಹಿ ದೊಡ್ಡಪ್ಪ ಅಪ್ಪ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫.

೧೧೯.ಹಿರೇಮಠ ಎಸ್.ಎಂ., ಮತ್ತು ರಾಮರೆಡ್ಡಿ ಬಿ. (ಸಂ.), ಮಹಾದಾಸೋಹಿ, ಜಿಲ್ಲಾ ವೀರಶೈವ ಸಮಾಜ (ಟ್ರಸ್ಟ್), ಕಲಬುರ್ಗಿ, ೨೦೦೬.

## ಅಪ್ರಕಟಿತ ಆಕರಗಳು

೧. ಅಜ್ಜಯ್ಯ ಸಿ., ಹೈದ್ರಾಬಾದ್ ಕರ್ನಾಟಕದ ಅಲೆಮಾರಿಗಳ ಸಮಾಜೋ ಆರ್ಥಿಕ ವ್ಯವಸ್ಥೆ, ಪಿಎಚ್.ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೨. ಆದಿವೇಶ ತಿಮ್ಮಪ್ಪಾ, ದಿ ಸ್ವದೇಶಿ ಮೋವ್‌ಮೆಂಟ್ಸ್ ಇನ್ ಕರ್ನಾಟಕ (೧೯೦೫–೧೯೧೧), ಪಿಎಚ್.ಡಿ ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೪

೩. ಆಸ್ಪರಿ ಶಿವರಾಜ 'ಆಳಂದ ತಾಲೂಕಿನಲ್ಲಿನ ಪರಿಶಿಷ್ಟ ಜಾತಿ–ಪರಿಸಿಷ್ಟ ಪಂಗಡದ ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳ ಹಾಜರಾತಿ ಕುರಿತು ಒಂದು ಅಧ್ಯಯನ' ಎಂ.ಫಿಲ್ ನಿಬಂಧ, ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾದಲ್ಲಿ ಮಂಡಿಸಿದ ೨೦೦೬–೦೭

೪. ಕುಲಕರ್ಣಿ ಎನ್.ಹೆಚ್., ಬ್ರಿಟಿಷ್ ರಿಲೇಷನ್ಸ್ ವಿತ್ ದಿ ಪ್ರಿನ್ಸಿಪಾಲಿಟಿ ಆಫ್ ಸುರುಪುರ, ಪಿಎಚ್.ಡಿ ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೨

೫. ಗಾಂಧೀಜಿ ಚಂದ್ರಪ್ಪಾ, ಡಾ.ಬಿ.ಆರ್. ಅಂಬೇಡ್ಕರ್ ಅಂಡ್ ವುಮೆನ್ ಎಂಪ್ಲಾಯ್‌ಮೆಂಟ್, ಪಿಎಚ್.ಡಿ ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೭.

೬. ಚನ್ನಮಲ್ಲಪ್ಪ ಜುಬೀರ್, ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ ಅಧ್ಯಯನ, ಪಿಎಚ್.ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, (೨೦೦೧)

೭. ಜಯದೇವಿ ಎಂ.ಗಾಯಕವಾಡ **ಹೈದ್ರಾಬಾದ ಕರ್ನಾಟಕ ವಿಮೋಚನೆ ಮತ್ತು ಕನ್ನಡ ಸಾಹಿತ್ಯ**, ಪಿಎಚ್.ಡಿ ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ, ೨೦೦೫

೮. ತಾರಮತಿ, **ಕರ್ನಾಟಕದ ಖಾಟಿಕ ಸಮುದಾಯ**, ಪಿಎಚ್.ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭-೦೮

೯. ತಿಪ್ಪೇಸ್ವಾಮಿ ಜಿ., **ಚರಿತ್ರೆ ರಚನಾಶಾಸ್ತ್ರ: ದಾವಣಗೆರೆ ಜಿಲ್ಲೆಯನ್ನು ಕುರಿತು ಅಧ್ಯಯನಗಳ ಸಮೀಕ್ಷೆ**, ಎಂ.ಫಿಲ್, ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬-೦೭

೧೦. ದೀಪಾ ತಂದೆ ಮಾಣಿಕರಾವ್, **ಮದುವೆ ಜಾನಪದೀಯ ಅಧ್ಯಯನ**, ಎಂ.ಫಿಲ್ ನಿಬಂಧ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೧೧. ದೇಶಮನ್ಯ ಜಗ್ರತಿ ಬಿ., **ಎ ಸ್ಟಡೀ ಆಫ್ ಫಿಮೇಲ್ ಅಗ್ರೀಕಲ್ಚರಲ್ ಲೇಬರ್‌ರ್ಸ್ ಇನ್ ಗುಲಬರ್ಗಾ ಡಿಸ್ಟ್ರೀಕ್ಟ್**, ಎಂ.ಫಿಲ್. ನಿಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ ೧೯೯೧

೧೨. ನಾಗಭೂಷಣ ಗೌಡ, **ಪ್ರಿನ್ಸ್‌ಸಿ ಸ್ಟೈಟ್ಸ್ ಆಫ್ ಹೈದರಾಬಾದ್ ಆಂಡ್ ಮೈಸೂರು ಪಾಲಿಟಿಕಲ್ ಮೂಮೆಂಟ್ಸ್ ಫಾರ್ ಇಂಟಿಗ್ರೇಷನ್ ಇನ್ ಟು ದಿ ಯುನಿಯನ್ ಆಂಡ್ ದಿ ಸ್ಟೇಟ್** (೧೯೩೫-೧೯೫೬) ಪಿಎಚ್.ಡಿಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೯

೧೩. ನಾಗವನಜಾ ಕೆ., **ಅರ್ಲಿ ಚಾಲುಕ್ಯ ಸ್ಕಲ್ಪ್‌ಚರ್ಸ್ ಎ ಕಲ್ಚರಲ್ ಸ್ಟಡೀ**., ಪಿಎಚ್.ಡಿಪ್ರಬಂಧ., ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೩

೧೪. ನಾನಾಗೌಢ. ಜಿ. ಮಾಲಿಪಾಟೀಲ್ **"ಗುಲಬರ್ಗಾ ಜಿಲ್ಲೆಯ ಜನಪದ ವೃತ್ತಿಗಾಯಕರು ಒಂದು ಅಧ್ಯಯನ"** ಎಂ.ಫಿಲ್ ನಿಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೪-೯೫

೧೫. ನಿಂಗಪ್ಪ ಎಸ್. **ಕಲಬುರ್ಗಿ ಜಿಲ್ಲೆಯ ಜಾತ್ರೆಗಳು-ಒಂದು ಜಾನಪದೀಯ ಅಧ್ಯಯನ** ಪಿಎಚ್.ಡಿ ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ, ೨೦೦೭

೧೬. ಪರಮೇಶ್ವರ ಸಿ.ಜಾನೆ, **ಮಂಗರವಾಡಿ ಮಹಿಳಾ ಅಧ್ಯಯನ**, ಎಂ.ಫಿಲ್ ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭-೦೮

೧೭. ಪ್ರಭಾಕರ್ ಎ.ಎಸ್., ಕರ್ನಾಟಕ ಡೊಂಬರು, ಪಿಎಚ್.ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೧೮. ಪ್ರಹ್ಲಾದ್ ರೆಡ್ಡಿ ಬಿ. ಹೈದ್ರಾಬಾದ್ ಕರ್ನಾಟಕ ಜೈನ ಕೇಂದ್ರಗಳು, ಪಿ.ಎಚ್‌ಡಿ ಪ್ರಬಂಧ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೯

೧೯. ಬಡಿಗೇರ್ ವಿ.ಎಸ್., ಉತ್ತರ ಕರ್ನಾಟಕ ಗೀತೆ ಮೇಳಗಳು, ಪಿಎಚ್.ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫

೨೦. ಬಲಭೀಮ ಸಿ. ಆರಿಗೇರಿ ಅಫಜಲಪೂರ ತಾಲೂಕಾ : ಒಂದು ಸಾಂಸ್ಕೃತಿಕ ಅಧ್ಯಯನ, ಎಂ.ಫಿಲ್ ನಿಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೩-೦೪

೨೧. ಬಸವರಾಜ ಹಿರೇಮಠ, ಗುಲಬರ್ಗಾ ಜಿಲ್ಲೆಯ ಬೈಲು ಪತ್ತಾರರು, ಎಂ.ಫಿಲ್. ನಿಬಂಧ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೨೨. ಭೀಮರಾಮ ಎಲ್. ಲಿಂಗೇರಿ, ಯಾದಗಿರಿ-ಒಂದು ಸಾಂಸ್ಕೃತಿಕ ಅಧ್ಯಯನ, ಪಿಎಚ್.ಡಿ ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೬.

೨೩. ಮಲ್ಲಿಕಾರ್ಜುನ ದ. ಜಾಬಾ, ಗುಲಬರ್ಗಾ ಜಿಲ್ಲೆಯ ದಲಿತ ತತ್ವಪದಕಾರರು : ಒಂದು ಅಧ್ಯಯನ, ಪಿಎಚ್.ಡಿ ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೨

೨೪. ಮಲ್ಲಿಕಾರ್ಜುನ ಸಿ. ಬಾಗೋಡಿ, ಸುರಪುರ ಶೈಲಿಯ ಚಿತ್ರಕಲೆ ಒಂದು ಅಧ್ಯಯನ, ಪಿಎಚ್.ಡಿ ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೬

೨೫. ಮಹೇಶ್‌ಕುಮಾರ್ ಎಸ್. ಸಂಕನೂರ, ಗುಲಬರ್ಗಾ ಎಂ.ಎಸ್.ಕೆ.ಮಿಲ್ : ಚಾರಿತ್ರಿಕ ಅಧ್ಯಯನ, ಎಂ.ಫಿಲ್. ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೩

೨೬. ಮೋನಪ್ಪ ಸಾಯಬಣ್ಣಾ, ಕಲಬುರ್ಗಿ ಜಿಲ್ಲೆಯ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪಿಎಚ್.ಡಿ ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೮

೨೭. ಮಂಜುಳಾ ಬಿ. ಚಿಂಚೋಳಿ, ಡಿಪ್ರೆಸ್ಡ್ ಕ್ಲಾಸೇಸ್ ಇನ್ ಹೈದರಾಬಾದ್ ಕರ್ನಾಟಕ ಏರಿಯಾ, ಪಿಎಚ್.ಡಿ ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೮೯

೨೮. ರಾಜ ಎಮ್., ಫ್ರೀಡಮ್ ಫೈಟರ್ಸ್ ಆಫ್ ಗುಲಬರ್ಗಾ ಡಿಸ್ಟ್ರಿಕ್ಟ್, ಪಿಎಚ್.ಡಿ ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೬

೨೯. ರಾಜಶೇಖರ ವಿ. ಬೀರನಳ್ಳಿ, ಇಂಪ್ಯಾಕ್ಟ್ ಆಫ್ ಬ್ಯಾಂಕ್ ಇರಿಗೇಷನ್ ಆನ್ ಅಗ್ರೀಕಲ್ಚರ್ ಎ ಕೇಸ್ ಸ್ಟಡೀ ಆಫ್ ಗುಲಬರ್ಗಾ ಡಿಸ್ಟ್ರೀಕ್ಟ್, ಪಿಎಚ್.ಡಿ. ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೦

೩೦. ವಿಜಯಕುಮಾರ. ಹೆಚ್ ಸಾಲಿಮನಿ, ಇರ್ಯಾಡಿಕೇಶನ್ ಆಫ್ ಅನ್ ಟಚ್ಚಬಿಲಿಟಿ ಇನ್ ಪೋಸ್ಟ್ ಇಂಡಿಪೆಂಡೆನ್ಸ್ ಕರ್ನಾಟಕ ೧೯೪೭-೧೯೮೦ ಪಿಎಚ್.ಡಿ ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೪

೩೧. ವಿದ್ಯಾವತಿ ಬಸವರಾಜ ಪಾಟೀಲ್, ವಚನ ಸಾಹಿತ್ಯ ಸ್ತ್ರೀವಾದಿ ನೆಲೆಗಳು, ಪಿಎಚ್.ಡಿ ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೨

೩೨. ವೆಂಕಟೇಶ ಜಿ.ಎಂ., ಚರಿತ್ರೆ ಲೇಖನ ಶಾಸ್ತ್ರ: ಕೋಲಾರ ಪ್ರದೇಶ ಅಧ್ಯಯನ, ಎಂ.ಫಿಲ್ ನಿಂಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪-೦೫

೩೩. ಶುಭಾ, ಸುರಪುರ: ವಿಮೋಚನಾ ಹೋರಾಟ, ಎಂ.ಫಿಲ್ ನಿಂಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೩೪. ಶ್ರೀದೇವಿ ಎಸ್. ಹರ್‌ವಾಲ, ಅಗ್ರಿಕಲ್ಚರಲ್ ಡೆವಲಪ್‌ಮೆಂಟ್ ಇನ್ ಗುಲಬರ್ಗಾ ಡಿಸ್ಟ್ರೀಕ್ಟ್, ಎಂ.ಫಿಲ್ ನಿಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೪

೩೫. ಶ್ರೀನಾಥ ಸುಭಾಷ್, ಅಲೆಮಾರಿ ಸಮುದಾಯಗಳ ಸಮಾಜಿಕ ಅಧ್ಯಯನ, ಎಂ.ಫಿಲ್ ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೩೬. ಶಿವರಾಮು, ದಲಿತ ಕಾದಂಬರಿಗಳಲ್ಲಿ ಸಾಂಸ್ಕೃತಿಕ ಲೋಕ, ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾದಲ್ಲಿ ಮಂಡಿಸಿದ ಪಿಎಚ್.ಡಿ ಪ್ರಬಂಧ ೨೦೦೪

೩೭. ಸಂಜೀವ ಕುಮಾರ ಟಿ., ಅಡ್ಮಿನಿಸ್ಟ್ರೇಟಿವ್ ಸಿಸ್ಟಮ್ ಅಂಡರ್ ದಿ ಬಹಮನಿ ಆಂಡ್ ವಿಜಯನಗರ ಎ ಕಂಪರೇಟಿವ್ ಸ್ಟಡೀ, ಪಿಎಚ್.ಡಿ ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೭

೩೮. ಸಂತೋಷ್ ಜಗನಾಥ, ಗ್ರೋಥ್ ಆ್ಯಂಡ್ ಡೆವಲಪ್‌ಮೆಂಟ್ ಆಫ್ ರೈಲ್ವೆ ಅಂಡರ್ ನಿಜಾಮ್ಸ್ ಫ್ರಮ್ ೧೯೦೦-೧೯೪೮, ಪಿ.ಎಚ್.ಡಿ. ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೬.

೩೯. ಸಿಂಧೆ ಜಗನಾಥ ಆರ್., ಆರ್ಗನೈಜೇಷನ್ಸ್ ಆಫ್ ಸೆಡ್ಯೂಲ್ಡ್ ಕಾಸ್ಟ್ ಆ್ಯಂಡ್ ಸೋಷಿಯಲ್ ಚೇನ್ಜ್ : ಎ ಶೋಷಿಯಾಲಾಜಿಕಲ್ ಸ್ಟಡಿ ಆಫ್ ಗುಲಬರ್ಗಾ, ಪಿಎಚ್.ಡಿ ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೨

೪೦. ಸುಧೀರ್ ಡಿ.ಮುಲೆ, ಗುಲಬರ್ಗಾ ನಗರದ ಅಂತರ್ಜಾತಿ ವಿವಾಹಿತರು ಒಂದು ಸಮಾಜಶಾಸ್ತ್ರೀಯ ಅಧ್ಯಯನ, ಪಿಎಚ್.ಡಿ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೪೧. ಸುಭಾಷ್ ಜಿ. ಪಾರಾ, ಗುಲಬರ್ಗಾ ಜಿಲ್ಲೆಯ ಬಯಲಾಟಗಳು, ಎಂ.ಫಿಲ್. ನಿಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೮೯

೪೨. ಸುಭಾಷಚಂದ್ರ ದೊಡ್ಡಮನಿ, ಹೈದ್ರಾಬಾದ್ ವಿಮೋಚನೆ ಆಂದೋಲನದಲ್ಲಿ ಕಲಬುರ್ಗಿ ಜಿಲ್ಲೆ ಶಿಬಿರಗಳ ಪಾತ್ರ, ಎಂ.ಫಿಲ್. ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೪೩. ಸುಮಿತ್ರಾಬಾಯಿ ಎಸ್. ನಿರ್ಣಿ, ವುಮೆನ್ಸ್ ರೋಲ್ ಇನ್ ಕರ್ನಾಟಕ ಫ್ರೀಡಮ್ ಸ್ಟ್ರೀಗಲ್ (೧೯೦೦-೧೯೪೮), ಪಿಎಚ್.ಡಿ ಪ್ರಬಂಧ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೨

೪೪. ಸೂರೆ ಸಾವಿತ್ರಿಬಾಯಿ ಕಾಶಪ್ಪ, ಬೀದರ್ ಜನಪದ ಹಾಡುಗಳ ಒಂದು ಅಧ್ಯಯನ, ಎಂ.ಫಿಲ್ ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮.

೪೫. ಹಾರಾಳು ಮಹಾಬಲೇಶ್ವರ, ಚರಿತ್ರೆ ರಚನಾಶಾಸ್ತ್ರ: ಬಳ್ಳಾರಿ ಪ್ರದೇಶದ ಅಧ್ಯಯನ, ಎಂ.ಫಿಲ್ ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

# ಕರ್ನಾಟಕ ರಾಜ್ಯ



# ಅವಿಭಜಿತ ಗುಲಬರ್ಗಾ ಜಿಲ್ಲೆ



